# ಮುನ್ನುಡಿ

ನಾನು ಮೈಸೂರಿಗೆ ಬಂದಾಗಲೆಲ್ಲ ನನ್ನ ಜೀವನದಲ್ಲಿ ಏನಾದರೊಂದು ಮಹತ್ತರವಾದ ಘಟನೆ ಜರುಗುತ್ತಾ ಬಂದಿದೆ. ಮೊಟ್ಟಮೊದಲಿಗೆ ಹದಿನೇಳು ವರ್ಷಗಳ ಹಿಂದೆ ನಾನು ನನ್ನ ಸರ್ಕಾರಿ ನೌಕರಿಯ ಜೀವನವನ್ನು ಮೈಸೂರಿನಲ್ಲಿ ಆರಂಭಿಸಿದಾಗ ಅಕಸ್ಮಾತ್ತಾಗಿ ನನ್ನ ಕಣ್ಣಿಗೆ ಬಿದ್ದ ಸರ್ ವಾಲ್ಟರ್ ಸ್ಕಾಟ್ ಕವಿಯ 'ಕೆನಿಲ್‌ವರ್ತ್' ಎಂಬ ಗ್ರಂಥ ಕನ್ನಡಕ್ಕೆ ಅನುವಾದವಾಯಿತು. ಆದರೆ ಅದು ಬೆಳಕು ಕಾಣದೆ ನನ್ನೊಡನೆ ಹನ್ನೆರಡು ವರ್ಷಗಳು ಅಲೆದಾಡಿದ ಮೇಲೆ ನಾನು ಪುನಃ ಮೈಸೂರಿಗೆ ಬಂದಾಗ ಬೆಳಕು ಕಂಡಿತು. ಅದನ್ನು ಓದಿದ ಸಹೃದಯರು ನಾಲ್ಕು ಮೆಚ್ಚಿಕೆಯ ಮಾತುಗಳನ್ನಾಡಿದರು. ಇದರಿಂದ ಉತ್ತೇಜಿತನಾದ ನಾನು 'ಮಾರ್ಕೊ ಪೋಲೋ ಪ್ರವಾಸ ಕಥನ' ಎಂಬ ಪುಸ್ತಕವನ್ನು ಪ್ರಕಟಿಸಿದೆ. ಅದಾದದ್ದೂ ಮೈಸೂರಿನಲ್ಲಿಯೇ. ಪ್ರವಾಸ ಸಾಹಿತ್ಯಕ್ಕೆ ಕೈ ಹಾಕಿದ ನನಗೆ ಜೇನುತುಪ್ಪ ತುಂಬಿದ ಹುಟ್ಟಿಗಳೇ ಕೈಗೆ ಸಿಕ್ಕಂತಾಯಿತು. ಆ ಹುಟ್ಟಿಗಳನ್ನು ಹಿಂಡಿ 'ಪ್ರವಾಸಿಗಳು ಕಂಡ ಭಾರತ' ಎಂಬ ಸಾವಿರಾರು ಪುಟಗಳ ಉದ್ಗ್ರಂಥವನ್ನು ಸಿದ್ಧಪಡಿಸಿದೆ. ಈ ಗ್ರಂಥ ಮೈಸೂರು ವಿಶ್ವವಿದ್ಯಾನಿಲಯದ ಕೃಪೆಯಿಂದ ಇನ್ನೇನು ಪ್ರಕಟವಾಗುವುದರಲ್ಲಿದೆ. ಇದಾದನಂತರ ಹಲವಾರು ವರ್ಷಗಳು ಬೇರೆ ಕಡೆ ಅಲೆದಾಡಿ ಮತ್ತೊಮ್ಮೆ ಮೈಸೂರಿಗೆ ಬಂದೆ. ಈಗ 'ಸರೋಜಿನಿದೇವಿ' ಎಂಬ ಈ ಗ್ರಂಥ ಹೊರಬೀಳುತ್ತಿದೆ. ಇದನ್ನೆಲ್ಲ ನೋಡಿದರೆ ಸರಸ್ವತಿಯು ತವರೂರಾದ ಮೈಸೂರು ನೌಕರಿಯಗಾಣದಲ್ಲಿ ಎತ್ತಿನಂತೆ ತಿರುಗುತ್ತಿರುವ ನನ್ನ ಮೇಲೂ ಅಲ್ಪಸ್ವಲ್ಪ ಕೃಪೆ ತೋರಿದಂತೆ ಕಾಣುತ್ತದೆ. ಈ ಕೃಪೆಯನ್ನು ಸಾರ್ಥಕ ಮಾಡಿಕೊಳ್ಳಲು ಹೊರಟು ಈ ಗ್ರಂಥವನ್ನು ಓದುಗರ ಮುಂದೆ ಇಡುತ್ತಿದ್ದೇನೆ.

ಸರ್ಕಾರಿ ನೌಕರಿಯಲ್ಲಿರುವವನಿಗೆ ಸಾಹಿತ್ಯಾಭಿರುಚಿ ಹುಟ್ಟುವುದು, ಹುಟ್ಟಿದರೂ ಕಾಲ ದೊರೆಯುವುದು, ದೊರೆತರೂ ಓದುವುದು ಬರೆಯುವುದು ಕಷ್ಟ. ದೇವರ ದಯದಿಂದ ನನಗೆ ಅಷ್ಟಿಷ್ಟು ಸಾಹಿತ್ಯಾಭಿರುಚಿ ಇದೆ. ಕಾಲ ಅಲ್ಪ ಸ್ವಲ್ಪ. ಓದಿದರೂ ಓದಬಹುದು. ಆದರೆ ಬರೆಯಲು

ಬೇಕಾದ ಭಾಷೆ ಮಾತ್ರ ಸೊನ್ನೆ. ಸೊನ್ನೆ ಕೈಗೆ ಸಿಕ್ಕಿದರೆ ಸ್ವರ್ಗವನ್ನೇ ಸೃಷ್ಟಿಮಾಡಿಕೊಳ್ಳುವ ಕವಿಯೂ ನಾನಲ್ಲ, ಕಳ್ಳನೂ ನಾನಲ್ಲ. ಬಹಳ ಅಂದರೆ ಅದನ್ನು ಇಂಗ್ಲೀಷಿನ ಮೂರು ಅಥವಾ ಆರು ಮಾಡಬಲ್ಲ ಸಾಮಾನ್ಯ ನಾನು. ಈ 'ಮೂರಕ್ಕೆ ಇಳಿಯದ ಆರಕ್ಕೆ ಏರದ' ಅಲ್ಪ ಶಕ್ತಿಯನ್ನು ಉಪಯೋಗಿಸಿಕೊಂಡು ಸಿಕ್ಕಷ್ಟು ಕಾಲದಲ್ಲಿ ನನ್ನ ಕೈಲಾದು ದನ್ನು ಮಾಡಬೇಕೆಂಬುದೇ ನನ್ನ ಹಂಬಲ. ಈ ಹಂಬಲದ ಪರಿಣಾಮವೇ ಈ ಗ್ರಂಥ.

.ಸರೋಜಿನಿದೇವಿಯ ಜೀವನಚರಿತ್ರೆಯನ್ನು ಬರೆಯಲು ಸೂಚನೆ ಕೊಟ್ಟವರು ನನ್ನ ಪ್ರಿಯಮಿತ್ರರಾದ ದೇ. ಜವರೇಗೌಡರು. ಸುಲಭವೆಂದು ಆ ಕೆಲಸಕ್ಕೆ ಕೈಹಾಕಿದ ನಾನು ಬರೆದು ಮುಗಿಸಬೇಕಾದರೆ ಬಹಳ ಪರದಾಡ ಬೇಕಾಯಿತು. ಇಡೀ ಭಾರತದಲ್ಲಿ ಸರೋಜಿನಿಯ ಪೂರ್ಣ ಜೀವನವನ್ನು ಸಮಗ್ರವಾಗಿ ಚಿತ್ರಿಸುವ ಗ್ರಂಥ ಯಾವ ಭಾಷೆಯಲ್ಲಿಯೂ ಇಲ್ಲ. ಆದಕಾರಣ ಹತ್ತಾರು ಗ್ರಂಥಗಳನ್ನು ಅವಲೋಕಿಸಿ, ನಾಲ್ಕಾರು ಜನರಿಂದ ವಿಷಯ ಸಂಗ್ರಹಣಮಾಡಿ ಹಿಡಿದ ಕೆಲಸವನ್ನು ಸಾರ್ಥಕಮಾಡಿಕೊಳ್ಳಬೇಕಾಯಿತು. ನನ್ನ ಪರದಾಟವನ್ನು ಬರೆದರೇ ಒಂದು ಗ್ರಂಥವಾಗುತ್ತದೆ. ಅಂತೂ ಆ ಮಹಾಮಹಿಳೆಯ ಚಿತ್ರವನ್ನು ನನ್ನ ಕೈಲಾದಮಟ್ಟಿಗೆ ಚಿತ್ರಿಸಿದ್ದೇನೆ. ನನ್ನ ಕೆಲಸ ಸಮರ್ಪಕವಾಗಿದೆಯೆಂದು ನಾ ಹೇಳಿಕೊಳ್ಳಲಾರೆ. ನನಗಿಂತ ಶಕ್ತರು ಆ ಕೆಲಸ ಮಾಡಬೇಕಾಗಿತ್ತೋ ಏನೋ. ಆದರೆ ಯಾರೂ ಮಾಡದೇ ಹೋದರೂ ಹೋಗಬಹುದು. ಮನುಷ್ಯನಿಗೆ ಮರವು ಹೆಚ್ಚು. ಆ ಮರವಿನಲ್ಲಿ ಸರೋಜಿನಿಯಂತಹ ವ್ಯಕ್ತಿ ಕಾಣೆಯಾಗಬಾರದು. ಸರೋಜಿನಿದೇವಿಯ ಮೇಲೆ ಸರಿಯಾದ ಗ್ರಂಥ ಕನ್ನಡದಲ್ಲಿಲ್ಲ. ಅದನ್ನು ಮನಗಂಡು ನ್ಯೂನತೆ ಗಳಿದ್ದರೂ ಚಿಂತೆಯಿಲ್ಲ, ವಿಷಯ ಸಂಗ್ರಹಣೆ ಮಾಡಿದ್ದರೆ ನಾಳೆ ಮತ್ತೊಬ್ಬರು ಈ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಬಲ್ಲರೆಂದು ಭಾವಿಸಿ ಹಿಡಿದ ಕೆಲಸವನ್ನು ಹಾಗೂ ಹೀಗೂ ಪೂರ್ತಿ ಮಾಡಿದೆ. ಇಷ್ಟು ಮಾತ್ರ ಹೇಳಬಲ್ಲೆ. ಇಡೀ ಭಾರತದ ಯಾವ ಭಾಷೆಯಲ್ಲಿಯೂ ಸರೋಜಿನಿಯ ಬಗ್ಗೆ ಇಷ್ಟು ವಿವರವಾದ, ಇಷ್ಟು ವ್ಯಾಪ್ತಿಯುಳ್ಳ ಗ್ರಂಥ ಇಲ್ಲವೇ ಇಲ್ಲ. ನನ್ನಿಂದ ಈ ಕೆಲಸ ಮಾಡಿಸಿದ್ದಕ್ಕಾಗಿ ನನ್ನ ಮಿತ್ರರಿಗೆ ನಾನು ಕೃತಜ್ಞ.

ಸಹೃದಯರು ಓದಿ ಒಪ್ಪಿದರೆ ಸಂತೋಷ. ತಪ್ಪು ಕಂಡರೆ ಅಸಂತೋಷವೇನಿಲ್ಲ, ಏಕೆಂದರೆ ತಪ್ಪಿಲ್ಲದಂತೆ ಬರೆಯುವ ವೃತ್ತಿ ನನ್ನದಲ್ಲ.

ಗ್ರಂಥವನ್ನು ಬಹು ಸ್ವಲ್ಪ ಕಾಲದಲ್ಲಿ ಅಂದವಾಗಿ ಮುದ್ರಿಸಿಕೊಟ್ಟಿರುವ ಶಕ್ತಿ ಎಲೆಕ್ಟ್ರಿಕ್ ಪ್ರೆಸ್ಸಿನ ರಾ. ವೆಂ. ಶ್ರೀಯವರಿಗೆ ನನ್ನ ವಂದನೆಗಳು.

ಮೈಸೂರು
ತಾ|| ೧೪—೧—೧೯೫೯

**ಎಚ್. ಎಲ್. ನಾಗೇಗೌಡ**

# ಪರಿವಿಡಿ

# ಚಿತ್ರಗಳು

ಸರೋಜಿನಿದೇವಿ

ಅಘೋರನಾಥ ಚಟ್ಟೋಪಾಧ್ಯಾಯ

ವರದಸುಂದರೀದೇವಿ

" ಹದಿನಾರು ವರ್ಷದ ಮಗು "

ದಂಡಿ ಸತ್ಯಾಗ್ರಹದಲ್ಲಿ ದಂಡನಾಯಕಿಯಾಗಿ

ಕೊನೆಯ ವಂದನೆ

ಸರೋಜಿನಿದೇವಿಯ ಹಸ್ತಾಕ್ಷರ

# ೧. ಬೇಕಾಗಿರುವುದು ಗಂಡಸಲ್ಲ, ಹೆಂಗಸು

ಶ್ರೀ ರಾಮಕೃಷ್ಣ ಪರಮಹಂಸರ ಪಟ್ಟಶಿಷ್ಯರಾದ ಸ್ವಾಮಿ ವಿವೇಕಾನಂದರು ಕ್ರಿ. ಶ. ೧೮೯೭ರಲ್ಲಿ ಸೋದರಿ ನಿವೇದಿತಾ ಎಂಬ ನಾಮದಿಂದ ಪ್ರಸಿದ್ಧರಾದ ಅವರ ಶಿಷ್ಯೆ ಮಿಸ್ ಮಾರ್ಗರೆಟ್ ನೋಬಲ್ ಎಂಬ ಇಂಗ್ಲಿಷ್ ಮಹಿಳೆಗೆ ಈ ರೀತಿ ಕಾಗದ ಬರೆದರು : " ನಾನು ಮನಬಿಚ್ಚಿ ನಿನಗೆ ಹೇಳುತ್ತೇನೆ, ನಿವೇದಿತಾ ; ನಿನಗೆ ಭಾರತದಲ್ಲಿ ಭವ್ಯ ಭವಿಷ್ಯವಿದೆಯೆಂದು. ನಮಗಿಂದು ಬೇಕಾಗಿರುವುದು ಗಂಡಸಲ್ಲ, ಹೆಂಗಸು. ಭಾರತೀಯರಿಗಾಗಿ ಅದರಲ್ಲಿಯೂ ಹೆಂಗಸರಿಗಾಗಿ ಕೆಲಸಮಾಡಬಲ್ಲ ನಿಜವಾದ ಸಿಂಹಿಣಿ ಭಾರತಕ್ಕಿಂದು ಬೇಕಾಗಿದೆ. ಸದ್ಯದಲ್ಲಿ ಭಾರತ ಅಂಥ ಮಹಿಳೆಯರನ್ನು ಸೃಷ್ಟಿ ಮಾಡಲಾರದು. ಆದ್ದರಿಂದ ಅವರನ್ನು ಹೊರಗಡೆಯಿಂದ ಎರವು ತೆಗೆದುಕೊಳ್ಳಬೇಕಾಗಿದೆ. ವಿದ್ಯೆ, ನಿಷ್ಕಪಟ ವರ್ತನೆ, ಸ್ವಚ್ಛತೆ, ಅಮರ ಪ್ರೇಮ, ನಿರ್ಧಾರಶಕ್ತಿ ಇವೆಲ್ಲಕ್ಕಿಂತ ಹೆಚ್ಚಾಗಿ ಉನ್ನತ ಕುಲ ಇವು ನಿನ್ನಲ್ಲಿವೆ. ಇಂಥ ಸ್ತ್ರೀ ನಮಗಿಂದು ಬೇಕಾಗಿದೆ."

ಆದರೆ ವಿವೇಕಾನಂದರು ಆಶಿಸಿದ ಸ್ತ್ರೀಯೊಬ್ಬಳ ಜನ್ಮ ಅಂದಿಗೆ ಭಾರತದಲ್ಲಿಯೇ ಹದಿನೆಂಟು ವರ್ಷಗಳ ಮುನ್ನವೇ ಆಗಿತ್ತು. ಭಾರತದ ಪುಣ್ಯದ ಪೂರ್ವದಿಗಂತದಲ್ಲಿ ನವ ದಿನಮಣಿಯೊಂದು ಮೂಡಿ ಆಗತಾನೇ ಮುಂಬೆಳಗು ಸೂಚಿಸುತ್ತಿತ್ತು. ಭಾರತಕ್ಕೆ ಬೇಕಾಗಿದ್ದುದು ಗಂಡಸಲ್ಲ, ಹೆಂಗಸು ಎಂದು ವಿವೇಕಾನಂದರು ಹಾರೈಸಿದ್ದಂತೆ ಅಂತಹ ಹೆಂಗಸೊಬ್ಬಳು ಜನ್ಮಧಾರಣೆ ಮಾಡಿದ್ದಳು. ಅವಳೇ ಭಾರತದ ಕೋಗಿಲೆಯೆಂದು, ಸುಪ್ರಸಿದ್ಧ ವಾಗ್ಮಿಯೆಂದು ಭಾರತದ ಸ್ವಾತಂತ್ರ್ಯಕ್ಕೆ ನಾಂದಿ ಹಾಡಿದ ವೀರರಮಣಿಯೆಂದು ಹೆಸರಾದ ಸಿಂಹಿಣಿ ಸರೋಜಿನಿ. ೧೮೭೯ನೇ ಫೆಬ್ರವರಿ ಹದಿಮೂರನೇ ತಾರೀಕು ಆಕೆಯ ಜನ್ಮದ ಪುಣ್ಯದಿನವಾಯಿತು.

# ೨. ತಂದೆ-ತಾಯಿ

ಸರೋಜಿನಿಯ ತಂದೆತಾಯಿಯರ ಹೆಸರು ಅಘೋರನಾಥ ಚಟ್ಟೋಪಾಧ್ಯಾಯ ಮತ್ತು ವರದಸುಂದರೀದೇವಿ ಎಂದು. ತಂದೆತಾಯಿಯರ ಹೆಸರು ಕೇಳಿ ಸರೋಜಿನಿಯ ಜನ್ಮ ಬಂಗಾಳದಲ್ಲಿ ಆಗಿರಬೇಕೆಂದು ಯಾರಾದರೂ ಊಹಿಸಬಹುದು. ಆದರೆ ಆಕೆಯ ಜನ್ಮವಾದದ್ದು ಹೈದರಾಬಾದಿನಲ್ಲಿ. ಮುಸ್ಲಿಂ ಸಂಸ್ಕೃತಿಯ ಕೇಂದ್ರವಾದ ನೈಜಾಮರ ರಾಜ್ಯದಲ್ಲಿ. ಚಟ್ಟೋಪಾಧ್ಯಾಯರೇನೋ ಮೊದಲಿಗೆ ಬಂಗಾಳದವರೇ. ಬಂಗಾಳದ ಡೆಕ್ಕಾ ಜಿಲ್ಲೆಯ ಬ್ರಾಹ್ಮಣಗಾವ್ ಎಂಬ ಊರಿನವರು. ಅವರ ಮನೆತನದ ಹೆಸರು ಛಟರ್ಜಿ ಎಂದು. ಬ್ರಾಹ್ಮಣಗಾವ್ ಈಗ ಪಾಕಿಸ್ಥಾನಕ್ಕೆ ಸೇರಿದ ಪೂರ್ವ ಬಂಗಾಳದಲ್ಲಿದೆ. ಛಟರ್ಜಿ ಮನೆತನ ನೂರಾರು ವರ್ಷಗಳ ಕಾಲದಿಂದಲೂ ಪಾಂಡಿತ್ಯಕ್ಕೆ ಹೆಸರಾದ ಮನೆತನ. ವೇದೋಪನಿಷತ್ತುಗಳಲ್ಲಿ ಅಗಾಧವಾದ ವಿದ್ವತ್ತು ಇತ್ತು. ಸಂಸ್ಕೃತದಲ್ಲಿ ವಿಶೇಷ ಜ್ಞಾನವಿತ್ತೆಂದು ಹೇಳಬೇಕಾಗಿಲ್ಲ. ಕಲಿತಿದ್ದುದನ್ನು ಅನ್ಯರಿಗೆ ಬೋಧಿಸುವ ಕೆಲಸವನ್ನು ಅವರ ಮನೆತನದವರು ಮಾಡುತ್ತಿದ್ದರು. ಹೀಗಾಗಿ ಇಡೀ ಮನೆತನಕ್ಕೆ ಬಂಗಾಳದಲ್ಲಿ ಬಹಳ ಗೌರವವಿತ್ತು.

ಇಂತಹ ವಂಶದಲ್ಲಿ ಜನಿಸಿದ ಅಘೋರನಾಥರು ಪ್ರತಿಭಾವಂತರಾಗಿಯೇ ಜನಿಸಿದರೆಂದು ಹೇಳಬೇಕಾಗಿಲ್ಲ. ೧೮೫೧ರಲ್ಲಿ ಜನ್ಮತಾಳಿದ ಅವರು ಅವರ ತಂದೆಯ ನಾಲ್ಕು ಮಕ್ಕಳಲ್ಲಿ ಕೊನೆಯವರಾಗಿದ್ದರು. ತಂದೆಯಿಂದ ವೇದೋಪನಿಷತ್ತುಗಳ ಸಂಸ್ಕಾರದ ಜೊತೆಗೆ ಅವರು ಇಂಗ್ಲೀಷಿನ ಅಭ್ಯಾಸವನ್ನು ಮಾಡಿದರು. ಆಗ ವಿಕ್ಟೋರಿಯಾ ರಾಣಿ ಭಾರತದ ಚಕ್ರವರ್ತಿನಿಯಾಗಿದ್ದರು. ಆ ಯುಗದಲ್ಲಿ ಇಂಗ್ಲೀಷೇ ಸರ್ವಮಾನ್ಯವಾಗಿತ್ತು. ಅರ್ಧಂಬರ್ಧ ಇಂಗ್ಲಿಷ್ ಬರುತ್ತಿದ್ದ ಬಟ್ಲರನಿಗಿದ್ದ ಮರ್ಯಾದೆ ಇಂಗ್ಲೀಷ್ ಕಲಿಯದ ನಮ್ಮ ಪಂಡಿತೋತ್ತಮರಿಗೆ ಇರುತ್ತಿರಲಿಲ್ಲ. ಆದ್ದರಿಂದ ಯಾರಾದರೂ ಮಾನ್ಯತೆ ಪಡೆಯಬೇಕಾಗಿದ್ದಲ್ಲಿ ಇಂಗ್ಲಿಷ್ ಕಲಿಯಲೇಬೇಕಾಗಿತ್ತು. ಅಘೋರನಾಥರು ಆ ಭಾಷೆಯನ್ನು ಕಲಿತರು. ಇಂಗ್ಲಿಷನ್ನಲ್ಲದೆ ಅವರು ಪುರಾತನ ಭಾಷೆಗಳಾದ ಹೀಬ್ರು ಮತ್ತು ಗ್ರೀಕ್ ಭಾಷೆಗಳನ್ನೂ ಕಲಿತರು;



ತಂದೆ ಅಘೋರನಾಥ ಚಟ್ಟೋಪಾಧ್ಯಾಯ

ಆಧುನಿಕ ಭಾಷೆಗಳಾದ ಫ್ರೆಂಚ್ ಮತ್ತು ಜರ್ಮನ್ ಭಾಷೆಗಳ ಅಧ್ಯಯನ ಮಾಡಿದರು. ಅವರಿಗೆ ಓದುವುದೆಂದರೆ ಸಿಹಿ ತಿಂಡಿ ತಿನ್ನುವಷ್ಟು ಆಸೆ. ವಯಸ್ಸಾದಮೇಲಂತೂ ಒಂದೊಂದು ದಿನ ಒಂದೊಂದು ಹೊಸ ವಿಷಯ ಕಲಿಯದಿದ್ದರೆ ಆ ದಿನ ವ್ಯರ್ಥವೆಂದು ಅವರು ಭಾವಿಸುತ್ತಿದ್ದರು. ಗಂಟೆ ಗಂಟೆಗೂ ಮನುಷ್ಯ ತನ್ನ ಜ್ಞಾನವನ್ನು ಹೆಚ್ಚಿಸಿಕೊಳ್ಳದಿದ್ದರೆ ಅವನು ಪ್ರಾಣಿಗೆ ಸಮಾನವೆಂದು ಹೇಳುತ್ತಿದ್ದರು. ಓದುವುದರಲ್ಲಿ ಇಡೀ ತರಗತಿಗೆ ಅವರು ಮೊದಲನೆಯವರು. ದೊಡ್ಡವರಾದಮೇಲೂ ಅವರು ಯಾರಿಗೂ ಕಡಮೆ ಇರಲಿಲ್ಲವಂತೆ. ತಂದೆಯ ಬಗ್ಗೆ ಸರೋಜಿನಿ ಹೀಗೆ ಹೇಳಿಕೊಂಡಿದ್ದಾಳೆ: "ನನಗೆ ತಿಳಿದಮಟ್ಟಿಗೆ ಇಡೀ ಭಾರತದಲ್ಲಿ ಅವರಷ್ಟು ಪಾಂಡಿತ್ಯವುಳ್ಳವರು ಯಾರೂ ಇರಲಿಲ್ಲ. ಹಾಗೆಯೇ ಅವರಷ್ಟು ಪ್ರೀತಿಪಾತ್ರರು ಯಾರೂ ಇರಲಿಲ್ಲವೆಂದೇ ನನ್ನ ಭಾವನೆ."

ಅಘೋರನಾಥರು ಸಾಹಿತ್ಯಪಂಡಿತರಷ್ಟೇ ಅಲ್ಲ, ವಿಜ್ಞಾನದ ಉಪಾಸಕರೂ ಆಗಿದ್ದರು. ಅದರಲ್ಲಿಯೂ ರಸಾಯನ ಶಾಸ್ತ್ರದ ಬಗ್ಗೆ ಅವರಿಗೆ ಹೆಚ್ಚು ಮಮತೆ.

ಕಲ್ಕತ್ತಾ ಪ್ರೆಸಿಡೆನ್ಸಿ ಕಾಲೇಜಿನಲ್ಲಿ ವಿದ್ಯಾಭ್ಯಾಸವನ್ನು ಮುಗಿಸಿಕೊಂಡ ಅವರು ಮುನ್ನೂರು ಪೌಂಡುಗಳ ಗಿಲ್‌ಕ್ರೈಸ್ಟ್ ವಿದ್ಯಾರ್ಥಿ ವೇತನವನ್ನು ಪಡೆದು ಎಡಿನ್‌ಬರೋ ವಿಶ್ವವಿದ್ಯಾನಿಲಯದಲ್ಲಿ ಬಿ. ಎಸ್‌ಸಿ., ತರಗತಿಯನ್ನು ಸೇರಿದರು. ಬಿ. ಎಸ್‌ಸಿ. ಯಲ್ಲಿ ಮೊಟ್ಟಮೊದಲನೆಯವರಾಗಿ ತೇರ್ಗಡೆ ಹೊಂದಿ ಭೌತವಿಜ್ಞಾನದ ಬಾಕ್ಸ್ಟರ್ ಬಹುಮಾನ ಪಡೆದರು. ಇದಾದನಂತರ ಬಹು ಜನದ ಆಸೆಯಾದ 'ಹೋಪ್ ಬಹುಮಾನ' ಪಡೆದರು. ಅವರು ಆರಿಸಿಕೊಂಡಿದ್ದ ವಿಷಯ ರಸಾಯನ ಶಾಸ್ತ್ರ. ಅದರಲ್ಲಿ ನಡೆದ ಸ್ಪರ್ಧೆಯಲ್ಲಿ ಕೇಂಬ್ರಿಡ್ಜ್ ಮತ್ತು ಲಂಡನ್ನಿನ ಪ್ರೊಫೆಸರುಗಳು ಭಾಗವಹಿಸಿದ್ದರು. ಸ್ಪರ್ಧೆಯಲ್ಲಿ ಅಘೋರನಾಥರು ಮೊಟ್ಟಮೊದಲನೆಯವರಾಗಿ ಬಂದರು. ಎಡಿನ್‌ಬರೋದಿಂದ ಅವರು ಜರ್ಮನಿಯ ಬಾನ್ (Bonn) ವಿಶ್ವವಿದ್ಯಾನಿಲಯಕ್ಕೆ ಹೋಗಿ ಅಲ್ಲಿ ಸ್ಫಟಿಕಶಾಸ್ತ್ರ (Crystollography) ವಿದ್ಯುಚ್ಛಕ್ತಿ, ಆರ್ಗ್ಯಾನಿಕ್ ರಸಾಯನ ಶಾಸ್ತ್ರ ಇವುಗಳನ್ನು ಅಭ್ಯಾಸಮಾಡಿ ಎಡಿನ್‌ಬರೋಗೆ ಹಿಂದಿರುಗಿದರು. ೧೮೭೭ರಲ್ಲಿ ಆ ವಿಶ್ವವಿದ್ಯಾನಿಲಯದವರು ಡಿ. ಎಸ್‌ಸಿ. ಡಿಗ್ರಿಯನ್ನಿತ್ತರು. ಇಂಥ ಡಿಗ್ರಿಯನ್ನು

ಪಡೆದವರಲ್ಲಿ ಅಘೋರನಾಥರೆ ಪ್ರಥಮ ಭಾರತೀಯರು. ಹೀಗೆ ಪರದೇಶದಲ್ಲಿ ತಮ್ಮ ಕೀರ್ತಿಯನ್ನು ಹಬ್ಬಿಸಿ ಅವರು ಭಾರತಕ್ಕೆ ಹಿಂದಿರುಗಿದರು. ವೈಜ್ಞಾನಿಕ ವಿದ್ಯೆಯನ್ನು ಕರಗತಮಾಡಿಕೊಳ್ಳುವುದರಲ್ಲಿ ಅವರಿಗಿದ್ದ ಆಸೆ ಅಷ್ಟಿಷ್ಟಲ್ಲ. ತಂದೆಯ ಈ ತನ್ಮಯತೆಯಿಂದ ಮಗಳ ಜೀವನ ಪ್ರಭಾವಗೊಂಡಿತು. ಮಗಳೇ ಹೇಳಿದ್ದಾಳೆ ಹೀಗೆ: "ನನ್ನ ತಂದೆಯಲ್ಲಿ ವೈಜ್ಞಾನಿಕ ರಹಸ್ಯಗಳನ್ನು ತಿಳಿಯುವ ಯಾವ ಪ್ರಬಲ ಉತ್ಕಂಠತೆಯಿತ್ತೋ ಅದೇ ನನ್ನ ಹೃದಯದಲ್ಲಿ ಸೌಂದರ್ಯೋಪಾಸನೆಯ ಪ್ರವೃತ್ತಿಯಾಗಿ ವಿಕಾಸಗೊಂಡಿತು."

ಸರೋಜಿನಿ ತಂದೆಯಿಂದ ಎಷ್ಟು ಭಾಗ್ಯವಂತಳೋ ತಾಯಿಯಿಂದಲೂ ಅಷ್ಟೇ ಭಾಗ್ಯವಂತಳು. ತಾಯಿಯ ಹೆಸರು ವರದಸುಂದರಿ. ತಮ್ಮ ಪ್ರಣಯವನ್ನು ಕುರಿತು ಅಘೋರನಾಥರು ಮಕ್ಕಳೊಡನೆ ಆಗಾಗ್ಗೆ ಹೇಳಿಕೊಂಡು ಸಂತೋಷಪಡುತ್ತಿದ್ದರು. ಸಾಹಸಗುಣಗಳ ನಿಧಿಯಾಗಿದ್ದ ಅಘೋರನಾಥರಿಗೆ ಸಾಹಸಕಾರ್ಯಗಳಲ್ಲಿ ತುಂಬ ಆಸಕ್ತಿ ಇತ್ತು. ಅಷ್ಟೇ ಆಸಕ್ತಿ ಸೌಂದರ್ಯವನ್ನು ಕಂಡು ಆನಂದಿಸುವುದರಲ್ಲಿಯೂ ಇತ್ತು. ವರದ-ಸುಂದರಿ ರೂಪಕ್ಕೆ ಹೆಸರಾಗಿದ್ದಳು. ಆ ರೂಪವತಿಯನ್ನು ಪಡೆಯಬೇಕೆಂಬ ಸಾಹಸಕ್ಕೆ ಕೈ ಹಾಕಿದರು ಅಘೋರನಾಥರು. ಅವರಿಗೆ ದೋಣಿಯಲ್ಲಿ ಓಡಾಡುವುದೆಂದರೆ ಆಸೆ. ಬಂಗಾಳದಲ್ಲಿ ಹೂಗ್ಲಿ ನದಿಯು ಸಮುದ್ರವನ್ನು ಸೇರುವ ಮುನ್ನ ಛಿದ್ರಛಿದ್ರವಾಗಿ ಒಡೆದಿರುವುದು ಸರಿಯಷ್ಟೆ. ಅಲ್ಲಲ್ಲಿ ಭೂಮಿಯಿರುವ ಕಡೆ ಹಳ್ಳಿಗಳಿವೆ. ಒಂದು ಹಳ್ಳಿಯಿಂದ ಇನ್ನೊಂದು ಹಳ್ಳಿಗೆ ದೋಣಿಯಲ್ಲಿ ಹೋಗಬೇಕು. ಅಲೆಯುವ ಸ್ವಭಾವವುಳ್ಳ ಅಘೋರನಾಥರು ಹಳ್ಳಿಯಿಂದ ಹಳ್ಳಿಗೆ ದೋಣಿಯಲ್ಲಿ ಓಡಾಡುತ್ತಿದ್ದರು. ಆ ಕಾಲದಲ್ಲಿ ಡಕಾಯಿತರು ಹೆಚ್ಚಾಗಿದ್ದರು. ಅಂತಹ ಡಕಾಯಿತರ ಗುಂಪಿನೊಂದರೊಡನೆ ಅಘೋರನಾಥರು ಸ್ನೇಹ ಬೆಳೆಸಿದರು. ಬಹಳ ಸ್ವಾರಸ್ಯವಾಗಿ ಮಾತನಾಡುತ್ತಿದ್ದ ಅವರ ಸ್ನೇಹ ಡಕಾಯಿತರಿಗೂ ಹಿಡಿಯಿಸಿತು. ಬರುಬರುತ್ತ ಅವರೇ ಆ ಡಕಾಯಿತರ ಯುವಕ ಮುಖಂಡರಾದರು. ಒಂದು ದಿನ ಅಘೋರನಾಥರು ತಮ್ಮ ಜನಿವಾರವನ್ನು ಕಿತ್ತು ನದಿಗೆ ಬಿಸಾಡಿಬಿಟ್ಟರು. ಇದನ್ನು ಕಂಡು ಆ ಡಕಾಯಿತರು ಆಶ್ಚರ್ಯಪಟ್ಟರಲ್ಲದೆ ಅವರ ಧೈರ್ಯವನ್ನು ಕೊಂಡಾಡಿದರು. ಜನಿವಾರವನ್ನು ಬಿಸಾಡುವಾಗ ಅಘೋರನಾಥರು

"ಇದು ಕೇವಲ ಹೊಸೆದ ದಾರ. ಇದರಲ್ಲಿ ಪವಿತ್ರತೆಯೇನೂ ಇಲ್ಲ..... ಪವಿತ್ರತೆಯಿರುವುದು ಮನಸ್ಸಿನಲ್ಲಿ, ಹೃದಯದಲ್ಲಿ...." ಎಂದು ಸಾರಿದರು. ಅದು ನಿಜವಾಗಿಯೂ ಕೆಚ್ಚೆದೆಯ ಕೆಲಸ. ಇಲ್ಲಿಗೆ ಸುಮಾರು ನೂರು ವರ್ಷ ಗಳ ಹಿಂದೆ ಹದಿನಾಲ್ಕು ವರ್ಷದ ಹುಡುಗ ಜನಿವಾರವನ್ನು ಕಿತ್ತೆಸೆದದ್ದು ಅತ್ಯಾಶ್ಚರ್ಯವೇ ಸರಿ. ಇದಕ್ಕಿಂತಲೂ ಆಶ್ಚರ್ಯವಾದ ಮತ್ತೊಂದು ಕೆಲಸ ಮಾಡಿದರು ಅಘೋರನಾಥರು. ಒಂದು ದಿನ ಅವರು ವರದಸುಂದರಿ ಯನ್ನು ಕಂಡರು. ಆಗ ಆಕೆಗೆ ಕೇವಲ ಒಂಬತ್ತು ವರ್ಷ. ಕಂಡುದೇ ತಡ ಅವರಿಗೆ ಆಕೆಯಲ್ಲಿ ಪ್ರೇಮ ಅಂಕುರಿಸಿತು. ವರದಸುಂದರಿಯೂ ಅಘೋರ ನಾಥನನ್ನು ಪ್ರೀತಿಸಿದಳು. ಆದರೆ ಆಕೆಯನ್ನು ಪಡೆಯುವುದು ಹೇಗೆ? ಆ ಡಕಾಯಿತರು ಅವರ ಸಹಾಯಕ್ಕೆ ಬಂದರು. ಒಂದು ದಿನ ಅವರು ಆಕೆ ಯೊಡನೆ ಪಲಾಯನಮಾಡಿದರು. ಒಟ್ಟಿನಲ್ಲಿ ಅವರು ಸ್ವಾಮಿವಿವೇಕಾ ನಂದರು ಹೇಳಿದಂತೆ "ನಾಲ್ಕು ಅಕ್ಷರಗಳನ್ನು ಕಲಿತು ಗರ್ವದಿಂದ ಉಬ್ಬಿ ಹಿಂದೂಗಳಲ್ಲಿ ಮಾತ್ರವೇ ಲಭಿಸುವ ಆ ಜಾತಿಭ್ರಾಂತರೂ, ಮೂರ್ಖರೂ ದಯಾಹೀನರೂ ಕೃತ್ರಿಮಜೀವಿಗಳೂ, ನಾಸ್ತಿಕ ಕ್ರಿಮಿಗಳೂ ಆದ ಹೇಡಿ ಗಳಂತೆ" ಬಾಳಿ ಬದುಕಲು ಇಷ್ಟಪಡಲಿಲ್ಲ.

ಈ ಪ್ರಸಂಗವನ್ನು ವರ್ಣಿಸುತ್ತ ಸರೋಜಿನಿಯವರ ತಮ್ಮ ಹರೀಂದ್ರ ನಾಥ ಚಟ್ಟೋಪಾಧ್ಯಾಯರು ಹೀಗೆ ಹೇಳುತ್ತಾರೆ: "ಇದೆಲ್ಲ ನಿಜವಾದ ಡಕಾಯಿತರ ಕಥೆಯಂತೆ ಕಾಣುತ್ತದೆ. ಆದರೆ ತಾಯಿಯನ್ನು ತಂದೆ ಹಳ್ಳಿಯಿಂದ ಕದ್ದು ತಂದುದಕ್ಕಾಗಿ ನಾವು ಕೃತಜ್ಞರು. ಇಲ್ಲದಿದ್ದರೆ ನಮಗೆ 'ಅರ್ಧ ದೇವತೆ ಅರ್ಧಪಕ್ಷಿ'ಯಂತಿದ್ದ ತಾಯಿಯನ್ನು ಪಡೆಯುವ ಸೌಲಭ್ಯ ದೊರೆಯುತ್ತಿರಲಿಲ್ಲ."

ಮುಂದುವರಿಯುತ್ತ ಅವರು ತಾಯಿಯ ಬಗ್ಗೆ ಹೀಗೆ ನುಡಿದಿದ್ದಾರೆ. "ತಾಯಿಯ ಮುಖ ಚಂದ್ರನಂತಿತ್ತು. ನೀವು ಸರೋಜಿನಿಯ ಕಣ್ಣು ಗಳನ್ನು ಹಾಗೆಯೇ ಈಕ್ಷಿಸುತ್ತೀರಿ. ಆಕೆ ಆಲೋಚನೆಯಲ್ಲಿ ಮಗ್ನವಾದಾಗ ಆಕೆಯ ಕಣ್ಣುಗಳಲ್ಲಿ ಕಾಣುವ ಸೌಮ್ಯ ದೃಷ್ಟಿಯನ್ನು ನೀವು ತಾಯಿಯ ಕಣ್ಣುಗಳಲ್ಲಿಯೂ ಕಾಣಬಹುದು. ಆ ದೃಷ್ಟಿಯಲ್ಲಿ ದಯೆ, ಪ್ರೀತಿ ಹಾಗೂ ಧ್ಯಾನ ತುಂಬಿ ತುಳುಕುತ್ತಿತ್ತು."

ವರದಸುಂದರಿಯೂ ಸಾಕಷ್ಟು ವಿದ್ಯಾವಂತಳಾಗಿದ್ದಳು. ಬಂಗಾಳೀ

ಭಾಷೆಯಲ್ಲಿ ಅನೇಕ ಕವನಗಳನ್ನು ರಚಿಸಿದ್ದಳು. ತನ್ನ ಸುಶ್ರಾವ್ಯವಾದ ಕಂಠದಿಂದ ಹಾಡುತ್ತಲೂ ಇದ್ದಳು. ಹಳ್ಳಿಯಲ್ಲಿ ಓದುತ್ತಿದ್ದಾಗ ಆಕೆ ಹಾಡುಗಾರಿಕೆಗೆ ವೈಸ್‌ರಾಯರ ಚಿನ್ನದ ಪದಕ ಪಡೆದಿದ್ದಳು. ಹಾಡಿದರೆ ಕಣ್ಣಿನಲ್ಲಿ ನೀರು ತುಂಬಿ ಬರುತ್ತಿತ್ತು. ಒಳಗಿನ ದುಃಖವಾವುದನ್ನೋ ಮರೆಯಲು ಹಾಡುತ್ತಿದ್ದಂತೆ ಭಾಸವಾಗುತ್ತಿತ್ತು. ಅಘೋರನಾಥರು ಒಬ್ಬರೇ ಮನೆಯಲ್ಲಿದ್ದಾಗ ತಮ್ಮ ಅಚ್ಚುಮೆಚ್ಚಿನ ಮಡದಿಯ ಬಾಯಿಂದ ಕವನಗಳನ್ನೋ ಅಥವ ಬೇರೆ ಯಾವುದಾದರು ಹಾಡನ್ನೋ ಕೇಳಿ ಸಂತೋಷಪಡುತ್ತಿದ್ದರು. ಹೈದರಾಬಾದಿನ ಚಟ್ಟೋಪಾಧ್ಯಾಯರ ಮನೆ ಹೋಗಿಬರುವವರಿಗೆಲ್ಲ ಕವಿತೆಯ ಹಾಗೂ ಗಾನದ ಗೇಹವಾಗಿತ್ತು.

"ಒಟ್ಟನಲ್ಲಿ ಸರೋಜಿನಿಯ ತಂದೆತಾಯಿಗಳು ಕೇವಲ ಸಾಮಾನ್ಯ ಮಾತಾಪಿತೃಗಳಾಗಿರಲಿಲ್ಲ. ಅವರು ಅಪೂರ್ವ ಆಧ್ಯಾತ್ಮಿಕ ವ್ಯಕ್ತಿಗಳಾಗಿದ್ದರು. ಮಾನವ ವಿಕಾಸದಲ್ಲಿ ಅವರು ಉನ್ನತ ಶಿಖರಗಳಾಗಿದ್ದರು; ಕತ್ತಲೆಯ ಜೀವನದಲ್ಲಿ ಅವರು ನಡೆಯುತ್ತಿದ್ದ ಎರಡು ಅಲೌಕಿಕದೀಪಗಳಾಗಿದ್ದರು. ಹೋದೆಡೆಯಲ್ಲೆಲ್ಲಾ ದಾರಿಗರಿಗೆ ಬೆಳಕಾಗಿದ್ದರು. ಸಿಕ್ಕವರನ್ನೆಲ್ಲಾ ತಲೆಸವರಿ ಧೈರ್ಯಕೊಡುತ್ತಿದ್ದರು."

ಬಂಗಾಳದಿಂದ ಅಘೋರನಾಥರು ಹೈದರಾಬಾದಿಗೇಕೆ ಬಂದರೆಂದು ನೋಡೋಣ. ಹೈದರಾಬಾದಿನ ಆಗಿನ ನೈಜಾಮರು ತಮ್ಮ ರಾಜ್ಯದಲ್ಲಿ ವಿದ್ಯಾಭ್ಯಾಸವನ್ನು ಹರಡಬೇಕೆಂಬ ಆಕಾಂಕ್ಷೆಯುಳ್ಳವರಾಗಿದ್ದರು. ಅಘೋರನಾಥರ ಪ್ರಖ್ಯಾತಿಯನ್ನು ಕೇಳಿದ್ದ ಅವರು ಆ ಕೆಲಸಕ್ಕಾಗಿ ಅವರನ್ನು ಆಹ್ವಾನಿಸಿದರು. ಹೈದರಾಬಾದಿಗೆ ಬಂದ ಅಘೋರನಾಥರು ಮೊಟ್ಟಮೊದಲು 'ನೈಜಾಮರ ಕಾಲೇಜ'ನ್ನು ತೆರೆದರು. ಅನಂತರ ರಾಜ್ಯದಲ್ಲೆಲ್ಲಾ ಬಾಲಕ ಬಾಲಕಿಯರ ಶಾಲೆಗಳನ್ನು ಸ್ಥಾಪಿಸಿದರು. ಅವರು ಮಾಡಿದ ಉಪಕಾರ ಸ್ಮರಣೆ ಮಾಡುತ್ತ ಜನರು ಅವರನ್ನು 'ವಿದ್ಯಾಭ್ಯಾಸದ ಪಿತೃ'ವೆಂದು ಹೊಗಳಿದರು. ಕಾಲೇಜಿನ ಸ್ಥಾಪಕರಾದ ಅವರೇ ಅದರ ಪ್ರಿನ್ಸಿಪಾಲರೂ ಆದರು. ಹೀಗಾಗಿ ಬಂಗಾಳದಲ್ಲಿ ಹುಟ್ಟಿದ ಸಸಿ ಹೈದರಾಬಾದಿನಲ್ಲಿ ಫಲಬಿಟ್ಟಿತು.

ಪ್ರಿನ್ಸಿಪಾಲ್ ಹುದ್ದೆಯಿಂದ ನಿವೃತ್ತರಾದನಂತರವೇ ಅವರು ಬಂಗಾಳಕ್ಕೆ ಹಿಂದಿರುಗಿ ಹೋದದ್ದು. ಅಲ್ಲಿಗೆ ಹೋದಮೇಲೆ ಅವರು ಕಲ್ಕತ್ತೆಯ

ಸಿಟಿ ಕಾಲೇಜಿನ ಪ್ರಿನ್ಸಿಪಾಲರ ಆಹ್ವಾನವನ್ನು ಮನ್ನಿಸಿ ರಸಾಯನ ಶಾಸ್ತ್ರದ ಅಧ್ಯಾಪಕರಾದರು. ತಮ್ಮ ಜೀವನದ ಯಾತ್ರೆ ಮುಗಿಯುವವರೆಗೂ ಅವರು ಅಧ್ಯಾಪಕರಾಗಿಯೇ ಇದ್ದರು.

ಅಘೋರನಾಥರು ವಿಜ್ಞಾನದ ಬಗ್ಗೆ ಇಟ್ಟಿದ್ದ ಪ್ರೇಮ ಅಗಾಧವಾದದ್ದು. ಅದರಲ್ಲೂ ರಸಾಯನ ಶಾಸ್ತ್ರವೆಂದರೆ ಇನ್ನೂ ಹೆಚ್ಚಿನ ಪ್ರೇಮ. ಅಷ್ಟೇ ಪ್ರೇಮ ಸತ್ಯವನ್ನು ಹೇಳುವುದರಲ್ಲಿಯೂ ಇತ್ತು. ಸುಳ್ಳು ಹೇಳಿದರೆ ಯಾರನ್ನೂ ಅವರು ಕ್ಷಮಿಸುತ್ತಿರಲಿಲ್ಲ. ಒಮ್ಮೆ ಅವರ ಮಗ ಹರೀಂದ್ರನಾಥ ಮತ್ತು ಮಗಳು ಸುನಾಳಿನಿ ಕಟಕ್ಕಿನಿಂದ ಕಲ್ಕತ್ತೆಗೆ ಪ್ರಯಾಣ ಮಾಡಿದರು. ಎಲ್ಲರೂ ಮೂರನೇ ತರಗತಿಯ ಟಿಕೆಟ್ಟುಗಳನ್ನು ಕೊಂಡುಕೊಂಡರು. ಹರೀಂದ್ರನಾಥ ಚಿಕ್ಕವನಾಗಿ ಕಾಣುತ್ತಿದ್ದ. ಆ ಕಾರಣದ ಮೇಲೆ ಅವನಿಗೆ ಅರ್ಧ ಟಿಕೆಟ್ಟು ಕೊಂಡರು. ವಾಸ್ತವವಾಗಿ ಅವನು ಚಿಕ್ಕವಯಸ್ಸಿನವನಾಗಿರಲಿಲ್ಲ ; ಹಾಗೆ ಕಾಣುತ್ತಿದ್ದ ಅಷ್ಟೆ—ಅಂತೂ ಸ್ವಲ್ಪ ದುಡ್ಡು ಉಳಿಸಿದೆನೆಂಬ ಸಂತೋಷದಿಂದ ಹರೀಂದ್ರನಾಥ ಆ ವಿಚಾರವನ್ನು ತಂದೆಗೆ ತಿಳಿಸಿದನು. “ ನನಗೆ ಹನ್ನೆರಡು ವರ್ಷಕ್ಕಿಂತ ಹೆಚ್ಚಾಗಿ ವಯಸ್ಸಾಗಿರುವುದನ್ನು ಆ ‘ ಟಿಕೆಟ್ ಕಲೆಕ್ಟರ್ ’ ಪತ್ತೆ ಹಚ್ಚದೇ ಹೋದ ” ಎಂದು ಹುಡುಗುತನದ ಆಸಕ್ತಿಯಿಂದ ತಂದೆಯ ಮುಂದೆ ಬೆನ್ನುಚಪ್ಪರಿಸಿಕೊಂಡ ಮಗ. ಅದನ್ನು ಕೇಳಿದ ತಂದೆಯ ಕಣ್ಣು ಕೆಂಡದಂತಾದುವು. ತುಟಿ ಅದುರಿದವು. ಗುಡುಗಿನಂತೆ “ ಏನೋ ರೈಲ್ವೆ ಕಂಪೆನಿಗೆ ಮೋಸ ಮಾಡಿದೆಯಾ !” ಎಂದು ಗರ್ಜಿಸಿದರು. ಹರೀಂದ್ರ ಅರಳಿಯ ತಳಿರಂತೆ ಅದುರಿಹೋದ. ಮತ್ತೊಮ್ಮೆ ಹರೀಂದ್ರ ಒಂದು ಸುಳ್ಳು ಹೇಳಿದ್ದ. ಅದು ತಂದೆಗೆ ತಿಳಿಯಿತು. ಅವರು ‘ ಮಗೂ !’ ಎಂದು ಕರೆದರು. ಆ ಧ್ವನಿಯಲ್ಲಿ ಏನೋ ಅನಾಹುತದ ಸೂಚನೆ ವ್ಯಕ್ತವಾಗುತ್ತಿತ್ತು. “ ನೀನು ಸುಳ್ಳು ಹೇಳಿದೆಯಾ ! ” ಎಂದು ಕಿರಿಚಿದರು ಹತ್ತಿರಕ್ಕೆ ಬಂದ ಮಗನನ್ನು ಕುರಿತು. ಮೆಡ್ಡರಿಸಿದ ಕಣ್ಣುಗಳು ಮಗನ ಕಣ್ಣುಗಳನ್ನು ಚುಚ್ಚುತ್ತಿದ್ದುವು. ಮುಂದೆ ಮಾತಾಡಲಾರದೆ ಅವರು “ ಹೋಗು ” ಎಂದರು. “ ಆ ‘ ಹೋಗು ’ ಎಂಬ ತಂದೆಯ ಮಾತು ! ಅದು ಆಟಂ ಬಾಂಬಿನಷ್ಟು ಶಕ್ತಿಯುತವಾಗಿತ್ತು ! ”

# ೩. ಬಾಲ್ಯ ಮತ್ತು ವಿದ್ಯಾಭ್ಯಾಸ

ಇಂತಹ ಮಾತಾಪಿತೃಗಳ ಹೊಟ್ಟೆಯಲ್ಲಿ ಪ್ರಥಮ ಶಿಶುವಾಗಿ ಜನಿಸಿದಳು ಸರೋಜಿನಿ. ಈ ಮಾತಾಪಿತೃಗಳಿಗೆ ಒಟ್ಟು ನಾಲ್ಕು ಹೆಣ್ಣು ಮಕ್ಕಳು, ನಾಲ್ಕು ಗಂಡು ಮಕ್ಕಳು. ೧೮೭೯ ನೇ ಫೆಬ್ರವರಿ ೧೩ ನೇ ತಾರೀಖು ಹೈದರಾಬಾದಿನ ಅಘೋರನಾಥರ ಮನೆಯಲ್ಲಿ ಆನಂದವೋ ಆನಂದ. ಅಂತೆಯೇ ನಾಡು ಒಬ್ಬ ಮಹಾಕನ್ಯೆಯ ಆಗಮನಕ್ಕಾಗಿ ಹರ್ಷಗೊಂಡಿತು. ತೊಟ್ಟಿಲಲ್ಲಿ ಮಲಗಿ ಲಲ್ಲೆಯಾಡುತ್ತಿದ್ದ ಆ ಕಿಶೋರಿಯನ್ನು ಕಂಡ ಜನ ಭಾರತದ ಸಿಂಹಿಣಿಯಾಗೆಂದು ಹರಸಿದರು. ಆ ಹರಕೆಯಲ್ಲಿ ಹಿಂದೂ ಮುಸಲ್ಮಾನ ಕ್ರಿಸ್ತರೆಲ್ಲ ಭಾಗಿಗಳಾಗಿದ್ದರು. ಏಕೆಂದರೆ ಅಘೋರನಾಥರ ಮನೆಯಲ್ಲಿ ಅವರೆಲ್ಲರೂ ಬರಲು ಅವಕಾಶವಿತ್ತು. ಮಾತಾಪಿತೃಗಳ ಎದೆ ತುಂಬಿ ಬಂತು. ಮಗಳು ಚಿರಸ್ಥಾಯಿಯಾದ ಕೀರ್ತಿಗಳಿಸಲೆಂದು ದೇವರನ್ನು ಪ್ರಾರ್ಥಿಸಿದರು.

ಅಘೋರನಾಥರ ಮನೆಯಲ್ಲಿ ಮನೆತುಂಬ ಮಕ್ಕಳು. ಜೊತೆಗೆ ಅವರೂ ಅವರ ಪತ್ನಿ ವರದಸುಂದರಿಯೂ ಆತಿಥ್ಯದಲ್ಲಿ ಬಹು ಉದಾರಿಗಳು. ಬಂದವರಿಗೆಲ್ಲ ಮನೆಯಲ್ಲಿ ಆಶ್ರಯ. ಒಟ್ಟಿನಲ್ಲಿ ಅವರು ಜೀವನದ ಮಧ್ಯೆನಿಂತ ಹೆಮ್ಮರವಾಗಿದ್ದರು. ಆ ಮರದ ನೆರಳನ್ನು ಯಾರು ಬೇಕಾದರೂ ಆಶ್ರಯಿಸಬಹುದಾಗಿತ್ತು. ಕೈಕಾಲು ಮುರಿದುಕೊಂಡವ, ಗಾಯಗೊಂಡವ, ಕಾಯಿಲೆಯವ, ನಿರಾಶನಾದವ, ಹುಚ್ಚು ಹಿಡಿದವ—ಇವರಾರು ಬೇಕಾದರೂ ಬರಬಹುದಿತ್ತು. ಹೀಗಾಗಿ ಅಘೋರನಾಥರು ಮನೆಗೆ ಬಂದ ಅನೇಕ ಜನರೊಡನೆ ಆರಾಮ ಕುರ್ಚಿಯಲ್ಲಿ ಕುಳಿತು ಮಾತನಾಡುತ್ತಿದ್ದ ದೃಶ್ಯ ಸಾಮಾನ್ಯವಾದ ವಿಷಯವಾಗಿತ್ತು. " ಆ ಸಮೂಹದಲ್ಲಿ ದೊಡ್ಡವರಿರುತ್ತಿದ್ದರು, ಚಿಕ್ಕವರಿರುತ್ತಿದ್ದರು. ಜ್ಯೋತಿಷ್ಕರಿರುತ್ತಿದ್ದರು, ಕಳ್ಳರಿರುತ್ತಿದ್ದರು. ಇವರ ಮಧ್ಯೆ ನಮ್ಮ ತಂದೆ ನವಾಬನಂತೆ ಮೀಸೆ ತಿರುವುತ್ತ ಕುಳಿತಿರುತ್ತಿದ್ದ. ಭಿಕಾರಿಯೊಬ್ಬ ಎಷ್ಟೋ ದಿನಗಳಿಂದ ಸ್ನಾನಮಾಡದೆ ಹೊದೆಯಲೊಂದು ಬಟ್ಟೆಗೂ ಗತಿಯಿಲ್ಲದೆ ಅವರ ಬಳಿ ಕುಳಿತಿರುತ್ತಿದ್ದ. ಗಾಂಜಾ ಬೀಡಿ ಚುಟ್ಟ ಸೇದಿಕೊಂಡು ತಿಂಗಳುಗಟ್ಟಲೆ ಊಟಮಾಡದೇ

ಇರುತ್ತಿದ್ದ ಫಕೀರರಿರುತ್ತಿದ್ದರು. ಆದರೆ ಅವರು ಊಟ ಮಾಡುವ ತಿಂಗಳು ಬಂದಾಗ ಮನೆಯಲ್ಲಿ ಮಾಡಿದ್ದನ್ನೆಲ್ಲಾ ನುಂಗಿಬಿಡುತ್ತಿದ್ದರು. ಆಗ ಅಡುಗೆಯ ಮನೆಯ ಗತಿ ಹೇಳತೀರದು. ಆದರೆ ನನ್ನ ತಾಯಿಯ ವರದ ಹಸ್ತವಂತು ಯಾರು ಬಂದರೂ ಇಕ್ಕದೇ ಕಳುಹಿಸುತ್ತಿರಲಿಲ್ಲ. ಶ್ರೀಮತಿ ಅಘೋರನಾಥರ 'ದಾಲ್' ಎಂದರೆ ಪ್ರಸಿದ್ಧಿಯಾಗಿ ಹೋಗಿತ್ತು. ಮನೆಯಲ್ಲಿದ್ದ ಹೆಣ್ಣಾಳುಗಳ ಸೈನ್ಯವು ಒಬ್ಬರಮೇಲೊಬ್ಬರು ಬಂದು ಅಡುಗೆಯ ಬಾಗಿಲಿನಲ್ಲಿ ನಿಂತು ತಾಯಿಯಿಂದ ದಾಲನ್ನು ಬಡಿಸಿಕೊಂಡು ಹೋಗುತ್ತಿದ್ದರು." ಹೀಗೆ ಮಗನೇ ತಂದೆಯ ಬಗೆಗೆ ಹೇಳಿದ್ದಾನೆ.

ತಾಯಿ ಮಗಳ ಯೋಗಕ್ಷೇಮದ ಬಗೆಗೆ ಸದಾ ಕಣ್ಣಿಟ್ಟಿರುತ್ತಿದ್ದಳು. ಮಗುವಿನ ಆಶೆ ಆಕಾಂಕ್ಷೆಗಳೇನೆಂದು ತಿಳಿದು ಅವು ಸರಿಯಾದವುಗಳಾಗಿದ್ದರೆ ಉತ್ತೇಜನ ಕೊಡುತ್ತಿದ್ದಳು. ಸರೋಜಿನಿಗೆ ಸ್ವಚ್ಛತೆ, ಶುದ್ಧತೆ, ಮತ್ತು ಸೌಂದರ್ಯಗಳ ಮೇಲೆ ಅಗಾಧ ಆಸಕ್ತಿಯಿತ್ತು. ಇದನ್ನು ಕಂಡು ತಾಯಿ ಸಂತೋಷಪಡುತ್ತಿದ್ದಳು. ಅವುಗಳಿಗೆ ಪ್ರೋತ್ಸಾಹ ಕೊಡುವುದಕ್ಕೆ ತಾಯಿ ಹಿಂದು ಮುಂದು ನೋಡುತ್ತಿರಲಿಲ್ಲ. ತನಗೆ ಗೊತ್ತಿದ್ದ ಸತ್ಪುರುಷರ ಕಥೆಗಳನ್ನು ಅವರ ಮಹಾಸಾಧನೆಗಳನ್ನು ಮಗಳಿಗೆ ಬಣ್ಣಿಸುತ್ತಿದ್ದಳು. ತಾಯಿ ಮಗಳಿಗೆ ಆಗಾಗ್ಗೆ " ಸೋಲಿನಲ್ಲಿ ಕುಗ್ಗದೆ ಗೆಲುವಿನಲ್ಲಿ ಅತಿ ಹಿಗ್ಗದೆ ಬಾಳುವುದೇ ಮಾನವತೆಯ ಆದರ್ಶ' ಎಂದು ಬುದ್ಧಿ ಹೇಳುತ್ತಿದ್ದಳು. ಮಗಳ ಹೃದಯ ಕವಿತೆಯ ಕಡೆ ಒಲಿಯುತ್ತಿದ್ದುದನ್ನು ಕಂಡ ತಾಯಿ ಪ್ರೋತ್ಸಾಹ ನೀಡಿದಳು. ತನ್ನ ಬಂಗಾಳೀ ಕವಿತೆಗಳ ಸವಿಯನ್ನು ಮಗಳಿಗೆ ಉಣಿಸಿದಳು. ಅನಂತರ ಸರೋಜಿನಿ ಕವಯಿತ್ರಿಯಾದುದು ಹೆಚ್ಚಾಗಿ ತಾಯಿಯಿಂದಲೇ ಎಂದು ಹೇಳಬಹುದು.

ಹೀಗೆ ತಾಯಿ ಮಗಳ ಮಾನಸಿಕ ಬೆಳವಣಿಗೆಗೆ ನೀರೆರೆಯುತ್ತಿದ್ದರೆ ತಂದೆ ಮಗಳ ಏಳಿಗೆಗೆ ತಮ್ಮದೇ ಆದ ರೀತಿಯಲ್ಲಿ ಪ್ರೋತ್ಸಾಹ ನೀಡುತ್ತಿದ್ದರು. ಅವರಿಗೆ ಮಗಳ ಮುದ್ದುವರ್ತನೆ ತುಂಬಾ ಹಿಡಿಸಿತು. ಜಾತಿ ಮತಗಳ ಭೇದವೆಣಿಸದೆ ಆಕೆ ಎಲ್ಲಾ ಮಕ್ಕಳನ್ನು ಪ್ರೀತಿಸುತ್ತಿದ್ದಳು. ಆಕೆಯ ಸಹಪಾಠಿಗಳಲ್ಲಿ ಹಿಂದೂ ಮುಸಲ್ಮಾನ ಬಾಲಕರೆಲ್ಲ ಇದ್ದರು. ಈ ಸದ್ವರ್ತನೆಯನ್ನು ಕಂಡು ತಂದೆ ತುಂಬ ಹರ್ಷಿಸುತ್ತಿದ್ದರು.

ಅಘೋರನಾಥರ ಮನೆಗೆ ನಾನಾ ಜಾತಿಯ ಜನರು ಬರುತ್ತಿದ್ದರು;

ಪರಿಚಯಸ್ಥರು ಬರುತ್ತಿದ್ದರು, ಅಪರಿಚಯಸ್ಥರು ಬರುತ್ತಿದ್ದರು. ಅವರಿದ್ದ ಸ್ಥಳವನ್ನು 'ವಿದ್ಯಾಪೀಠ' ವೆಂಬ ಅಡ್ಡ ಹೆಸರಿನಿಂದ ಕರೆಯುತ್ತಿದ್ದರು. ಮೌಲ್ವಿಗಳು, ಪಂಡಿತರು, ಪರಂಗೀ ವಿದ್ವಾಂಸರು, ಲಾಯರುಗಳು, ಸಾರ್ವಜನಿಕರು—ಒಟ್ಟಿನಲ್ಲಿ ಎಲ್ಲರೀತಿಯ ಪಂಡಿತರೂ, ವಿದ್ವಾಂಸರೂ ಅಲ್ಲಿ ನೆರೆಯುತ್ತಿದ್ದರು. ಈ ಸನ್ನಿವೇಶದಲ್ಲಿ ಬೆಳೆದ ಸರೋಜಿನಿಯಲ್ಲಿ ಜಾತಿ ಮತ ಭೇದಭಾವನೆ ಸ್ವಲ್ಪವೂ ಇಲ್ಲದೇ ಹೋದದ್ದು ಆಶ್ಚರ್ಯವೇನಲ್ಲ. ಹಿಂದೂ ಮುಸಲ್ಮಾನರು ಒಂದೇ ಎಂಬ ಭಾವನೆ ಆಕೆಯಲ್ಲಿ ನೆಲೆಯಾಗಿ ನಿಂತದ್ದು ಇಂಥ ಸನ್ನಿವೇಶ ಮಹಿಮೆಯಿಂದಲೇ. ಮುಂದೆ ಆಕೆ ಹಿಂದೂ ಮುಸಲ್ಮಾನರು ಬಾಂಧವ್ಯಕ್ಕಾಗಿ ಬಹುವಾಗಿ ದುಡಿಯುವುದಕ್ಕೆ ಕಾರಣವನ್ನು ನಾವಿಲ್ಲಿ ಕಾಣಬಹುದು.

ಸಾಮಾನ್ಯವಾಗಿ ಸರೋಜಿನಿಗೆ ಮಕ್ಕಳು ಆಡುವ ಆಟಗಳಲ್ಲಿ ಅಷ್ಟು ಆಸಕ್ತಿ ಇರಲಿಲ್ಲ. ಮಕ್ಕಳಕೂಟವನ್ನು ಕಟ್ಟಿಕೊಂಡು ತಾನೊಂದು ಕುರ್ಚಿಯಮೇಲೆ ಕುಳಿತು ಮುದ್ದಾದ ಕಥೆಗಳನ್ನು ಹೇಳುವುದೆಂದರೆ ಅವಳಿಗೆ ಪ್ರೀತಿ. ಮಕ್ಕಳು ನಿಶ್ಶಬ್ದವಾಗಿ ಕುಳಿತು ಕತೆಗಳನ್ನು ಕೇಳುತ್ತಿದ್ದರು. ಕುಳಿತಲ್ಲಿಂದ ಕದಲುತ್ತಲೇ ಇರಲಿಲ್ಲ. ಇದು ಮುಂದೆ ಸರೋಜಿನಿ ಪ್ರಸಿದ್ಧ ವಾಗ್ಮಿಯಾದುದರ ಮುನ್ಸೂಚನೆ.

ಅಘೋರನಾಥರ ಮನೆಯ ಹಿಂದೆ ಕಾಡಿನೋಪಾದಿಯಲ್ಲಿ ಒಂದು ತೋಟವಿತ್ತು. ಇಲ್ಲಿ ಹೆಚ್ಚು ಹೊತ್ತು ಸರೋಜಿನಿ ಕಾಲಕಳೆಯುತ್ತ ಪ್ರಕೃತಿಯೊಡನೆ ನೇರ ಸಂಪರ್ಕಬೆಳೆಸಿದಳು.

ಸರೋಜಿನಿಗೆ ಓದಿನಲ್ಲಿ ಬಹಳ ಆಸಕ್ತಿ. ತಂದೆ ಇದನ್ನು ಓದಬೇಕು ಅದನ್ನು ಓದಬಾರದು ಎಂದು ಅಡ್ಡಿ ಪಡಿಸುತ್ತಿರಲಿಲ್ಲ. ಮಗಳಿಗೆ ಶ್ರೀಮಂತ ರೀತಿಯ ವಿದ್ಯಾಭ್ಯಾಸದ ಏರ್ಪಾಟನ್ನೇ ಮಾಡಿದರು. ಶಿಕ್ಷಣ ಕೊಡಲು ಒಬ್ಬಳು ಇಂಗ್ಲೀಷು ಉಪಾಧ್ಯಾಯಿನಿಯನ್ನೂ ಒಬ್ಬಳು ಫ್ರೆಂಚ್ ಉಪಾಧ್ಯಾಯಿನಿಯನ್ನೂ ನೇಮಿಸಿದರು. ಆಕೆಗೇ ಒಂದು ಪ್ರತ್ಯೇಕ ಕೋಣೆ, ಒಂದು ಪುಸ್ತಕ ಭಂಡಾರ, ಕುರ್ಚಿ ಮೇಜುಗಳು, ಬಟ್ಟೆಬರೆ ಇಡುವ ಬೀರು ಮೊದಲಾದವು. ಸರೋಜಿನಿಯಿದ್ದ ಕೋಣೆ ಬಹು ಸುಂದರವಾಗಿತ್ತಂತೆ. ಆನೆಯ ಮೂರು ತಲೆಗಳನ್ನು ಹೊತ್ತ ಸುಂದರವಾದ ಮೇಜಿನ ಮೇಲೆ 'ಅರೇಬಿಯನ್ ನೈಟ್ಸ್' ಕಥೆಗಳ ಪುಸ್ತಕವಿತ್ತು. ಇದರಲ್ಲಿ ಎಡ್ಮಂಡ್

ಡುಲಾಕರು ಚಿತ್ರಿಸಿದ ಸುಂದರ ಚಿತ್ರಗಳಿದ್ದುವು. ಅಕ್ಕನ ಕೋಣೆಯಲ್ಲಿದ್ದ ಈ ಪುಸ್ತಕವನ್ನು ಆಗಾಗ್ಗೆ ಕದ್ದು ನೋಡಿ ಸಂತೋಷಗೊಳ್ಳುತ್ತಿದ್ದ ಹರೀಂದ್ರನಾಥರು ಇದರಲ್ಲಿದ್ದ ಬಾಬಾ ಮುಸ್ತಫಾನ ಚಿತ್ರವನ್ನು ಕುರಿತು ತಮ್ಮ ಬಾಲ್ಯದ ಭಾವನೆಗಳನ್ನು ವಿವರಿಸಿದ್ದಾರೆ. "ಬಾಬಾ ಮುಸ್ತಫಾನ ಚಿತ್ರವನ್ನು ಅಂದರೆ ಅಲೀಬಾಬಾನ ತಮ್ಮ ಖಾಸಿಮನ ಕೊಳೆತ ಶರೀರವನ್ನು ಹೊಲಿಯುವ ಚಮ್ಮಾರನ ಚಿತ್ರವನ್ನು ನೋಡಿದಾಗಲೆಲ್ಲಾ ನನಗೇನೋ ಒಂದು ಅನುಮಾನವಾಗುತ್ತಿತ್ತು. ಮುಸ್ತಾಫ ಚಮ್ಮಾರನಲ್ಲ, ನಮ್ಮ ಮನೆಯ ದರ್ಜಿ ಬಾಲಯ್ಯನೇ ಅವನ ವೇಷದಲ್ಲಿರಬೇಕೆಂದು. ನನಗೇಕೋ ಅನ್ನಿಸುತ್ತಿತ್ತು. ಅವನು ಬಹಳ ಲಂಚ ತಿಂದು ಈ ಕೆಲಸಕ್ಕೆ ಕೈಹಾಕಿದ್ದಾನೆಂದು ಅಂದುಕೊಳ್ಳುತ್ತಿದ್ದೆ. ಆಗ ಹಳೆಯ ಗಾದೆಯೊಂದು ನನಗೆ ನೆನಪಾಗುತ್ತಿತ್ತು. 'ನೀವು ಬಿತ್ತಿದಂತೆ ಬೆಳೆಯುವಿರಿ' ಎಂಬುದೇ ಆ ಗಾದೆ. (As you sow you shall Reap) ಆ ಚಿಕ್ಕವಯಸ್ಸಿನಲ್ಲಿ ನನಗೆ 'Sow' ಮತ್ತು 'Sew' ಎಂಬೆರಡು ಇಂಗ್ಲೀಷ್ ಪದಗಳ ಅರ್ಥ ಸರಿಯಾಗಿ ಆಗುತ್ತಿರಲಿಲ್ಲ. ಈ ಕಾರಣದಿಂದ 'As you Sow you shall reap' ಎಂಬ ಗಾದೆ ನನ್ನ ಮಟ್ಟಿಗೆ 'As you sew you shall reap' ಎಂದಾಗಿತ್ತು. ಒಮ್ಮೊಮ್ಮೆ ಬಾಲಯ್ಯ ತೂಕಡಿಸುತ್ತಲೋ ಅಥವಾ ಅಪ್ಪಿತಪ್ಪಿಯೋ ಸೂಜಿಯಿಂದ ಕೈ ಚುಚ್ಚಿಕೊಂಡರೆ ನಾನು 'That is what he has reaped' ಎಂದುಕೊಳ್ಳುತ್ತಿದ್ದೆ."

ಸರೋಜಿನಿ ಓದಿದುದನ್ನು ಅಸಾಧಾರಣವಾಗಿ ಗ್ರಹಿಸುತ್ತಿದ್ದಳು. ತಂದೆ ಹುಟ್ಟು ಉಪಾಧ್ಯಾಯರು. ಅಂಥವರಿಗೆ ಮಗಳೇ ಶಿಷ್ಯಳಾದಳು. ಅವಳನ್ನು ಹತ್ತಿರ ಕುಳ್ಳಿರಿಸಿಕೊಂಡು ವಿಜ್ಞಾನ ಹಾಗೂ ಪ್ರಕೃತಿಯ ಮೇಲೆ ಸರಳವಾದ ಪಾಠಗಳನ್ನು ಹೇಳುತ್ತಿದ್ದರು. ಹೇಳಿದುದನ್ನು ಸುಲಭವಾಗಿ ಗ್ರಹಿಸುವ ಶಿಷ್ಯರಿದ್ದರೆ ಗುರುವಿಗೆಷ್ಟು ಆನಂದ! ಸರೋಜಿನಿ ಸ್ಕೂಲಿಗೂ ಹೋಗುತ್ತಿದ್ದಳು. ಆದರೆ ಸ್ಕೂಲಿಗಿಂತ ಹೆಚ್ಚಾಗಿ ಮನೆಯಲ್ಲಿ ಕಲಿತದ್ದು ಅಪಾರ. ತರಗತಿಯಲ್ಲಿ ಆಕೆ ಮೊಟ್ಟಮೊದಲನೆಯವಳು. ಆ ಕಾರಣ ಆಕೆಯಲ್ಲಿ ದುರಹಂಕಾರವಿರಲಿಲ್ಲ; ನಮ್ರತೆಯಿತ್ತು. ಸಹಪಾಠಿಗಳು ಅಸೂಯೆಪಡುವುದಕ್ಕಿಂತ ಹೆಚ್ಚಾಗಿ ಆಕೆಯನ್ನು ಗೌರವದಿಂದ ಕಾಣುತ್ತಿದ್ದರು. ಇಂಗ್ಲೆಂಡಿನ ಹೆಸರಾಂತ ಜಾನ್‌ಸನ್ನನಿಗೂ ಇದೇ ರೀತಿಯ ಗೌರವ ದೊರೆಯುತ್ತಿತ್ತಂತೆ.

ಸರೋಜಿನಿಗೆ ಚಿಕ್ಕವಯಸ್ಸಿನಲ್ಲೇ ಇಂಗ್ಲೀಷು ಕಲಿಸುವ ಏರ್ಪಾಡು ನಡೆಯಿತು. ಮನೆಯಲ್ಲಿ ಭಾಷೆಗಳ ವೈವಿಧ್ಯ ತಾಂಡವಾಡುತ್ತಿತ್ತು. ವರದ ಸುಂದರಿ ಗಂಡನೊಡನೆ ಬಂಗಾಳಿಯಲ್ಲಿ ಮಾತನಾಡುತ್ತಿದ್ದಳು. ಮಕ್ಕಳೊಡನೆ ಹಿಂದೂಸ್ತಾನಿಯಲ್ಲಿ ಮಾತನಾಡುತ್ತಿದ್ದಳು. ಸೇವಕರೊಡನೆ ತೆಲುಗಿನಲ್ಲಿ ಮಾತನಾಡುತ್ತಿದ್ದಳು. ಆದರೆ ಮಕ್ಕಳು ಮಾತ್ರ ಬಂಗಾಳೀ ಭಾಷೆಯಲ್ಲಿ ಮಾತನಾಡಕೂಡದೆಂದು ಅಘೋರನಾಥರ ಕಟ್ಟಾಜ್ಞೆಯಾಗಿತ್ತು. ಇಂಗ್ಲೀಷು ತಪ್ಪಿದರೆ ಹಿಂದೂಸ್ತಾನಿಯಲ್ಲಿ ಮಾತಾಡಬಹುದೆಂದು ಅವರು ಹೇಳಿದ್ದರು. ಸರೋಜಿನಿಯಾದರೋ ಇಂಗ್ಲೀಷಿನಲ್ಲಿ ಮಾತನಾಡುತ್ತಿರಲಿಲ್ಲ. ಆ ಭಾಷೆಯಲ್ಲಿಯೇ ಮಾತನಾಡಬೇಕೆಂದು ಒತ್ತಾಯ ಪಡಿಸುತ್ತಿದ್ದರು ತಂದೆ. ಆದರೆ ಸರೋಜಿನಿ ಆ ಭಾಷೆಯಲ್ಲಿ ಮಾತನಾಡುವುದಿಲ್ಲವೆಂದು ಹಠ ಹಿಡಿದು ಕುಳಿತಳು. ಆ ಹಠದ ಪರಿಣಾಮವನ್ನು ಆಕೆಯ ಲೇಖನಿಯಿಂದಲೇ ಕೇಳಿ: "ನಾನು ಆ ಭಾಷೆಯನ್ನು ಮಾತಾಡುವುದಿಲ್ಲವೆಂದು ಹಠ ಹಿಡಿದೆ. ಒಂದು ದಿನ—ಆಗ ನನಗೆ ಒಂಬತ್ತು ವರ್ಷ—ಅದಕ್ಕಾಗಿ ನನ್ನನ್ನು ಶಿಕ್ಷಿಸಿದರು. ನನಗೆ ಶಿಕ್ಷೆಯಾದದ್ದು ಅದೇ ಮೊದಲನೆಯ ಸಲ. ಇಡೀ ದಿನವೆಲ್ಲ ನನ್ನನ್ನು ಒಂದು ಕೋಣೆಯಲ್ಲಿ ಕೂಡಿಹಾಕಿದರು. ಆ ಕೋಣೆಯಿಂದ ನಾನು ಪೂರ್ತ ಅರಳಿದ ಭಾಷಾಪಂಡಿತಳಾಗಿ ಹೊರಬಿದ್ದೆ. ಅಂದಿನಿಂದ ನಾನು ತಂದೆಯೊಡನೆ ಇಂಗ್ಲೀಷು ಬಿಟ್ಟು ಬೇರೊಂದು ಮಾತಾಡಲಿಲ್ಲ. ಯಾವಾಗಲೂ ನನ್ನೊಡನೆ ಹಿಂದುಸ್ತಾನಿಯಲ್ಲಿ ಮಾತಾಡುವ ತಾಯಿಯೊಡನೆಯೂ ನಾನು ಇಂಗ್ಲೀಷಲ್ಲದೆ ಬೇರೆ ಮಾತಾಡುತ್ತಿರಲಿಲ್ಲ."

ಚಿಕ್ಕ ಹುಡುಗಿಯಾದ ನನಗೆ ಕವಿತೆಗಳನ್ನು ರಚಿಸುವುದರಲ್ಲಿ ವಿಶೇಷ ಗೀಳು ಇದ್ದಂತೆ ಕಾಣಲಿಲ್ಲ. ಆದರೆ ಕಲ್ಪನೆಯ ಲೋಕದಲ್ಲಿ ಕನಸುಕಾಣುವ ಸ್ವಭಾವವೇನೋ ಇತ್ತು. ತಂದೆಯ ನೇತೃತ್ವದಲ್ಲಿ ನನ್ನ ಶಿಕ್ಷಣ ಕಟ್ಟು ನಿಟ್ಟಾದ ವೈಜ್ಞಾನಿಕ ರೀತಿಯಲ್ಲೇ ನಡೆಯಿತು. ನಾನೊಬ್ಬ ಗಣಿತ ಶಾಸ್ತ್ರಜ್ಞಳೋ ಅಥವಾ ವೈಜ್ಞಾನಿಕಳೋ ಆಗಬೇಕೆಂದು ನನ್ನ ತಂದೆಯ ನಿರ್ಧಾರವಾಗಿತ್ತು. ಆದರೆ ನನ್ನ ತಂದೆಯಿಂದಲೂ, ಬಂಗಾಳೀ ಭಾಷೆಯಲ್ಲಿ ಹಾಡುಗಳನ್ನು ಕಟ್ಟುತ್ತಿದ್ದ ನನ್ನ ತಾಯಿಯಿಂದಲೂ ನಾನು ಪಡೆದ ಕವಿತಾ ಕೌಶಲ ನನ್ನ ತಂದೆಯ ನಿರ್ಧಾರವನ್ನು ಮೀರಿಸಿತು. ಒಂದು ದಿನ ನಾನು ಆಲ್ಜಿಬ್ರ (Algebra) ಲೆಕ್ಕವನ್ನು ಮಾಡಲಾರದೆ ನಿಟ್ಟುಸಿರು ಬಿಡು

ತ್ತಿದ್ದೆ. ಏನೇ ಮಾಡಿದರೂ ಲೆಕ್ಕ ಸರಿಯಾಗಲೊಲ್ಲದು. ಅದರ ಬದಲು ಇಡೀ ಪದ್ಯವೊಂದು ನನ್ನ ಬಾಯಿಂದ ಹೊರಟಿತು. ಅದನ್ನು ಬರೆದುಕೊಂಡೆ.

"ಅಂದಿನಿಂದ ನನ್ನ 'ಕವಿತಾ ಜೀವನ' ಪ್ರಾರಂಭವಾಯಿತು. ಹದಿ ಮೂರನೇ ವಯಸ್ಸಿನಲ್ಲಿ ನಾನೊಂದು ನೀಳ್ಗವನವನ್ನು ಬರೆದೆ. ಅದರ ಹೆಸರು 'ಸರೋವರ ಸುಕನ್ಯೆ' ಎಂದು. ಅದರಲ್ಲಿ ೧೩೦೦ ಸಾಲುಗಳಿದ್ದುವು. ಬರೆಯಲು ಆರು ದಿನಗಳಾದುವು. ಅದೇ ವಯಸ್ಸಿನಲ್ಲಿ ೨೦೦೦ ಸಾಲುಗಳ ನಾಟಕವೊಂದನ್ನು ಬರೆದೆ. ಡಾಕ್ಟರು ನನಗೆ ಬಹಳ ಕಾಯಿಲೆಯೆಂದೂ, ಆದಕಾರಣ ನಾನು ಪುಸ್ತಕವನ್ನು ಮುಟ್ಟಕೂಡದೆಂದೂ ಹೇಳಿದ್ದರು. ಡಾಕ್ಟರ ಮೇಲಿನ ಸೇಡನ್ನು ತೀರಿಸಿಕೊಳ್ಳಬೇಕೆಂದೇ ನಾನು ಅದೇ ಕ್ಷಣ ಹಿಂದುಮುಂದು ನೋಡದೆ ನನ್ನ ನಾಟಕವನ್ನು ಪ್ರಾರಂಭಿಸಿದೆ. ಸುಮಾರು ಆವೇಳೆಗೆ ನನ್ನ ಆರೋಗ್ಯ ನಿಜವಾಗಿಯೂ ಕೆಟ್ಟಿತು. ನಿತ್ಯದ ಪಾಠ ಪ್ರವಚನಗಳು ನಿಂತುಹೋದವು. ಈ ಅವಕಾಶವನ್ನುಪಯೋಗಿಸಿಕೊಂಡು ಅಪಾರ ಗ್ರಂಥಗಳನ್ನು ಅತ್ಯಾಸಕ್ತಿಯಿಂದ ಓದಿಬಿಟ್ಟೆ. ನನ್ನ ಬಹುಭಾಗದ ಗ್ರಂಥಪಠಣೆಯೆಲ್ಲ ನನ್ನ ಹದಿನಾಲ್ಕರಿಂದ ಹದಿನಾರು ವರ್ಷ ವಯಸ್ಸಿನೊಳಗಾಯಿತೆಂದು ನನ್ನ ಭಾವನೆ. ಆ ಸಮಯದಲ್ಲಿ ಒಂದು ಕಾದಂಬರಿ ಬರೆದೆ. ದೊಡ್ಡ ದೊಡ್ಡ ಪುಸ್ತಕಗಳಾಗುವಷ್ಟು ದಿನಚರಿ ಬರೆಯುತ್ತಿದ್ದೆ. ನನ್ನ ವಿಚಾರದಲ್ಲಿ ನಾನು ಗಂಭೀರ ಆಸಕ್ತಿವಹಿಸಿದೆ."

ಸರೋಜಿನಿ ದೊಡ್ಡವಳಾದಳು. ಆಕೆಗೆ ಪರ್ಷಿಯನ್ ಭಾಷೆ ಕಲಿಸಲು ತಂದೆ ಒಬ್ಬ ಪರ್ಷಿಯನ್ ಉಪಾಧ್ಯಾಯರನ್ನು ನೇಮಿಸಿದರು. ಸ್ಕೂಲಿನಲ್ಲಿಯೂ ಆಕೆಯ ದ್ವಿತೀಯ ಭಾಷೆ ಪರ್ಷಿಯನ್ ಆಗಿತ್ತು.

ಮಗಳನ್ನು ಹೈಸ್ಕೂಲಿಗೆ ಕಳುಹಿಸಬೇಕೆಂದು ಅಘೋರನಾಥರ ಆಸೆಯಾಗಿತ್ತು. ಆದರೆ ಆ ಕಾಲದಲ್ಲಿ ಹೆಣ್ಣುಮಕ್ಕಳು ಹೈಸ್ಕೂಲಿಗೆ ಹೋಗುತ್ತಿರಲಿಲ್ಲ. ಅಲ್ಲದೆ ಹೈದರಾಬಾದಿನಲ್ಲಿ ಸರಿಯಾದ ಹೈಸ್ಕೂಲೂ ಇರಲಿಲ್ಲ. ಸರಿಯಾದ ಹೈಸ್ಕೂಲಿದ್ದುದು ಮದರಾಸಿನಲ್ಲಿ. ಆದರೆ ಅಲ್ಲಿಗೆ ಕಳುಹಿಸುವುದೂ ಆಕ್ಷೇಪಕರವಾಗಿತ್ತು. ಮೇಲಾಗಿ ತಮ್ಮ ಮುದ್ದು ಮಗಳನ್ನು ಹೇಗೆ ಅಗಲುವುದೆಂದು ತಂದೆತಾಯಿಗಳ ಯೋಚನೆಯಾಗಿತ್ತು. ಆದರೂ ಧೈರ್ಯಮಾಡಿ ತಂದೆತಾಯಿಗಳು ಮಗಳನ್ನು ಮದ್ರಾಸಿಗೆ ಕಳುಹಿಸಿಕೊಟ್ಟರು. ಸರೋಜಿನಿಗೆ ಆಗ ಕೇವಲ ಹತ್ತುವರ್ಷ. ಆ ವಯಸ್ಸಿನ ಹುಡುಗಿ

ನೂರಾರು ಮೈಲಿಗಳಾಚೆಯಿದ್ದ ಮದ್ರಾಸಿಗೆ ಹೋಗಿ ಹೈಸ್ಕೂಲು ಸೇರಿ ಕೊಂಡಳು. ಹನ್ನೆರಡನೇ ವರ್ಷದಲ್ಲಿ ಆಕೆ ಮೆಟ್ರಿಕ್ಯುಲೇಟ್ ಪರೀಕ್ಷೆ ಪಾಸು ಮಾಡಿದಳು. ಅದು ಸಾಮಾನ್ಯ ರೀತಿಯ ಪಾಸಾಗಿರಲಿಲ್ಲ. ಪರೀಕ್ಷೆಯೂ ಈಗಿನಷ್ಟು ಸುಲಭವಾಗಿರಲಿಲ್ಲ. ಆಗಿನ ಪರೀಕ್ಷೆಯಲ್ಲಿ ಕೊಡುತ್ತಿದ್ದ ಪ್ರಶ್ನೆ ಗಳಿಗೆ ಉತ್ತರ ಕೊಡಲು ಈಗಿನ ಬಿ. ಎ. ವಿದ್ಯಾರ್ಥಿಗಳೂ ತಡಬಡಿಸಬೇಕು. ಅಷ್ಟೊಂದು ಕಷ್ಟವಾಗಿತ್ತು ಪರೀಕ್ಷೆ. ಇಂತಹ ಪರೀಕ್ಷೆಯಲ್ಲಿ ಸರೋಜಿನಿ ಮೊದಲನೆಯವಳಾಗಿ ಬಂದಳು !

ಪರೀಕ್ಷೆ ಮುಗಿಸಿ ಪ್ರಥಮಸ್ಥಾನ ಪಡೆದು ಮನೆಗೆ ಬಂದ ಸರೋಜಿನಿ ಯನ್ನು ಕಂಡು ಮಾತಾಪಿತೃಗಳಿಗೆ ನಿಜವಾಗಿಯೂ ಸಂತೋಷವಾಯಿತು. ಅಂತಹ ಮಗಳನ್ನು ಪಡೆದದ್ದು ತಮ್ಮ ಭಾಗ್ಯವೆಂದುಕೊಂಡರು. ಆದರೆ ತಂದೆ ಮಾತ್ರ ಮಗಳಲ್ಲಿ ಅಹಂಕಾರ ಮೂಡದಂತೆ ನೋಡಿಕೊಂಡರು. ಅನೇಕ ಕಡೆಗಳಿಂದ ಜನರು ಬಂದು ಅಘೋರನಾಥರ ಮಗಳನ್ನು ಅಭಿ ನಂದಿಸಿದರು. ಅಭಿನಂದನೆ ಮುಗಿದಮೇಲೆ ತಂದೆ ಮಗಳನ್ನು ಪಕ್ಕಕ್ಕೆ ಕರೆದು ಹೀಗೆ ಹೇಳಿದರು : “ ಮಗೂ ಸರೋಜ, ನೀನು ಪರೀಕ್ಷೆಯಲ್ಲಿ ಪ್ರಥಮಸ್ಥಾನ ಪಡೆದಿರುವೆ ನಿಜ. ಆದರೆ ಅದರಲ್ಲಿ ಆಶ್ಚರ್ಯವೇನಿದೆ? ನಾನು ಆಗಲೇ ನಿರೀಕ್ಷಿಸಿದ್ದೆ. ನೀನು ಮೊದಲನೆಯವಳಾಗಿ ಬರದಿದ್ದರೆ ನನಗೆ ಆಶ್ಚರ್ಯವಾಗುತ್ತಿತ್ತು. ಹೋಗು !”

ಮೆಟ್ರಿಕ್ಯುಲೇಷನ್ ಮುಗಿಸಿದಮೇಲೆ ಸರೋಜಿನಿ ಕಾಲೇಜಿಗೆ ಹೋಗ ಬಹುದಾಗಿತ್ತು. ಆದರೆ ಹೋಗಲಿಲ್ಲ. ಆರೋಗ್ಯ ಸರಿಯಾಗಿರಲಿಲ್ಲ. ಬಹು ನಿಶ್ಶಕ್ತಳಾದಕಾರಣ ಸಂಪೂರ್ಣ ವಿಶ್ರಾಂತಿಬೇಕೆಂದು ಡಾಕ್ಟರು ಹೇಳಿದರು. ಶರೀರಕ್ಕಾಗಲೀ ಬುದ್ಧಿಗಾಗಲೀ ಹೆಚ್ಚು ಶ್ರಮ ಕೊಡಬಾರದೆಂದು ಸಲಹೆ ಮಾಡಿದ್ದರು. ಆದರೆ ಆ ಸಲಹೆಯನ್ನು ಮೀರಿ ಸರೋಜಿನಿ ಮಾಡಿದ ಕೆಲಸವನ್ನು ಮೇಲಾಗಲೇ ಹೇಳಿದೆ. ಹದಿನಾಲ್ಕು ವರುಷಗಳು ಮುಗಿಯು ವುದರೊಳಗೆ ಆಕೆ ಹೆಚ್ಚು ಕಡಮೆ ಎಲ್ಲಾ ಇಂಗ್ಲೀಷು ಕವಿಗಳ ಗ್ರಂಥ ಗಳನ್ನು ಓದಿ ಮುಗಿಸಿದ್ದಳು. ಆಕೆಗೆ ಪ್ರಿಯವಾದ ಕವಿಗಳೆಂದರೆ ಷೆಲ್ಲಿ, ಟೆನ್ನಿಸನ್ ಮತ್ತು ಬ್ರೌನಿಂಗ್. ಅಷ್ಟೇ ಅಲ್ಲದೆ ಆಕೆಗೆ ತತ್ವಶಾಸ್ತ್ರ, ಇತಿಹಾಸ ಮುಂತಾದ ವಿಷಯಗಳ ಮೇಲೂ ಹೆಚ್ಚು ಆಸಕ್ತಿ. ತಂದೆಯ ಪುಸ್ತಕ ಭಂಡಾರದಲ್ಲಿದ್ದ ಪುಸ್ತಕಗಳು ಆಕೆಗೆ ಸಾಲಲಿಲ್ಲ. ಹೊರಗಿನಿಂದ ಎರವು

ತರಿಸಿಕೊಂಡು ಓದಿದಳು. ಕೊನೆಗೆ ಕೊಂಡುಕೊಂಡು ಓದಿದಳು.

ವಯಸ್ಸಾದಂತೆ ಬುದ್ಧಿಯೂ ವಿಕಾಸಗೊಂಡಿತು. ಆಕೆಯ ಮನಸ್ಸು ಕವಿತೆಯಕಡೆ ವಾಲುತ್ತಿದ್ದುದು ಸ್ಪಷ್ಟವಾಗುತ್ತಿತ್ತು. ಕವಿಹೃದಯ ಅರಳಿ ಹೊರಸೂಸಲು ಚಡಪಡಿಸುತ್ತಿತ್ತು. ಅದು ಹೇಗೆ 'ಹೊರಹೊಮ್ಮಿತೆಂಬು ದನ್ನು ಆಕೆಯ ಮಾತಿನಿಂದಲೇ ಕೇಳಿದ್ದೀರಿ. ಆಲ್‌ಜಿಬ್ರಾ ಲೆಕ್ಕಮಾಡಲು ಹೋಗಿ ಅದರ ಬದಲು ಕವಿತೆ ಮಾಡಿದಳು ಸರೋಜಿನಿ. ಆದರೆ ಆಲ್ ಜಿಬ್ರ ಲೆಕ್ಕ ಬರದವರಿಗೆಲ್ಲ ಕವಿತೆ ಬರುವುದಿಲ್ಲ. ಕವಿತೆ ಸರೋಜಿನಿಗೆ ದೈವದತ್ತವಾಗಿ ಬಂದ ಪ್ರತಿಭೆ. ಕವಿಗಳು ಹುಟ್ಟುತ್ತಾರೆ. ; ಅವರನ್ನು ಸೃಷ್ಟಿಮಾಡಲಾಗುವುದಿಲ್ಲ ಎಂದು ಇಂಗ್ಲೀಷಿನಲ್ಲಿ ನಾಣ್ಣುಡಿ ಇದೆಯಷ್ಟೆ. ಅದಕ್ಕೆ ತಕ್ಕಂತೆ ಸರೋಜಿನಿಯೂ ಹುಟ್ಟು ಕವಿಯೇ ಹೊರತು ಕಟ್ಟುಕವಿ ಯಲ್ಲ. ಆದರೆ ಸರೋಜಿನಿಯ ತಮ್ಮ ಹರೀಂದ್ರನಾಥರು ಕವಿಗಳನ್ನು ಕಟ್ಟಲು ಸಾಧ್ಯವೇ ಹೊರತು ಹುಟ್ಟಿಸಲು ಸಾಧ್ಯವಿಲ್ಲ ಎಂದು ಹೇಳಿ ಇಡೀ ಸಾರಸ್ವತ ಸಿದ್ಧಾಂತವನ್ನು ಬುಡಮೇಲು ಮಾಡಿಬಿಟ್ಟರು. ಅವರು ತಮ್ಮ ವಾದವನ್ನು ಪುಷ್ಟೀಕರಿಸಲು ಒಂದು ಸ್ವಾರಸ್ಯವಾದ ಪ್ರಸಂಗವನ್ನು ಹೇಳಿ ದ್ದಾರೆ. ಒಬ್ಬ ಜಂಭದ ಕವಿಯಿದ್ದ. ಅವನು ತಾನು ಬರೆದ ಕವಿತೆಗಳನ್ನು ಅಚ್ಚು ಹಾಕಿಸಬೇಕೆಂದು ಯಾರಾರಿಗೋ ಕಳುಹಿಸಿದ. ಆದರೆ ಯಾರೂ ಒಪ್ಪಲಿಲ್ಲ. ಅವನು ರೇಗಾಡಿ ಪ್ರಕಾಶಕರೊಬ್ಬರಿಗೆ ಕಾಗದ ಬರೆದ : " ನಿಮಗೆ ಗೊತ್ತಿಲ್ಲವೇ ನಾನು ಹುಟ್ಟುಕವಿಯೆಂದು ?" ಎಂದು. ಪ್ರಕಾಶಕರು ಚಾಕಚಕ್ಯತೆಯನ್ನುಪಯೋಗಿಸಿ ಬಹಳ ಸೌಮ್ಯವಾಗಿ ಉತ್ತರಕೊಟ್ಟರು : " ನೀವು ಹೇಳಿದ್ದು ಅರ್ಥವಾಯಿತು. ಆದರೆ ನಿಮ್ಮ ತಪ್ಪನ್ನು ನಿಮ್ಮ ತಂದೆ ತಾಯಿಗಳ ಮೇಲೆ ಹೊರಿಸಬೇಡಿ. "

ಸರೋಜಿನಿ ಒಂದು ನಾಟಕವನ್ನು ಬರೆದಳೆಂದು ಮೇಲೆ ಹೇಳಿದೆ ಯಷ್ಟೆ. ಇಂಗ್ಲಿಷ್ ಭಾಷೆಯಲ್ಲಿದ್ದ ನಾಟಕವನ್ನು ಪರ್ಷಿಯನ್‌ಭಾಷೆಗೆ ಪರಿವರ್ತಿಸಿದ್ದಳು. ಅದರ ಹೆಸರು ' ಮೆಹೆರ್ ಮುನೀರ್ ' ಎಂದು. ಮಗಳ ಈ ಸಾಹಿತ್ಯ ಕಲೆಯನ್ನು ಪ್ರೋತ್ಸಾಹಿಸಬೇಕೆಂದು ಉದ್ದೇಶಿಸಿ ಅಘೋರ ನಾಥರು ಆ ನಾಟಕವನ್ನು ಸ್ಥಳೀಯ ಮುದ್ರಣಾಲಯವೊಂದರಲ್ಲಿ ಅಚ್ಚು ಹಾಕಿಸಿ ತಮ್ಮ ಸ್ನೇಹಿತರಿಗೆಲ್ಲ ಹಂಚಿದರು. ಮಕ್ಕಳಲ್ಲಿ ಕಂಡುಬರುವ ಈ ಅಮೂಲ್ಯ ಕಲೆಯನ್ನು ಅಭಿವೃದ್ಧಿಮಾಡಲು ಅವರು ಹಿಂದುಮುಂದು

ನೋಡುತ್ತಿರಲಿಲ್ಲ. ಸರೋಜಿನಿಯ ತಮ್ಮ ಹರೀಂದ್ರ ಆರು ವರ್ಷದ ಮಗುವಾಗಿದ್ದಾಗಲೇ ಕವನ ಕಟ್ಟುತ್ತಿದ್ದನಂತೆ. ಮಗನ ಈ ಪ್ರಯತ್ನ ವನ್ನು ತಂದೆ ಪ್ರೋತ್ಸಾಹಿಸದೇ ಹೋಗಿದ್ದರೆ, ಬರೆದದ್ದು ಕಸವೆಂದು ಅವರು ಅಂದಿದ್ದರೆ, ಹರೀಂದ್ರ ಸರ್ಕಾರಿ ಆಫೀಸಿನಲ್ಲಿ ಗುಮಾಸ್ತನೋ ಅಥವ ಷೇರು ಮಾರ್ಕೆಟ್ಟಿನಲ್ಲಿ ಕಿರಿಚಿಕೊಳ್ಳುವ ವರ್ತಕನೋ ಆಗಬೇಕಾಗಿತ್ತೆಂದು ಅವರೇ ಹೇಳಿಕೊಂಡಿದ್ದಾರೆ.

# ೪. ವಿದೇಶಗಮನ

ಸರೋಜಿನಿಯ ನಾಟಕದ ಪ್ರತಿಯೊಂದನ್ನು ಅಘೋರನಾಥರು ನೈಜಾಮರಿಗೂ ಕಳುಹಿಸಿಕೊಟ್ಟರು. ಇದು ನಡೆದದ್ದು ೧೮೯೫ ರಲ್ಲಿ. ಆಗ ಸರೋಜಿನಿಗೆ ಹದಿನಾರು ವರ್ಷ. ನಾಟಕವನ್ನು ಓದಿ ನೈಜಾಮರು ತುಂಬಾ ಸಂತೋಷಪಟ್ಟರು. ಆಕೆಯ ಕವಿತಾ ಪ್ರತಿಭೆಯನ್ನು ಅವರಾಗಲೇ ಕೇಳಿದ್ದರು. ಈ ಪ್ರತಿಭೆಗೆ ತಕ್ಕ ಪ್ರೋತ್ಸಾಹಕೊಡುವುದು ಸೂಕ್ತವೆಂದು ಅವರು ಭಾವಿಸಿದರು. ಅಘೋರನಾಥರಿಗೆ ಒಂದು ದಿನ ಹೇಳಿಕಳುಹಿಸಿದರು. ರಾಜಾಜ್ಞೆ ಏನಿರಬಹುದೆಂದು ಊಹಿಸಲಾರದ ಅಘೋರನಾಥರು ಹೆದರಿಕೊಂಡೇ ಹೋದರು ರಾಜಸನ್ಮುಖಕ್ಕೆ. ಆದರೆ ಸರೋಜಿನಿಯ ಮಾತೆತ್ತಿದಾಗ ಅವರಿಗೆ ಧೈರ್ಯ ಬಂದಿತು. ಮಗಳಿಗೆ ಸಹಾಯ ಮಾಡುವುದರಲ್ಲಿ ತಂದೆಯ ಒಪ್ಪಿಗೆ ಇದೆಯೇ ಎಂದು ಕೇಳಿದರು. ಅಘೋರನಾಥರು ಅನಿವಾರ್ಯವಾಗಿ ಒಪ್ಪಿಕೊಳ್ಳಬೇಕಾಯಿತು. ಮಕ್ಕಳ ಏಳಿಗೆಯಲ್ಲಿ ಯಾವುದಕ್ಕೂ ಅವರು ಅಡ್ಡಿ ಬರುತ್ತಿರಲಿಲ್ಲ. ಇದರ ಪರಿಣಾಮವಾಗಿ ೧೮೯೫ ನೇ ಇಸವಿ ಸೆಪ್ಟಂಬರ್ ತಿಂಗಳಿನಲ್ಲಿ ಸರೋಜಿನಿ ವರ್ಷಕ್ಕೆ ಮುನ್ನೂರು ಪೌಂಡಿನ ವಿದೇಶೀ ಸ್ಕಾಲರ್‌ಷಿಪ್ ಪಡೆದು ಹಡಗೇರಿ ಇಂಗ್ಲೆಂಡಿಗೆ ಹೊರಟಳು. ಹದಿನಾರು ವರ್ಷದ ಹುಡುಗಿ ಆರು ಸಾವಿರ ಮೈಲಿಗಳಾಚೆ ಇರುವ ಪರದೇಶಕ್ಕೆ ಧೈರ್ಯದಿಂದ ಹೊರಟಳು. ಅಘೋರನಾಥರ ಹಳೆಯ ಸ್ನೇಹಿತರೊಬ್ಬರು ಇಂಗ್ಲೆಂಡಿಗೆ ಹೋಗುತ್ತಿದ್ದರು. ಅವರ ಜೊತೆ ಸರೋಜಿನಿಯೂ ಹಡಗಿನಲ್ಲಿ ಪ್ರಯಾಣ ಮಾಡಿದಳು. ಹಲವಾರು ದಿನ ಪ್ರಯಾಣಮಾಡಿ ಸರೋಜಿನಿ ಇಂಗ್ಲೆಂಡ್ ಮುಟ್ಟಿದಳು. ಅಲ್ಲಿ ಮಿಸ್ ಮ್ಯಾನ್ನಿಂಗ್ ಎಂಬ ಹೆಸರಾಂತ ಮಹಿಳೆ ಇದ್ದಳು. ಅವಳು ಇಂಗ್ಲೆಂಡಿನಲ್ಲಿದ್ದ ಭಾರತೀಯ ವಿದ್ಯಾರ್ಥಿಗಳ ಯೋಗಕ್ಷೇಮಕ್ಕಾಗಿ ಬಹಳ ಕೆಲಸ ಮಾಡಿದ್ದಳು. ಅವಳ ಆಶ್ರಯದಲ್ಲಿ ಸರೋಜಿನಿ ನೆಲೆಸಿದಳು. ಇದೊಂದು ಭಾಗ್ಯವಾಗಿಯೇ ಪರಿಣಮಿಸಿತು. ಏಕೆಂದರೆ ಮ್ಯಾನ್ನಿಂಗಳ ಮನೆಗೆ ಇಂಗ್ಲೆಂಡಿನ ಹೆಸರಾಗಿದ್ದ ಸಾಹಿತಿಗಳೆಲ್ಲ ಬರುತ್ತಿದ್ದರು. ಸಮಾಜದಲ್ಲಿ ಗಣ್ಯರಾದ ವ್ಯಕ್ತಿಗಳೂ ಬರುತ್ತಿದ್ದರು. ಆ ಮನೆಯಲ್ಲಿಯೇ ಮೊಟ್ಟ

2

ಮೊದಲನೆಯ ಬಾರಿಗೆ ಸರೋಜಿನಿಗೆ ಎಡ್ಮಂಡ್ ಗಾಸೆಯವರ (Edmund Gosse) ಪರಿಚಯವಾದದ್ದು. ಪ್ರಸಿದ್ಧ ನಾಟಕ ವಿಮರ್ಶಕ ವಿಲಿಯಂ ಆರ್ಡರ್ ಮತ್ತು ಸರೋಜಿನಿಯ ಪುಸ್ತಕಗಳನ್ನು ಅನಂತರ ಪ್ರಕಟಿಸಿದ ಹೈನೇಮನ್ (Heinemann) ಇವರ ಪರಿಚಯವಾದದ್ದು ಇಲ್ಲಿಯೇ.

ಸರಿಯಾದ ಆಶ್ರಯ ಸಿಕ್ಕಿದ ನಂತರ ಕಾಲೇಜಿಗೆ ಸೇರಬೇಕೆಂದು ಸರೋಜಿನಿ ಆಲೋಚನೆ ಮಾಡಿದಳು. ಕೇಂಬ್ರಿಡ್ಜ್ ವಿಶ್ವವಿದ್ಯಾನಿಲಯವನ್ನು ಸೇರಬೇಕೆಂದು ತೀರ್ಮಾನವಾಯಿತು. ಆದರೆ ಆ ವಿಶ್ವವಿದ್ಯಾನಿಲಯಕ್ಕೆ ಹದಿನೆಂಟು ವರ್ಷಗಳಿಗಿಂತ ಕಡಮೆ ವಯಸ್ಸಿನವರಿಗೆ ಪ್ರವೇಶ ದೊರೆಯುತ್ತಿರಲಿಲ್ಲ. ಸರೋಜಿನಿಗೆ ಇನ್ನೂ ಹದಿನಾರು ವರ್ಷಗಳು. ಅಂದ ಮೇಲೆ ಅದನ್ನು ಸೇರುವುದು ಕೂಡಲೇ ಸಾಧ್ಯವಾಗಲಿಲ್ಲ. ಆದ್ದರಿಂದ ಅಲ್ಲಿಯವರೆಗೆ ಲಂಡನ್ನಿನಲ್ಲಿದ್ದ ಕಿಂಗ್ಸ್ ಕಾಲೇಜಿನಲ್ಲಿ (Kings College) ಜರುಗುತ್ತಿದ್ದ ಉಪನ್ಯಾಸಗಳನ್ನು ಕೇಳುವುದಕ್ಕೆ ಹೋಗುತ್ತಿದ್ದಳು. ವಯಸ್ಸು ಹದಿನೆಂಟಾದಾಗ ಆಕೆಗೆ ಕೇಂಬ್ರಿಡ್ಜಿನ ಗಿರ್ಟನ್ ಕಾಲೇಜಿನಲ್ಲಿ ಪ್ರವೇಶ ದೊರೆಯಿತು. ಆದರೆ ಆ ವಿಶ್ವವಿದ್ಯಾನಿಲಯದ ಜೀವನ ಸರೋಜಿನಿಗೆ ಸರಿಬೀಳಲಿಲ್ಲ. ಆ ಶಿಸ್ತು ಹಾಗೂ ಚಾಚೂತಪ್ಪದೆ ನಡೆಸಬೇಕಾದ ದಿನಚರಿಯ ಕೆಲಸ ಅವಳಿಗೆ ಒಗ್ಗಲಿಲ್ಲ. ಅನೇಕ ನಿಯಮಗಳನ್ನು ಆಕೆ ಯಂತ್ರದಂತೆ ಪಾಲಿಸಬೇಕಾಗಿತ್ತು. ಆದರೆ ಆಕೆಯ ಮನಸ್ಸು ಲೀಲಾಜಾಲವಾಗಿ ವಿಹರಿಸಬೇಕೆಂದು ಆಶಿಸುತ್ತಿತ್ತು. ಹಾಗೆ ಕಾಲ ಕಳೆಯುತ್ತ ಕವಿತೆಗಳನ್ನು ರಚಿಸಬೇಕೆಂದು ಅನ್ನಿಸುತ್ತಿತ್ತು. ವಾಸ್ತವವಾಗಿ ಆಕೆ ಆಗಲೇ ಕವಿತೆಗಳ ರಚನೆಯಲ್ಲಿ ತೊಡಗಿದ್ದಳು. ಇದನ್ನು ನೋಡಿಯೇ ಕೇಂಬ್ರಿಡ್ಜ್‌ನಲ್ಲಿದ್ದ ಆಕೆಯ ಸಮಕಾಲೀನರೊಬ್ಬರು ಹೇಳಿದರು: "ಇಲ್ಲಿ ಭಾರತದ ಪುಟ್ಟ ಹುಡುಗಿಯೊಬ್ಬಳಿದ್ದಾಳೆ. ಅವಳಿಗೆ ಕವಿತೆಯನ್ನು ಕಟ್ಟುವುದಲ್ಲದೆ ಬೇರೊಂದು ಕೆಲಸವಿಲ್ಲ." ಎಂದು.

ಸರೋಜಿನಿ ಕೇಂಬ್ರಿಡ್ಜ್‌ಗೆ ಸೇರಿದ ಹಲವೇ ತಿಂಗಳಲ್ಲಿ ಆಕೆಯ ಆರೋಗ್ಯ ಕೆಟ್ಟಿತು. ಅದರಿಂದಾಗಿ ಆಕೆಯ ವಿದ್ಯಾಭ್ಯಾಸವೂ ಅಲ್ಲಿಗೇ ಮುಗಿಯಿತು. ೧೮೯೭ ರಲ್ಲಿ ಆಕೆ ಆರೋಗ್ಯಸುಧಾರಣೆಗೋಸ್ಕರ ಸ್ವಿಟ್ಜರ್‌ಲ್ಯಾಂಡ್ ಮತ್ತು ಇಟಲಿ ದೇಶಗಳಿಗೆ ಹೋದಳು. ಸ್ವಿಟ್ಜರ್‌ಲ್ಯಾಂಡಿನ ಪರ್ವತ ಕಂದರಗಳನ್ನೂ ರಮ್ಯ ಸರೋವರಗಳನ್ನೂ, ಯಾವಾಗಲೂ ಸೌಂದರ್ಯದಿಂದ

ಕೂಡಿರುವ ಕಾಡುಗಳನ್ನೂ ನೋಡಿ ಆಕೆಯ ಮನಸ್ಸು ಸೂರೆಹೋಯಿತು. ಇಟಲಿದೇಶದ ಪೂರ್ವೇತಿಹಾಸ ಹಾಗೂ ಅಲ್ಲಿಯ ಸೌಂದರ್ಯಸ್ಥಳಗಳು ಆಕೆಯಲ್ಲಿ ಸುಷುಪ್ತವಾಗಿದ್ದ ಭಾವನೆಗಳನ್ನು ಚೇತನಗೊಳಿಸಿದುವು. ಹದಿನಾಲ್ಕು ಹದಿನೈದು ಹದಿನಾರನೇ ಶತಮಾನಗಳಲ್ಲಿ ಯೂರೋಪುಖಂಡದಲ್ಲಾದ ಸಾಹಿತ್ಯ ಹಾಗೂ ಕಲೆಯ ಪುನರುಜ್ಜೀವನಕ್ಕೆ (Renaissance) ಇಟಲೀದೇಶ ಮಾತೃಸ್ಥಾನವಾಗಿತ್ತು. ದಾಂತೆಯ (Dante) ಜನ್ಮಭೂಮಿ ಇಟಲಿ. ರಾಫೆಲ್(Raphael)ಮತ್ತು ಮೈಕೇಲ್ ಆಂಜಲೋ (Michael Angelo)ಅವರಂತಹ ಮಹಾಪುರುಷರ ಮನೆ ಇಟಲಿ. ಮಜಿನಿ(Mazzini) ಮತ್ತು ಗರಿಬಾಲ್ಡಿ (Garibaldi) ಯರಂತಹ ಮಹಾವ್ಯಕ್ತಿಗಳನ್ನು ಸೃಷ್ಟಿಸಿದ ನಾಡು ಇಟಲಿ. ಇಂತಹ ವೈಭವದ ಇತಿಹಾಸ ಪರಂಪರೆಯ ಕಾರಣದಿಂದ ಇಟಲಿ ಸರೋಜಿನಿಯ ಮನಸ್ಸಿನಮೇಲೆ ಮಹತ್ಪರಿಣಾಮವನ್ನುಂಟು ಮಾಡಿತು.

ಹಲವಾರು ತಿಂಗಳುಗಳು ಇಟಲಿ ಮತ್ತು ಸ್ವಿಟ್ಜರ್‌ಲ್ಯಾಂಡಿನಲ್ಲಿದ್ದು ಆರೋಗ್ಯ ಸುಧಾರಿಸಿಕೊಂಡು ಸರೋಜಿನಿ ಇಂಗ್ಲೆಂಡಿಗೆ ಹಿಂದಿರುಗಿದಳು. ಆದರೆ ಓದನ್ನು ಮುಂದುವರಿಸುವ ಮನಸ್ಸು ಮಾತ್ರ ಆಕೆಯಲ್ಲಿರಲಿಲ್ಲ. ಮನಸ್ಸೆಲ್ಲ ಊರಿನ ಮೇಲಿತ್ತು. ಅದರ ಕಾರಣ ಮುಂದೆ ಗೊತ್ತಾಗುವುದು. ಅಂತೂ ಭಾರತಕ್ಕೆ ಹಿಂದಿರುಗುವುದೆಂದೂ, ಓದನ್ನು ಮುಂದುವರಿಸುವುದಿಲ್ಲವೆಂದೂ ನಿರ್ಧರಿಸಿದಳು.

ಮೂರು ವರ್ಷಗಳ ಕಾಲ ಸರೋಜಿನಿ ಇಂಗ್ಲೆಂಡಿನಲ್ಲಿದ್ದಾಗ ಆಕೆಗೆ ಅನೇಕ ವ್ಯಕ್ತಿಗಳ ಪರಿಚಯವಾಯಿತು. ಲಂಡನ್ನಿನಲ್ಲಿದ್ದಾಗ ಎಡ್ಮಂಡ್ ಗಾಸೆಯವರ ಪರಿಚಯವಾಯಿತಷ್ಟೆ. ಒಂದು ಸಲ ಪರಿಚಯವಾಯಿತೋ ಇಲ್ಲವೋ ಅದು ದಿನೇ ದಿನೇ ಬೆಳೆದು ಬಂದಿತು. ಆ ವಿಮರ್ಶಕರ ಮನೆಗೆ ಸರೋಜಿನಿ ಆಗಾಗ್ಗೆ ಹೋಗಿಬರುತ್ತಿದ್ದಳು. ಕೊನೆಗೆ ಆಕೆ ಅವರ ಅಚ್ಚುಮೆಚ್ಚಿನ ಅತಿಥಿಯಂತಾದಳು. ಆಕೆ ಬಂದರೆ ಅವರಿಗೆ ಬಹು ಆದರ, ಸಂತೋಷ ಹಾಗೂ ಆತ್ಮೀಯತೆ. ಅವಳು ಕವಿತೆಗಳನ್ನು ರಚಿಸುತ್ತಿದ್ದಾಳೆಂದು ಗಾಸೆಯವರಿಗೆ ಆಗಲೇ ಗೊತ್ತಾಗಿತ್ತು. ಒಂದು ದಿನ ಅವರು ತಮ್ಮ ಮನಸ್ಸಿನಲ್ಲಿಯೇ ಮಥಿಸುತ್ತಿದ್ದ ವಿಷಯವನ್ನು ಕೇಳಿದರು. ಸರೋಜಿನಿಯು ಬರೆದಿದ್ದ ಕವಿತೆಗಳನ್ನು ನೋಡಬೇಕೆಂದು ಅಪೇಕ್ಷೆ ಪಟ್ಟರು. ಸರೋಜಿನಿ

ಇಲ್ಲ ಎಂದು ಹೇಳಲು ಸಾಧ್ಯವಾಗಲಿಲ್ಲ. ಇದಾದ ಸ್ವಲ್ಪ ದಿನಗಳ ನಂತರ ಸರೋಜಿನಿ ತಾನು ಬರೆದಿದ್ದ ಕವಿತೆಗಳ ದೊಡ್ಡ ಗಂಟನ್ನೇ ಗಾಸೆಯವರ ಕೈಯಲ್ಲಿಟ್ಟಳು. ಚಿಕ್ಕವಯಸ್ಸಿನ ಸರೋಜಿನಿ ತನಗೆ ತೀರ ಹೊಸದಾದ ಇಂಗ್ಲಿಷ್ ಭಾಷೆಯಲ್ಲಿ ಕವನಗಳನ್ನು ಬರೆಯುವ ಸಾಹಸ ಮಾಡಿದ್ದಳು. ಗಾಸೆಯವರು ಗಂಟನ್ನು ಬಿಚ್ಚಿ ಹಾಳೆಗಳನ್ನು ತಿರುವಿ ಹಾಕಿದರು. ಅವರಿಗೆ ಆದ ನಿರಾಶೆ ಅಷ್ಟಿಷ್ಟಲ್ಲ. ತುದಿ ಬಾಯಿಗೆ ಬಂದದ್ದನ್ನು ಹೇಳಬೇಕೋ ಬೇಡವೋ ಎಂಬ ಸಂದಿಗ್ಧಕ್ಕೀಡಾದ ಅವರು ಮನಸ್ಸಿನಲ್ಲಿದ್ದುದನ್ನು ಹೇಳು ವುದೇ ಸರಿಯೆಂದು ನಿರ್ಧರಿಸಿ ಬಾಯಿಬಿಟ್ಟರು. ಅವರು ಏನು ಹೇಳಿದರೆಂಬು ದನ್ನು ಅವರ ಮಾತಿನಲ್ಲಿಯೇ ಕೇಳಿ :

"ಕೃತಕವಾದ ಶೈಲಿಯಲ್ಲಿ ಬರೆದಿರುವ ಕವನಗಳ ಇಡೀ ಕಟ್ಟನ್ನೇ ಕಸದ ಬುಟ್ಟಿಗೆ ಹಾಕೆಂದು ನಾನು ಬುದ್ಧಿವಾದ ಹೇಳಿದೆ. 'ನೀನು ಬಹು ಸೂಕ್ಷ್ಮಮತಿ; ಪಾಶ್ಚಾತ್ಯರ ಭಾಷೆಯನ್ನಷ್ಟೇ ಅಲ್ಲದೆ ಅವರ ಛಂದಶ್ಶಾಸ್ತ್ರ ವನ್ನೂ ಕರಗತಮಾಡಿಕೊಂಡಿರುವೆ. ಆದರೆ ನಾವು ಹಾರೈಸಿದ್ದ ಆಂಗ್ಲೇಯ ಭಾವನೆಗಳನ್ನೇ ಆಂಗ್ಲೇಯ ಆವರಣದಲ್ಲಿ ಬಿಸಿ ಮಾಡಿ ಬಡಿಸುವುದನ್ನಲ್ಲ ನಾವು ಹಾರೈಸಿದ್ದು, ಇಂಡಿಯಾ ದೇಶದ ಹೃದಯದರ್ಶನವನ್ನು, ಅಲ್ಲಿಯ ಮೂಲ ಭಾವನೆಗಳ ನೈಜ ವಿಶ್ಲೇಷಣವನ್ನು, ಪುರಾತನ ಮತದ ತತ್ವಗಳನ್ನು, ತನಗೊಂದು ಆತ್ಮವಿದೆಯೆಂದು ಪಾಶ್ಚಾತ್ಯವು ಕನಸು ಕಾಣುವ ಮೊದಲೇ ಪೌರ್ವಾತ್ಯದ ಆತ್ಮವನ್ನು ಉಜ್ವಲಗೊಳಿಸಿದ ನಿಗೂಢ ಸಂದೇಶಗಳನ್ನು. ನಮ್ಮ ನಾಡಿನಲ್ಲಿ ಕಾಣುವ ರಾಬಿನ್ ಮತ್ತು ಸ್ಕೈಲಾರ್ಕ್ ಹಕ್ಕಿಗಳ ಮೇಲೆ ಕವನ ಬರೆಯುವುದನ್ನು ನಿಲ್ಲಿಸಿ, ನಿನ್ನ ನಾಡಿನ ಹಣ್ಣು ಹೂ ಮರಗಿಡ ಬಳ್ಳಿಗಳ ಬಗ್ಗೆ ಬರೆ. ನಿನ್ನ ಕವನಕೇಂದ್ರ ಪರ್ವತ ಕಾನನಗಳಲ್ಲಿ, ಹೂದೋಟಗಳಲ್ಲಿ, ದೇವರ ಗುಡಿಗಳಲ್ಲಾಗಲಿ. ನಿನ್ನ ಹುಟ್ಟು ನಾಡಿನ ಜನರ ಬಗ್ಗೆ ಕವನಗಳನ್ನು ಕಟ್ಟು. ಒಟ್ಟಿನಲ್ಲಿ ಭಾರತದ ನಿಜವಾದ ಕೋಗಿಲೆ ಯಾಗು, ಉತ್ಕೃಷ್ಟ ಇಂಗ್ಲಿಷ್ ಸಾಹಿತ್ಯದ ಅರಗಿಳಿಯಾಗಬೇಡ."

ಗಾಸೆಯವರ ಈ ಸಲಹೆ ಸದುದ್ದೇಶ ಪೂರ್ವಕವಾಗಿತ್ತು. ಅದನ್ನು ಪಾಲಿಸುವುದು ಸೂಕ್ತವೆಂದು ಸರೋಜಿನಿ ಭಾವಿಸಿದಳು.

ಲಂಡನ್ನಿನಲ್ಲಿದ್ದಾಗ ಸರೋಜಿನಿಗೆ ಎಡ್ಮಂಡ್ ಗಾಸೆಯವರ ಪರಿಚಯ ವಾದಂತೆ ಕೇಂಬ್ರಿಡ್ಜ್‌ನಲ್ಲಿದ್ದಾಗ ಆರ್ಥರ್ ಸೈಮನ್ಸರ ಪರಿಚಯವಾಯಿತು.

ಸೈಮನ್ನರು ಗಾಸೆಯವರಂತೆ ಕವಿಗಳೂ ಆಗಿದ್ದರು, ವಿಮರ್ಶಕರೂ ಆಗಿದ್ದರು. ಈ ಇಬ್ಬರು ಮಹರ್ಷಿಯರ ಸಂಪರ್ಕ ಸರೋಜಿನಿಯ ಹೃದಯದಲ್ಲಿ ಎಂತಹ ಉತ್ಕೃಷ್ಟ ಕವಿತೆಗಳ ಸೃಷ್ಟಿಗೆ ನಾಂದಿಯಾಯಿತೆಂಬುದನ್ನು ಮುಂದೆ ನೋಡಬಹುದು.

ಹೀಗೆ ಮೂರು ವರ್ಷಗಳ ಕಾಲ ಹತ್ತೊಂಬತ್ತನೇ ಶತಮಾನದ ಪಾಶ್ಚಾತ್ಯ ಸಂಸ್ಕೃತಿಯ ಸವಿಯುಂಡು ಇಪ್ಪತ್ತನೇ ಶತಮಾನದ ಉದಯಕಾಲದಲ್ಲಿ ಸರೋಜಿನಿ ಮಾತೃಭೂಮಿಯ ಕಡೆ ಪ್ರಯಾಣಹೊರಟಳು. ಮನಸ್ಸೆಲ್ಲ ಮಾತೃಭೂಮಿಯ ದರ್ಶನಕ್ಕಾಗಿ ಹಾತೊರೆಯುತ್ತಿತ್ತು. ಯುಗಾಚಾರ್ಯ ಸ್ವಾಮಿ ವಿವೇಕಾನಂದರು ಅಮೆರಿಕಾ ಇಂಗ್ಲೆಂಡ್ ದೇಶಗಳನ್ನು ಸುತ್ತಿ ಭಾರತಕ್ಕೆ ಹಿಂದಿರುಗಲು ಹೊರಟಾಗ ಸ್ನೇಹಿತನೊಬ್ಬನು ಅವರನ್ನು ಕೇಳಿದನಂತೆ "ಸ್ವಾಮಿಜಿ, ನಾಲ್ಕು ವರ್ಷಗಳ ಕಾಲ ಪಶ್ಚಿಮ ದೇಶದ ಭೋಗಭೂಮಿಯಲ್ಲಿ ವಾಸಿಸಿದ ನಿಮಗೆ ಭಾರತ ವರ್ಷವು ಈಗ ಹೇಗೆ ಕಾಣುತ್ತದೆ?" ಎಂದು. ಆದಕ್ಕೆ ಸ್ವಾಮಿಗಳು ಈ ರೀತಿ ಉತ್ತರಿಸಿದರಂತೆ: "ನಾನಿಲ್ಲಿಗೆ ಬರುವುದಕ್ಕೆ ಮೊದಲು ಭಾರತ ಭೂಮಿಯನ್ನು ಪ್ರೀತಿಸುತ್ತಿದ್ದೆ. ಈಗಲಾದರೋ ಆ ಪುಣ್ಯ ಮಾತೃಭೂಮಿಯ ಮಣ್ಣಿನ ಹುಡಿಯೂ ಕೂಡ ನನಗೆ ಪವಿತ್ರತಮವಾಗಿದೆ; ಬೀಸುವ ಗಾಳಿಯು ಪಾವನಕರವಾಗಿದೆ. ಈಗ ನನಗದು ನಿಜವಾದ ಪುಣ್ಯ ಭೂಮಿಯಾಗಿದೆ, ಯಾತ್ರಾಸ್ಥಾನವಾಗಿದೆ; ತೀರ್ಥ ಕ್ಷೇತ್ರವಾಗಿದೆ."

ಇವು ಆಜೀವಪರ್ಯಂತ ಬ್ರಹ್ಮಚಾರಿಯಾಗಬೇಕೆಂದು ನಿರ್ಧರಿಸಿದ್ದ ಯೋಗಿಯ ಮಾತುಗಳು. ಆದರೆ ಜೀವನವನ್ನು ಭೋಗದಲ್ಲಿ ಕಳೆಯಬೇಕೆಂದು ನಿರ್ಧರಿಸಿದ್ದ ಹತ್ತೊಂಬತ್ತು ವರ್ಷದ ಅವಿವಾಹಿತ ಯುವತಿಗೆ ಭಾರತ ಮತ್ತಷ್ಟು ಪವಿತ್ರವಾಗಿ ಕಂಡಿರಬೇಕು. ಅದರಲ್ಲಿಯೂ ಆಕೆಯ ಹೃದಯದಲ್ಲಿ ಪ್ರೇಮವಂಕುರಿಸಿ ಬಳ್ಳಿಯಾಗತೊಡಗಿರುವಾಗ ಆ ಬಳ್ಳಿಗಾಶ್ರಯವಾಗಲು ಸಿದ್ಧವಾಗಿರುವ ಪ್ರಿಯನೊಬ್ಬನು ಭಾರತದಲ್ಲಿರುವಾಗ ಈ ಭಾರತ ನೂರ್ಮಡಿ ಪವಿತ್ರವಾಗಿರಬೇಕು!

ಬೊಂಬಾಯಿಯಲ್ಲಿ ಹಡಗು ಇಳಿದ ಸರೋಜಿನಿ ಹೈದರಾಬಾದಿಗೆ ಧಾವಿಸಿದಳು. ಮಗಳ ಕೀರ್ತಿಯನ್ನು ದೂರದಿಂದಲೇ ಕೇಳಿ ಸಂತೋಷಗೊಂಡಿದ್ದ ತಂದೆತಾಯಿಗಳು ಮಗಳನ್ನು ತೋಳ್ತೆರೆದು ಆಲಿಂಗಿಸಿ ಮುಂಡಾಡಿ

ದರು. ಮಗಳು ಕೇವಲ ಕವಯಿತ್ರಿಯೇ ಅಲ್ಲದೆ ಒಳ್ಳೆಯ ಭಾಷಣಕಾರಳೂ ಎಂಬ ಕೀರ್ತಿ ಸಂಪಾದಿಸಿದ್ದಳು. ಆರು ಸಾವಿರ ಮೈಲಿಗಳಾಚೆಯಿಂದ ಬರುತ್ತಿದ್ದ ಮಗಳ ಈ ಹೆಗ್ಗಳಿಕೆಯನ್ನು ಕೇಳಿ ತಂದೆ ತಾಯಿಗಳು ಆನಂದ ಪಟ್ಟಿದ್ದರು. ಅಲ್ಲಿಂದ ಬರುತ್ತಿದ್ದ ಪ್ರತಿ ಪತ್ರದಲ್ಲಿಯೂ ಪ್ರಶಂಸೆಯ ಮಾತುಗಳೇ ತುಂಬಿದ್ದುವು. ಓದುವುದನ್ನು ಮುಂದುವರಿಸಲಾರದುದಕ್ಕೆ ಅವರೇನೂ ವ್ಯಥೆಪಡಲಿಲ್ಲ. ನಿಜವಾದ ಓದು ಯಾವುದು ಎಂಬುದು ಅವರಿಗೆ ಚೆನ್ನಾಗಿ ಗೊತ್ತಿತ್ತು. ಒಲ್ಲದ ಗಂಟಲಿನಲ್ಲಿ ಕಡುಬು ತುರುಕುವುದು ಸರಿಯಲ್ಲವೆಂಬುದನ್ನು ವಿದ್ಯಾಭ್ಯಾಸದಲ್ಲಿ ಪರಿಣತರಾದ ಅಘೋರನಾಥ ಚಟ್ಟೋಪಾಧ್ಯಾಯರಿಗೆ ಹೇಳಿಕೊಡಬೇಕಾಗಿರಲಿಲ್ಲ. ವಾಸ್ತವವಾಗಿ ಮಗಳು ಗಳಿಸಿಕೊಂಡಿದ್ದುದು ವಿಶ್ವವಿದ್ಯಾನಿಲಯದ ಪದವಿಗಿಂತ ಮೇಲೆಂದು ಆ ಮಾತಾಪಿತೃಗಳು ಭಾವಿಸಿದರು. ಪುಸ್ತಕದಿಂದ ಕಲಿಯುವುದಕ್ಕಿಂತ ಪ್ರಪಂಚದಿಂದ ಕಲಿಯುವುದು ಹೆಚ್ಚು, ಅದನ್ನು ಮಗಳು ಕಲಿತಿದ್ದಾಳೆಂದು ಹಿಗ್ಗಿದರು. ವಿದೇಶದಿಂದ ಹಿಂದಿರುಗಿದ ಸರೋಜಿನಿ ಮಾತಾಪಿತೃಗಳ ಮಮತೆಯ ಮಗಳಾದಳು.

# ೫. ಶ್ರೀಮತಿ ನಾಯಿಡು

ವಿದೇಶಕ್ಕೆ ಹೋಗುವ ಮುನ್ನವೇ ಸರೋಜಿನಿಯ ಹೃದಯ ಮಂದಿರ ದಲ್ಲಿ ಪ್ರೇಮಾರಾಧನೆ ನಡೆದಿತ್ತು. ಶ್ರೀಮಂತರೂ ಗೌರವ ಮನೆತನದವರೂ ಆದ ಒಂದು ಸಂಸಾರ ಹೈದರಾಬಾದಿನಲ್ಲಿತ್ತು. ಆ ಸಂಸಾರದ ಕಣ್ಮಣಿಯಂತೆ ಗೋವಿಂದರಾಜುಲು ನಾಯಿಡು ಎಂಬ ಸುಶಿಕ್ಷಿತ ಯುವಕನಿದ್ದ. ಸಕಲ ರಿಗೂ ಆಶ್ರಯದಾತರಾಗಿದ್ದ ಅಘೋರನಾಥರ ಮನೆಗೆ ಗೋವಿಂದರಾಜು ಬರುವುದಕ್ಕೆ ಯಾವ ಅಡ್ಡಿಯೂ ಇರಲಿಲ್ಲ. ಮನೆಗೆ ಬಂದ ಆ ಯುವಕ ನನ್ನು ಸರೋಜಿನಿ ನೋಡುವುದಕ್ಕೂ ಯಾವ ಅಡ್ಡಿ ಇರಲಿಲ್ಲ. ನಾಲ್ಕಾರು ಸಲ ನೋಡಿದ ಆ ಯುವಕ ಯುವತಿಯರು ಒಬ್ಬರನ್ನೊಬ್ಬರು ಮೆಚ್ಚಿ ದರು. ಇಂತಹ ವಿಚಾರಗಳಲ್ಲಿ ಯಾವ ಮಾತಾಪಿತೃಗಳೇ ಆಗಲಿ ಸೂಕ್ಷ್ಮ ಮತಿಗಳಾಗಿರುತ್ತಾರೆ. ಅಂತಹುದರಲ್ಲಿ ಅಘೋರನಾಥ ವರದಸುಂದರಿ ದೇವಿಯರಿಗೆ ಮಗಳ ಮನಸ್ಸು ತಿಳಿಯದೇ ಹೋಗಲಿಲ್ಲ. ಹುಡುಗನಾಗಿ ದ್ದಾಗಲೇ ಜನಿವಾರ ಕಿತ್ತೆಸೆದ ಅಘೋರನಾಥರು ಪ್ರೇಮಕ್ಕೆ ಅಡ್ಡಿಬರುವ ವರಾಗಿರಲಿಲ್ಲ. ಆದರೆ ಸಮಾಜದ ಆಕ್ಷೇಪಣೆಗೆ ಯೋಚಿಸಬೇಕಾಗಿ ಬಂತು. ಸರೋಜಿನಿ ಬ್ರಾಹ್ಮಣ ಮನೆತನದವಳೆಂದು ಜನರಿಗೆ ಗೊತ್ತಿತ್ತು. ಗೋವಿಂದರಾಜು ಶೂದ್ರಮನೆತನದವನೆಂಬುದು ಎಲ್ಲರಿಗೂ ತಿಳಿದ ವಿಷಯ ವಾಗಿತ್ತು. ಸರೋಜಿನಿಯ ಮನೆಯಲ್ಲಿ ಬ್ರಾಹ್ಮಣರ ಆಚಾರ ವ್ಯವಹಾರ ಗಳಾವುವೂ ಇರಲಿಲ್ಲ. ಆದರೆ ದೊಡ್ಡವರನ್ನು ತಮ್ಮ ಜಾತಿಯವರೆಂದು ಹೇಳಿಕೊಂಡು ಹೆಮ್ಮೆಪಡುವ ಸಮಾಜ ಅವರನ್ನು ಅಪ್ಪಟ ಬ್ರಾಹ್ಮಣ ರೆಂದು ಕೊಂಡಾಡುತ್ತಿತ್ತು. ಅತ್ತ ಸಂಸ್ಕೃತಿಯಲ್ಲಿ ಕಡಮೆಯಲ್ಲದ ಗೋವಿಂದ ರಾಜುಲು ಮನೆತನವನ್ನು ಶೂದ್ರತ್ವದ ಶೂಲಕ್ಕೇರಿಸದೆ ಸಮಾಧಾನ ಗೊಳ್ಳುತ್ತಿರಲಿಲ್ಲ. ಈ ಸಮಾಜದ ಅಪವಾದವನ್ನು ಮೀರಿ ನಡೆಯುವುದು ಇಪ್ಪತ್ತನೇ ಶತಮಾನದ ಉತ್ತರಾರ್ಧದಲ್ಲಿ ಸುಲಭವಾಗಿ ಕಾಣಬಹುದು. ಆದರೆ ಇದು ಅರುವತ್ತು ವರ್ಷಗಳ ಹಿಂದಿನ ಮಾತು. ಸಮಾಜದ ಕಟ್ಟು ಪಾಡುಗಳು ಆಗಿನ್ನೂ ಭದ್ರವಾಗಿದ್ದುವು. ಮುಂದುವರಿದವರಲ್ಲಿ ಎಷ್ಟು ಕಟ್ಟುಕಟ್ಟಳೆಗಳಿದ್ದುವೋ ಅದಕ್ಕಿಂತ ಹೆಚ್ಚಾದ ಕಟ್ಟು ಕಟ್ಟಳೆಗಳು

ಹಿಂದುಳಿದವರಲ್ಲಿದ್ದುವು. ಬ್ರಾಹ್ಮಣನ ಮನೆಗೆ ಹೊಲೆಯ ಹೋದರೆ ಆಗುವ ಅಪವಿತ್ರತೆಗಿಂತ ಹೆಚ್ಚಾಗಿ ಹೊಲೆಯನ ಮನೆಗೆ ಬ್ರಾಹ್ಮಣ ಬಂದರೆ ಆಗುವ ಅನಾಹುತ ಹೆಚ್ಚೆಂದು ಭಾವಿಸಲ್ಪಟ್ಟಿತ್ತು.

ಗೋವಿಂದರಾಜುವನ್ನು ಮದುವೆಯಾಗುವುದೇ ಕೂಡದೆಂದು ಹೇಳಿ ಮಗಳ ಮನಸ್ಸನ್ನು ಮುರಿಯುವುದು ಅಘೋರನಾಥರಿಗಾಗಲೀ ವರದ ಸುಂದರಿದೇವಿಗಾಗಲೀ ಸರಿಯಾಗಿ ಕಾಣಲಿಲ್ಲ. ಸಂಬಂಧವನ್ನು ತಪ್ಪಿಸು ವುದಾದರೆ ಆ ರೀತಿ ತಪ್ಪಿಸುವುದು ಅವರಿಗೆ ಒಪ್ಪಲಿಲ್ಲ. ನೈಜಾಮರು ವಿಲಾಯತಿಗೆ ಹೋಗಲು ಸರೋಜಿನಿಗೆ ಒಂದು ಸ್ಕಾಲರ್‌ಷಿಪ್ ಕೊಟ್ಟರಷ್ಟೆ. ಒಂದು ವಿಧದಲ್ಲಿ ಇದು ಅಘೋರನಾಥರಿಗೆ ಸಹಾಯಕವಾಯಿತು. ಮಗಳು ದೂರ ಹೋದರೆ ಪ್ರೇಮ ಬದಲಾಯಿಸಿದರೂ ಬದಲಾಯಿಸಬಹುದೆಂದು ಅವರು ಆಲೋಚಿಸಿರಬೇಕು. ಅಥವಾ ಪ್ರಥಮಪ್ರೇಮ ಎಷ್ಟು ದಿನ ಸ್ಥಿರವಾಗಿ ನಿಂತೀತೆಂದು ನೋಡೋಣವೆಂದು ಭಾವಿಸಿರಬೇಕು. ಆದರೆ ಬದಲಾವಣೆ ನೈಜಪ್ರೇಮಕ್ಕೆ ಹೊರತು. ಮೂರು ವರ್ಷಗಳು ಉರುಳಿದರೂ ಸರೋಜಿನಿ ಗೋವಿಂದರಾಜುಲು ಅವರ ಪ್ರೇಮ ಕುಗ್ಗಲಿಲ್ಲ. ಅದರ ಬದಲು ಮತ್ತಷ್ಟು ಪುಟಗೊಂಡಿತು. ಗೋವಿಂದರಾಜುಲು ಆಗ ಕೇಂಬ್ರಿಡ್ಜಿಗೆ ಹೋಗಿದ್ದರು. ಅಲ್ಲಿ ಅವರು ಸರೋಜಿನಿಯನ್ನು ನೋಡುತ್ತಿದ್ದರೆಂದೂ ಅವರಿಬ್ಬರ ಪ್ರೇಮ ಸ್ಥಿರವಾಗಿ ಬೇರೂರಿತೆಂದೂ ಹೇಳುತ್ತಾರೆ. ಅಂತೂ ಸಪ್ತಸಾಗರಗಳು ಅಡ್ಡ ಬಂದರೂ ಅವರಿಬ್ಬರ ಪ್ರೇಮ ಚಲಿಸುವಂತಿರಲಿಲ್ಲ. ಅಚಲಪ್ರೇಮ ಎಂದೂ ಅಚಲವೇ. ಅದು ಹೆಚ್ಚಾಗಿ ಮಾನಸಿಕ ಪ್ರೇಮ. ವಿವಾಹ ಕೇವಲ ದೈಹಿಕ ಸಂಬಂಧವಷ್ಟೇ ಅಲ್ಲ, ಮಾನಸಿಕ ಮಿಲನವೂ ಹೌದು. ದೈಹಿಕ ಸಂಬಂಧ ಮಾನಸಿಕಮಿಲನಕ್ಕೆ ದಾರಿ ಅಷ್ಟೆ.

ಪರದೇಶದಿಂದ ಹಿಂದಿರುಗಿದ ಸರೋಜಿನಿ ತನ್ನ ಪ್ರೇಮವನ್ನು ಕಿಂಚಿತ್ತೂ ಬದಲಿಸಿರಲಿಲ್ಲ. ಅಂತೆಯೇ ನಾಯಿಡು ಅವರೂ ತಮ್ಮ ನಿರ್ಧಾರವನ್ನು ಚಲಿಸಿರಲಿಲ್ಲ. ಮೂರು ವರ್ಷಗಳ ಅವಧಿ ಅವರ ಪ್ರೇಮಕ್ಕೆ ಮತ್ತಷ್ಟು ಪುಟ ಹಾಕಿದಂತಾಗಿತ್ತು. ಈಗಂತೂ ಅವರಿಗೆ ಮನದಟ್ಟಾಯಿತು: ಅವರ ಪ್ರೇಮ ಅಮರವಾದುದು, ಜಾತಿ ಮತ ಭೇದಗಳನ್ನು ಮೀರಿದ್ದು ಎಂದು. ಸರೋಜಿನಿಯ ಆರೋಗ್ಯವೂ ಅಷ್ಟು ಚೆನ್ನಾಗಿಲ್ಲದುದನ್ನು ಕಂಡ ಅವರು ನಿರಾಶೆಯಿಂದೇನಾದರೂ ಮಗಳ ಮನೋವ್ಯಥೆಗೆ

ಕಾರಣವಿರಬಹುದೇ ಎಂದು ಆಲೋಚಿಸಿದರು. ಮಗಳಿಗೆ ತಕ್ಕ ವರನಿದ್ದಾನೆ ಗೋವಿಂದರಾಜುಲು. ಅವರ ತಂದೆ ಹೆಸರಾಂತ ಮಿಲಿಟರಿ ಡಾಕ್ಟರ್. ಮಗನೂ ವೈದ್ಯಶಾಸ್ತ್ರದಲ್ಲಿ ವಿದೇಶೀಯ ಉನ್ನತ ಪದವಿಗಳನ್ನು ಪಡೆದಿದ್ದನು. ಜೊತೆಗೆ ನೈಜಾಂ ಸರ್ಕಾರದಲ್ಲಿ ಉನ್ನತ ವೈದ್ಯಾಧಿಕಾರಿಯ ಹುದ್ದೆಯಲ್ಲಿದ್ದನು. ನಡೆ ನುಡಿಯಲ್ಲಿ ಸ್ವಚ್ಛವಾದವನು. ಹದಿನೆಂಟು ವರ್ಷದ ವಯಸ್ಸಿನಲ್ಲಿ ಬಹುಚಿಕ್ಕ ಹುಡುಗಿಯೊಬ್ಬಳನ್ನು ಮದುವೆಯಾಗಿದ್ದನು. ಆದರೆ ಆ ಹುಡುಗಿ ಒಂದು ವರ್ಷದೊಳಗೇ ತೀರಿಕೊಂಡಿದ್ದಳು. ಅನಂತರ ವಿದೇಶಕ್ಕೆ ಹೋಗಿ ವೈದ್ಯಶಾಸ್ತ್ರದಲ್ಲಿ ಪದವಿಗಳನ್ನು ಪಡೆದು ಬಂದಿದ್ದನು. ಹೈದರಾಬಾದಿನ ಶ್ರೀಮಂತ ಸಮಾಜದಲ್ಲಿ ಎಲ್ಲರ ಪ್ರೀತಿ ಗೌರವಗಳಿಗೂ ಪಾತ್ರನಾಗಿದ್ದನು. ವೈದ್ಯವೃತ್ತಿಯಲ್ಲಿ ಆತನಿಗಿದ್ದ ಸಂಪಾದನೆ ಯಾರಿಗಾದರೂ ಹೊಟ್ಟೆಕಿಚ್ಚುಪಡಿಸುವಷ್ಟಿತ್ತು.

ಹೀಗಿರುವಾಗ ತಂದೆತಾಯಿಗಳು ವಿವಾಹ ನಿಶ್ಚಯಮಾಡಿಬಿಟ್ಟರು. ಜಾತಿಮತದ ಕಟ್ಟುಕಟ್ಟಳೆಗಳೆಲ್ಲ ಕಿತ್ತುಹೋದುವು; ಪ್ರಾಂತಭೇದಗಳೆಲ್ಲ ನಿರ್ಮೂಲವಾದುವು. ವೈಭವದಿಂದ ವಿವಾಹ ಜರುಗಿತು. ತುಂಬಿ ತುಳುಕಾಡುತ್ತಿದ್ದ ಎರಡು ಪ್ರೇಮ ಸರೋವರಗಳು ಅಡ್ಡಿ ಆತಂಕಗಳ ಕಟ್ಟೆಯನ್ನು ಒಡೆದುಕೊಂಡು ಮಿಲನವಾಗಿ ಹರಿಯತೊಡಗಿದುವು. ವಿಲಾಯಿತಿಯಿಂದ ಬಂದ ಮೂರೇ ತಿಂಗಳಿನಲ್ಲಿ ಅಂದರೆ ೧೮೯೮ನೇ ಡಿಸೆಂಬರ್ ತಿಂಗಳಿನಲ್ಲಿ ಸರೋಜಿನಿ ಶ್ರೀಮತಿ ಸರೋಜಿನಿ ನಾಯಿಡು ಆದರು. ಇಡೀ ದೇಶವೇ ಈ ವಿವಾಹವನ್ನು ಹರಸುವ ಬದಲು, ತೆಗಳಿರಬೇಕು. ಮಡಿವಂತ ಜನ ತಮ್ಮ ಜಾತಿಯ ಮೈಲಿಗೆಯಾಯಿತೆಂದು ಕ್ರೋಧಗೊಂಡಿರಬೇಕು. ಆದರೆ ಶ್ರೀಮತಿ ಸರೋಜಿನಿ ನಾಯಿಡು ಶ್ರೀಮತಿ ನಾಯಿಡು ಆಗಿಯೇ ಉಳಿದರು.

ಮದುವೆಯಾದನಂತರ ಶ್ರೀಮತಿ ಸರೋಜಿನಿ ನಾಯಿಡು ಗಂಡನ ಮನೆಗೆ ಹೋದರು. ಮುದ್ದು ಹೆಂಡತಿಯೊಡನೆ ತಮ್ಮ ಚಂದದ ಮನೆಯಲ್ಲಿ ಸಂಸಾರ ಮಾಡಬೇಕೆಂದು ಗೋವಿಂದರಾಜುಲುಗೆ ಅನ್ನಿಸಿದ್ದು ಸ್ವಾಭಾವಿಕವೇ. ತಂದೆ ತಾಯಿಯರು ಮಗಳನ್ನು ಹರಸಿ ಕಳುಹಿಸಿಕೊಟ್ಟರು. ಬೇರೆ ಊರಿಗೆ ಹೋಗದೆ ಒಂದೇ ಊರಿನಲ್ಲಿದ್ದುದರಿಂದ ತಂದೆ ತಾಯಿಗಳಿಗೆ ಅಷ್ಟೇನೂ ಅಗಲಿಕೆ ಕಾಣಲಿಲ್ಲ. ಆದರೂ ಕೋಗಿಲೆಯ ಮರಿ ಒಂದು ಗೂಡಿನಿಂದ ಹಾರಿ ಮತ್ತೊಂದರ ಆಶ್ರಯ ಪಡೆಯಿತು.

ಹೊಸ ಸಂಸಾರ ಬಹು ಆನಂದದಿಂದ ಸಾಗಿತು. ಮನೆಯಲ್ಲಿ ಎತ್ತ ತಿರುಗಿದರತ್ತ ಪ್ರೀತಿಪುರಸ್ಕಾರಗಳ ಹೊಳೆಯೇ ಹರಿಯುತ್ತಿತ್ತು. ಡಾ. ಗೋವಿಂದರಾಜುಲು ನಾಯಿಡು ಪ್ರಿಯ ಮಡದಿಯ ಸಹವಾಸದಲ್ಲಿ, ಆಕೆಯ ಕಾವ್ಯಗಾನದ ಇಂಪಿನಲ್ಲಿ ಕಾಲ ಕಳೆದರು. ತಮ್ಮ ಈ ರಸಮಯ ಸಂಸಾರ ವನ್ನು ಶ್ರೀಮತಿ ಸರೋಜಿನಿ ನಾಯಿಡು ಅವರೇ ೧೯೦೪ ರಲ್ಲಿ ಇಂಗ್ಲೆಂಡಿನ ತಮ್ಮ ಹಳೆಯ ಗೆಳೆಯರಾದ ಆರ್ಥರ್ ಸೈಮನ್ನರಿಗೆ ಬರೆದ ಕಾಗದ ವೊಂದರಲ್ಲಿ ಹೀಗೆ ವರ್ಣಿಸಿದ್ದಾರೆ !

"ಬಹು ಸುಂದರವಾದ ಕವನಗಳು ಗಾಳಿಯಲ್ಲಿ ಹಾರಾಡುತ್ತಿರುವುದು ನಿಮಗೆ ಗೊತ್ತಿರಲಾರದು. ದೇವರ ದಯೆಯಿದ್ದರೆ ಈ ವರ್ಷ ನನ್ನ ಆತ್ಮದ ಬಲೆಯನ್ನು ಬೀಸಿ ಅವುಗಳನ್ನೆಲ್ಲ ಹಿಡಿಯುತ್ತೇನೆ. ದೇವರ ದಯೆಯಿದ್ದರೆ ನನಗೊಂದಿಷ್ಟು ಆರೋಗ್ಯಭಾಗ್ಯವನ್ನು ದಯಪಾಲಿಸೆಂದು ಬೇಡುತ್ತೇನೆ. ಒಂದಿಷ್ಟು ಆರೋಗ್ಯವಿದ್ದರೆ ಸಾಕು ನನ್ನ ಜೀವನ ಪರಿಪೂರ್ಣವಾಗುತ್ತದೆ. ಏಕೆಂದರೆ ಷೆಲ್ಲಿಯು ಹೇಳುವ 'ಆನಂದದ ಅಪ್ಸರೆಯೇ' ಇಲ್ಲಿ, ನನ್ನ ಪುಟ್ಟ ಮನೆಯಲ್ಲಿ, ವಾಸಮಾಡುತ್ತಿದ್ದಾಳೆ. ತೋಟದಲ್ಲಿರುವ ಹಕ್ಕಿಗಳ ಗಾನದಲ್ಲಿ ನನ್ನ ಮನೆ ಅದ್ದಿಹೋಗಿದೆ; ಪಡಸಾಲೆಯಲ್ಲಿ ಆಡುತ್ತಿರುವ ಮಕ್ಕಳ ಗಲಿಬಿಲಿಯಲ್ಲಿ ನನ್ನ ಮನೆ ತೇಲಿಹೋಗಿದೆ."

ಅಹುದು. ಆರೋಗ್ಯವೊಂದೇ ಬೇಕಾಗಿದ್ದುದು ಸರೋಜಿನಿಯ ಸಂಸಾರಜೀವನವನ್ನು ಪರಿಪೂರ್ಣಗೊಳಿಸಲು. ಪತಿಗೆ ತನ್ನ ಪತ್ನಿಯ ಮೇಲಿದ್ದ ಪ್ರೇಮ ಅಗಾಧವಾಗಿತ್ತು. ಪತ್ನಿಯೂ ಪತಿಯ ಸಹವಾಸದಲ್ಲಿ ಆತ್ಮದ ಅಗಾಧ ಆಕಾಂಕ್ಷೆಗಳ ಈಡೇರಿಕೆಯನ್ನು ಕಂಡಿದ್ದಳು. ದಂಪತಿಗಳಿಗೆ ಮಕ್ಕಳ ಭಾಗ್ಯವೇನೂ ಕಡಮೆಯಿರಲಿಲ್ಲ. ಅವರಿಗೆ ನಾಲ್ಕು ನಲ್ಮಕ್ಕಳಾದರು. ಎರಡು ಹೆಣ್ಣು, ಎರಡು ಗಂಡು. ಹೆಣ್ಣುಮಕ್ಕಳ ಹೆಸರು ಪದ್ಮಜಾ ಮತ್ತು ಲೀಲಾಮಣಿ. ಗಂಡುಮಕ್ಕಳ ಹೆಸರು ಜಯಸೂರ್ಯ ಮತ್ತು ರಣಧೀರ. ಈ ಮಕ್ಕಳ ಲಾಲನೆ ಪಾಲನೆಯೇ ತಾಯಿಯ ಬಹುಕಾಲವನ್ನು ತೆಗೆದು ಕೊಳ್ಳುತ್ತಿತ್ತು. ಬಿಡುವಾದಾಗ ಪುಸ್ತಕಗಳನ್ನು ಓದುವುದು, ಕವನಗಳನ್ನು ರಚಿಸುವುದು ಆಕೆಯ ಪ್ರಿಯವಾದ ಕೆಲಸವಾಗಿತ್ತು. ಆಕೆಯ ಹೃದಯದಲ್ಲಿ ಕವಿ ಹೊರಹೊಮ್ಮುತ್ತಿದ್ದ. ಆಕೆ ಕಂಡ ಕನಸುಗಳು ಇನ್ನೂ ಕನಸಾಗಿಯೇ ಉಳಿದಿದ್ದುವು. ಆದರೆ ಆ ಕನಸುಗಳು ನನಸಾಗುವ ಮೊದಲೇ ತಾನು

ಇಹಲೋಕದಿಂದ ಪರಲೋಕಕ್ಕೆ ಹೋಗಬೇಕಾಗಬಹುದೇನೋ ಎಂಬ ಸಂದೇಹ ಆ ಹೃದಯದಲ್ಲಿ ಕೀಟದಂತೆ ಕೊರೆಯುತ್ತಿತ್ತು. ಅದಕ್ಕೋಸ್ಕರವೇ ಸರೋಜಿನಿಯವರು 'ದೇವರ ದಯೆಯಿದ್ದರೆ ಈ ವರ್ಷ ನನ್ನ ಆತ್ಮದ ಬಲೆಯನ್ನು ಬೀಸಿ ಅವುಗಳನ್ನೆಲ್ಲ ಹಿಡಿಯುತ್ತೇನೆ. ದೇವರ ದಯೆಯಿದ್ದರೆ ನನಗೊಂದಿಷ್ಟು ಆರೋಗ್ಯಭಾಗ್ಯವನ್ನು ದಯಪಾಲಿಸೆಂದು ಬೇಡುತ್ತೇನೆ' ಎಂದು ದೇವರಲ್ಲಿ ಮೊರೆಯಿಟ್ಟಿದ್ದು.

ಆರೋಗ್ಯ ಸರಿಯಿಲ್ಲದಿದ್ದರೂ ಅವರು ದಿಟ್ಟತನದಿಂದ ಮುನ್ನುಗ್ಗಿದರು ದೇಹ ಸೂಕ್ಷ್ಮವಾಗಿದ್ದರೂ, ಆರೋಗ್ಯ ಹಾಗೂ ಹೀಗೂ ಇದ್ದರೂ ಮನಸ್ಸು ಸ್ಥೈರ್ಯದಿಂದಿತ್ತು. ಮೂಡಿದ ನಿರ್ಧಾರವನ್ನು ಮುಗಿಸಿಯೇ ತೀರುವೆನೆಂದುಕೊಂಡರು. ಜೊತೆಗೆ ಗಂಡನ ಪ್ರೋತ್ಸಾಹ ಅಪಾರವಾಗಿತ್ತು. ಸರೋಜವರಳಲು ಸೂರ್ಯೋದಯವಾಗಬೇಕಾಗಿತ್ತು. ಆ ಸೂರ್ಯೋದಯದಂತಿದ್ದರು ಡಾ. ನಾಯಿಡು ಅವರು.

# ೬. ಸರೋಜವರಳಿತು—ಕೋಗಿಲೆ ಹಾಡಿತು

ಈಗ ಆ ಸರೋಜವರಳಿ ಎಂತಹ ಕಂಪನ್ನು ಬೀರಿತೆಂಬುದನ್ನು ನೋಡೋಣ. ಅರಗಿಣಿ ಕೋಗಿಲೆಯಾದುದನ್ನು ಕಾಣೋಣ. ಸೌಂದರ್ಯವನ್ನು ಅನುಭವಿಸುವ ಇಚ್ಛೆಯೇ ಸರೋಜಿನಿಯನ್ನು ಕವಿಯಾಗಿ ಮಾಡಿದ್ದು. ಸೌಂದರ್ಯದ ಸಂಪರ್ಕವಾಯಿತೆಂದರೆ ಅವರ ನರಗಳು ಆನಂದದಿಂದ ಮಿಡಿಯುತ್ತಿದ್ದವು. ತಮ್ಮ ಈ ಅನುಭವದ ಬಗ್ಗೆ ಅವರು ಆರ್ಥರ್ ಸೈಮನ್ನರಿಗೆ ಕಾಗದದಲ್ಲಿ ಹೀಗೆ ಹೇಳಿದ್ದಾರೆ :

" ನನ್ನ ಪೂರ್ವಿಕರು ಸಾವಿರಾರು ವರ್ಷಗಳಿಂದ ಗಿರಿ ಗಹ್ವರ ಕಾನನಗಳನ್ನು ಪ್ರೀತಿಸುತ್ತ ಬಂದಿದ್ದಾರೆ; ಮಹಾಕನಸುಗಳನ್ನು ಕಂಡಿದ್ದಾರೆ; ಮಹಾವಿದ್ವಾಂಸರಾಗಿದ್ದಾರೆ; ಮಹಾಯೋಗಿಗಳಾಗಿದ್ದಾರೆ. ನನ್ನ ತಂದೆಯೂ ಕನಸು ಕಾಣುವವರೇ. ಮಹಾ ಕನಸುಗಳನ್ನು ಕಂಡೂ ಇದ್ದಾರೆ. ಅವರು ಮಹಾಪುರುಷರು. ಅವರ ಜೀವನ ಉಜ್ವಲ ನಷ್ಟ. (Magnificent failure) ಇಡೀ ಇಂಡಿಯಾದಲ್ಲಿ ಅವರಷ್ಟು ದೊಡ್ಡ ಪಂಡಿತರು ಬೇರೊಬ್ಬರಿಲ್ಲವೆಂದು ನಾನು ಭಾವಿಸಿದ್ದೇನೆ. ಅವರಷ್ಟು ಪ್ರೀತಿಪಾತ್ರರಾದವರೂ ಬೇರೊಬ್ಬರಿಲ್ಲವೆಂದು ತಿಳಿದಿದ್ದೇನೆ. ಅವರ ನೀಳವಾದ ಬಿಳಿಯ ಗಡ್ಡ, ಹೋಮರನನ್ನು ಹೋಲುವ ಮುಖ ಮತ್ತು ಮನೆಯ ಮೇಲ್ಛಾವಣಿ ಎಲ್ಲಿ ಬಿದ್ದಿತೋ ಎನ್ನುವಷ್ಟು ಗಟ್ಟಿಯಾಗಿ ನಗುವ ಅವರ ನಗು-ಇವು ನನ್ನ ತಂದೆಯ ಚಿತ್ರವನ್ನು ಮನಸ್ಸಿಗೆ ತಂದುಕೊಡುತ್ತವೆ. ಅವರು ತಮ್ಮ ಇಡೀ ಹಣವನ್ನೆಲ್ಲ ಎರಡು ಮಹಾ ಕೆಲಸಗಳಿಗಾಗಿ ವಿನಿಯೋಗಿಸಿದ್ದಾರೆ: ಒಂದನೆಯದು ಅನ್ಯರಿಗೆ ಸಹಾಯಮಾಡುವುದಕ್ಕಾಗಿ, ಮತ್ತೊಂದು ರಸತಂತ್ರದ ಸಿದ್ಧಿಗಾಗಿ. ಪ್ರತಿದಿನ ಅವರು ತಮ್ಮ ತೋಟದಲ್ಲಿ ದರ್ಬಾರು ನಡಸುತ್ತಾರೆ. ಆ ದರ್ಬಾರಿಗೆ ಎಲ್ಲಾ ಜಾತಿಯ ಎಲ್ಲಾ ಪಂಡಿತರೂ ಬರುತ್ತಾರೆ. ರಾಜರು, ಭಿಕ್ಷುಕರು, ಸನ್ಯಾಸಿಗಳು, ಕಳ್ಳಪೂಜಾರಿಗಳು ಎಲ್ಲರೂ ನೆರೆದು ಅವರೊಡನೆ ಆನಂದಪಡುತ್ತಾರೆ. ಎಲ್ಲರಿಗೂ ಒಂದೇ ರೀತಿಯ ಉಪಚಾರ. ತಂದೆಯ ರಸತಂತ್ರ ಹೇಳತೀರದು. ಹಗಲೂ ರಾತ್ರಿ ಪ್ರಯೋಗಗಳು ನಡೆಯುತ್ತಲೇ ಇರುತ್ತವೆ. ಹೊಸದೊಂದು ನಿಯಮನ (Prescription) ತಂದವರಿ

ಗೆಲ್ಲ ಸಹೋದರರಂತೆ ಅಲ್ಲಿ ಸ್ವಾಗತ. ಈ ರಸತಂತ್ರ ನಿಮಗೆ ತಿಳಿದಿರುವಂತೆ ಸೌಂದರ್ಯಕ್ಕೆ, ನಿತ್ಯಸೌಂದರ್ಯಕ್ಕೆ ಹಾತೊರೆಯುವ ಕವಿಯ ಐಹಿಕ ಪಡಿರೂಪ. ಕವನಗಳನ್ನು ಕಟ್ಟುವವರೂ, ಚಿನ್ನವನ್ನು ಮಾಡುವರೂ ಗೂಢತತ್ವಾನ್ವೇಷಣೆಗೆ ಗುಪ್ತವಾಗಿ ಕಾತರಿಸುವ ಲೋಕದ ಅಧಿಪತಿಗಳು. ನನ್ನ ತಂದೆಯಲ್ಲಿ ಕುತೂಹಲದ ಪ್ರತಿಭೆ ಇದೆ. ಅದೇ ವೈಜ್ಞಾನಿಕ ಪ್ರತಿಭೆಯ ಸರ್ವಸಾರ. ನನ್ನ ತಂದೆಯಲ್ಲಿರುವ ಕುತೂಹಲದ ಪ್ರತಿಭೆ ನನ್ನಲ್ಲಿ ಸೌಂದರ್ಯಾನುಭವಾಸಕ್ತಿಯಾಗಿದೆ."

ಸರೋಜಿನಿದೇವಿಯವರ ಸೌಂದರ್ಯಾನುಭೂತಿ ಎಷ್ಟು ಆಳವಾಗಿತ್ತೆಂಬುದನ್ನು ಸೈಮನ್ನರು ಈ ರೀತಿ ವರ್ಣಿಸಿದ್ದಾರೆ: "ಅವಳನ್ನು ಇಂಗ್ಲೆಂಡಿನಲ್ಲಿ ಕಂಡಿದ್ದವರಿಗೆಲ್ಲಾ ಆ ಪುಟ್ಟ ವ್ಯಕ್ತಿಯ ಜೀವನವೆಲ್ಲ ಕಣ್ಣಿನಲ್ಲಿ ಕೇಂದ್ರೀಕೃತವಾದಂತೆ ಭಾಸವಾಗುತ್ತಿತ್ತು. ಸೂರ್ಯಕಾಂತಿ ಹೂವು ಸೂರ್ಯನಕಡೆ ತಿರುಗುತ್ತಿರುವಂತೆ ಆಕೆಯ ಕಣ್ಣುಗಳು ಸೌಂದರ್ಯದ ಕಡೆ ತಿರುಗುತ್ತಿದ್ದುವು. ಆ ಕಣ್ಣುಗಳು ತೆರೆಯುತ್ತಾ ತೆರೆಯುತ್ತಾ ಎಷ್ಟು ದೊಡ್ಡದಾಗುತ್ತಿದ್ದುವೆಂದರೆ ನೋಡುತ್ತಿರುವವರಿಗೆ ಕಣ್ಣುಗಳಲ್ಲದೆ ಬೇರೆ ಕಾಣಿಸುತ್ತಿರಲಿಲ್ಲ. ಆಕೆ ತನ್ನ ದೇಶದ ಉಡುಪನ್ನು ಬಿಗಿಯಾಗಿ ಉಡುತ್ತಿದ್ದಳು. ಪುಟ್ಟಗಿದ್ದ ಅವಳನ್ನು ಆ ಉಡುಪಿನಲ್ಲಿ ಮತ್ತು ಉದ್ದವಾಗಿ ಇಳಿಯಬಿಟ್ಟ ಆಕೆಯ ಕಪ್ಪು ಕೂದಲಿನಲ್ಲಿ ನೋಡಿದರೆ ಆಕೆಯನ್ನು ಮಗುವೆಂದು ಭಾವಿಸಬೇಕಾಗುತ್ತಿತ್ತು. ಮಾತು ಕಡಿಮೆ. ಅವಳ ಮೆಲುದನಿ ಮೃದುಗಾನದಂತೆ ಭಾಸವಾಗುತ್ತಿತ್ತು. ಆಕೆ ಎಲ್ಲಿದ್ದರೂ ಏಕಾಂಗಿಯಾಗಿದ್ದಂತೆ ಕಾಣುತ್ತಿತ್ತು.

"ಈ ತೇಜೋವತಿಯ ಮೂಲಕ ನಾನು ಪೌರ್ವಾತ್ಯದ ಸಂಪರ್ಕ ಹಾಗೂ ಅದರ ಮೇಲಿನ ಹಿಡಿತವನ್ನು ಪಡೆದಂತಾಗುತ್ತಿತ್ತು. ಪೌರ್ವಾತ್ಯದ ವಿವೇಕವನ್ನು ಆಕೆಯಲ್ಲಿ ಕಂಡೆ. ಹದಿನೇಳು ವರ್ಷದ ಹುಡುಗಿಯಾದರೂ ಆಕೆಯಲ್ಲಿ ಅರುವತ್ತು ವರ್ಷದ ಮುದುಕಿಯ ವಿವೇಕವಿತ್ತು. ಪೌರ್ವಾತ್ಯದಲ್ಲಿ ಚಿಕ್ಕವಯಸ್ಸಿಗೇ ದೊಡ್ಡವರಾಗುತ್ತಾರೆ. ಈ ಮಗು ಆಗಲೇ ಜೀವನವನ್ನೆಲ್ಲ ಬಾಳಿದಂತಿತ್ತು. ಆದರೆ ಆಕೆಯಲ್ಲಿ ಮತ್ತೇನೊ ಒಂದು ವಿಶಿಷ್ಟವಾದುದಿತ್ತು. ಶರೀರದ ಈತಿಬಾಧೆಗಳೇ ಆಗಲಿ, ಮನಸ್ಸಿನ ವ್ಯಸನಗಳೇ ಆಗಲಿ ಆ ಧ್ಯಾನೈಕ ಮನಸ್ಸನ್ನು ಚಲಿಸುತ್ತಿರಲಿಲ್ಲ. ಅವಳು ಪದ್ಮಾಸನನಾದ ಬುದ್ಧನಂತಿದ್ದಳು.

"ಸಾಮಾನ್ಯ ಮನುಷ್ಯರನ್ನು ಅಳಿಸುವ ಅಥವಾ ನಗಿಸುವ ಸಾಮಾನ್ಯ ಲಕ್ಷಣಗಳಿರಲಿಲ್ಲ ಆಕೆಯಲ್ಲಿ. ಹನ್ನೆರಡನೇ ವಯಸ್ಸಿನಲ್ಲಿ ಆಕೆ ಮದ್ರಾಸ್ ವಿಶ್ವವಿದ್ಯಾನಿಲಯದ ಮೆಟ್ರಿಕ್ಯುಲೇಷನ್ ಪರೀಕ್ಷೆ ಪಾಸ್ ಮಾಡಿದಳು. ಅದು ಆಕೆಯ ಹೆಸರನ್ನು ಇಂಡಿಯಾದಲ್ಲೆಲ್ಲ ಮೆರೆಸಿತು. ಆದರೆ ಆ ಮೆರವಣಿಗೆ ಆಕೆಗೆ ಬೇಕಾಗಿರಲಿಲ್ಲ. ಆಕೆ ನನಗೊಮ್ಮೆ ಹೇಳಿದಳು: 'ನಿಜವಾಗಿಯೂ ನನಗೆ ಅದರಿಂದ ಸಂತೋಷವಾಗಲಿಲ್ಲ. ಅಂಥವು ನನ್ನ ಮನಸ್ಸಿಗೆ ಒಗ್ಗುತ್ತಿರಲಿಲ್ಲ' ಎಂದು.

"ಹಾಸ್ಯಪ್ರಿಯತೆ ಆಕೆಯ ಮತ್ತೊಂದು ಗುಣ. ಅದು ಆಕೆಯ ವಿಚಿತ್ರ ವಿವೇಕದೊಡನೆ ಬೆರೆತುಕೊಂಡಿತ್ತು; ಯಾವಾಗಲೂ ಎಚ್ಚರಗೊಂಡಿತ್ತು. ಆಕೆ ಒಮ್ಮೆ ಬರೆದ ಪತ್ರದಲ್ಲಿ ಹಾಸ್ಯದ ಜೊತೆಗೆ ಏನೋ ಒಂದು ಗೂಢಭಾವನೆಯೂ ಇತ್ತು: 'ಗಳಿಗೆ ಗಳಿಗೆಗೆ ಬದುಕುವ ಗೂಢ ತತ್ವವನ್ನು ನಾನು ಕಲಿತಿದ್ದೇನೆ. ಇಂದು ತಿಂದು ಉಂಡು ಕುಡಿದು ಆನಂದ ಪಡು; ನಾಳೆ ನಾವು ಸಾಯುತ್ತೇವೆ ಎಂಬ ತತ್ವದಂತೆ ಇದು ಕಂಡರೂ ಗೂಢ ತತ್ವ. ನಾನು ಸಾವಿನೊಡನೆ ಸೆಣೆಸಿದ ಎಷ್ಟೋ ನಿನ್ನೆಗಳನ್ನು ಕಳೆದಿದ್ದೇನೆ. ಆದರ ಅನುಭವದಿಂದ ನನಗನ್ನಿಸುತ್ತದೆ: ಇಂದು ತಿಂದು ಕುಡಿದು ಆನಂದಪಡು, ನಾಳೆ ನಾವು ಸಾಯುತ್ತೇವೆ ಎಂಬುದರಲ್ಲಿ ಅಪಾರ ವಿವೇಕವಿದೆಯೆಂದು. ನನಗೆ ಅದು ಕೇವಲ ರೂಪಕವಲ್ಲ; ವಾಸ್ತವಾನುಭವ. ನಾನು ಯಾವ ನಾಳೆ ಸತ್ತರೂ ಸಾಯಬಹುದು. ನಾನು ಸಮಾಧಿಯಿಂದ ಹಿಂದಿರುಗಿ ಇನ್ನೂ ಎರಡು ತಿಂಗಳೂ ಆಗಿಲ್ಲ. ಆದ್ದರಿಂದ ಅರಳುವ ಆನಂದದಲ್ಲಿ ಮೆರೆಯುವ ಬದಲು ಬೇರೊಂದು ರೀತಿಯಲ್ಲಿರುವುದು ಏನು ಸುಖ? ದೇವರು ನನಗೆ ಕೊಟ್ಟಿರುವುದರಲ್ಲಿ ಅಥವಾ ನನ್ನ ಸ್ವಭಾವಕ್ಕೆ ಬಂದುದರಲ್ಲಿ, ನಗುವುದನ್ನು ನಾನು ಅತ್ಯಮೂಲ್ಯವೆಂದು ಭಾವಿಸಿದ್ದೇನೆ'

"ಹಾರಾಡುವ ಹಕ್ಕಿಯಂತೆ ಹಾಡಬೇಕೆಂದು ಆಕೆಯ ಆಸೆ. ಆಕೆಯಲ್ಲಿದ್ದ ಉಜ್ವಲ ಆತ್ಮ ಆಕೆಯ ಕೃಶ ಶರೀರವು ಹಿಡಿಸಲಾರದಷ್ಟು ದೊಡ್ಡದಾಗಿತ್ತು. ಆಕೆಯ ಆಕಾಂಕ್ಷೆ ಪೂರ್ಣವಾದದ್ದೇ ಇಲ್ಲ. ಆದರೆ ಇಂಗ್ಲೆಂಡಿನಲ್ಲಿ ಕಾಣದ್ದನ್ನು ಇಟಲಿಗೆ ಹೋದಾಗ ಕಂಡಳು. ಇಟಲಿಯಿಂದ ಬರೆದ ಪತ್ರಗಳು ನಂಬಿಕೆಯನ್ನು ಸೂಸುತ್ತವೆ. ಫ್ಲೊರೆನ್ಸಿನಿಂದ ಹೀಗೆ ಬರೆದಿದ್ದಳು ಆಕೆ: ಈ ಇಟಲಿ ಚಿನ್ನದಿಂದ ನಿರ್ಮಿತವಾಗಿದೆ; ಆ ಚಿನ್ನ

ಅರುಣೋದಯದ ಚಿನ್ನ, ಹಗಲಿನ ಚಿನ್ನ, ನಕ್ಷತ್ರಗಳ ಚಿನ್ನ. ಇದು ಮಂತ್ರದ ಮೇ ತಿಂಗಳು. ಎಲ್ಲವೂ ಮೋಹನ ನೃತ್ಯದಲ್ಲಿ ನಲಿಯುತ್ತಿದೆ....ದೇವರೆ, ಫ್ಲೊರೆನ್ಸ್ ಎಷ್ಟು ಸುಂದರವಾಗಿದೆ. ನಾನು ಇಂದು ಬದುಕಿದ್ದು ಎಷ್ಟು ಸಾರ್ಥಕವಾಯಿತು !....ಎರಡು ಸಾವಿರ ವರುಷಗಳ ಹಿಂದೆ ಎತ್ರೂನಿಯದ (Etrunia) ಸತ್ತ ದೇವರುಗಳು ಈ ಸೌಂದರ್ಯವನ್ನು ಮೊಗೆಮೊಗೆದು ಕುಡಿದಿವೆ. ಸತ್ತ ದೇವರುಗಳೆಂದೆನೆ ನಾನು ! ಇಲ್ಲ, ದೇವರುಗಳಿಗೆ ಸಾವಿಲ್ಲ. ಅವು ಇನ್ನೂ ಇಲ್ಲಿಯ ಗುಡ್ಡಗಳ ಅಂಚಿನಲ್ಲಿ ಅಲೆದಾಡುತ್ತಿವೆ. ಕನಸು ಗಾಣುವ ಕಣ್ಣಿನಿಂದ ಅವುಗಳನ್ನು ನೋಡಿಯೂ ಇದ್ದೇನೆ'

"ಇಟಲಿಯಲ್ಲಿ ಸಂನ್ಯಾಸಿಗಳ ಮುಖವನ್ನು ಈಕ್ಷಿಸಿದಾಗ ಆಕೆಗೆ ಈ ಭೋಗ ಜೀವನವನ್ನು ತ್ಯಜಿಸಿ ಆ ತ್ಯಾಗ ಜೀವನವನ್ನು ನಡಸಲು ಮನಸ್ಸು ಒಮ್ಮೆ ಎಳಸುತ್ತದೆ ; ನಿರ್ವಾಣದ ಕಡೆ ಆಸೆಯಾಗುತ್ತದೆ. 'ಆದರೆ ರಕ್ತ ವನ್ನು ಬಿಸಿಮಾಡುವ ಬಿಸಿಲಿಗೆ ಬಂದರೆ, ಬೀದಿಯಲ್ಲಿ ಆತುರದಿಂದ ತಿರುಗಾ ಡುವ ಸ್ತ್ರೀಪುರುಷರ ಕುತೂಹಲ ವದನಗಳನ್ನು ನೋಡಿದರೆ, ಜೀವನದ ಉಬ್ಬು ತಗ್ಗುಗಳನ್ನು ಮುದ್ರೆಯೊತ್ತಿಕೊಂಡ ಮುಖಗಳನ್ನು ಈಕ್ಷಿಸಿದರೆ, ಹೃದಯವೇ ಬಾಯಿಗೆ ಬಂದಂತಾಗುತ್ತದೆ. ಇಲ್ಲ, ಇಲ್ಲ, ಇಲ್ಲ, ಸಾವಿರ ಸಾರಿ ಇಲ್ಲ. ಯಾರು ತಾನೆ ಬೇಕೆಂದು ಈ ಪ್ರಪಂಚದ ವರ್ಣಮಯ ಹಾಗೂ ಅವಿಶ್ರಾಂತ ಆವೇಶದ ಜೀವನವನ್ನು ತ್ಯಾಗಮಾಡಿಯಾರು ?' "

ಇದು ಸರೋಜಿನಿಯ ಮನಸ್ಸಿನ ನೈಜ ಚಿತ್ರ. ಈ ಜೀವನದ ಸುಖ ಗಳನ್ನು ಚೆನ್ನಾಗಿ ಅನುಭವಿಸಬೇಕೆಂದು ಅವರು ನಿರ್ಧಾರಮಾಡಿದ್ದರು. ತ್ಯಾಗಮೂರ್ತಿ ಗಾಂಧೀಜಿಯ ಅನುಯಾಯಿನಿಯಾದರೂ ಅವರು ಭೋಗ ವನ್ನು ಮರೆತಿರಲಿಲ್ಲ. ಬೊಂಬಾಯಿಗೆ ಹೋದಾಗಲೆಲ್ಲ ಅಲ್ಲಿ ಎಷ್ಟು ದಿನ ಗಳಿದ್ದರೂ ಸರಿಯೇ ತಾಜ್‌ಮಹಲ್ ಹೋಟೆಲಿನಲ್ಲಿಯೇ ಅವರ ಬಿಡಾರ. ಅವರಿಗೆ ಬೇಕಾದ ಕೋಣೆಗಳು ಸದಾ ಸಿದ್ಧವಾಗಿರುತ್ತಿದ್ದುವಂತೆ. ಕಂಡ ವರು ಹೇಳುತ್ತಾರೆ ಸರೋಜಿನಿ ಬಾಳಿದ್ದು, ಉಂಡದ್ದು, ಉಟ್ಟದ್ದು, ಹಾಡಿದ್ದು, ಮಾತಾಡಿದ್ದು ಎಲ್ಲವೂ ರಾಜವೈಭವದ ರೀತಿಯಲ್ಲಿ ಎಂದು. ನಿಜ ಅವರು ರಾಣಿಯಂತೆಯೆ ಇದ್ದರು. ಸಭೆಗಳಿಗೆ ಬಂದರೆ ರಾಜಠೀವಿ ಮಾತಾಡಿದರೆ ರಾಜಠೀವಿ ; ಬಟ್ಟೆಬರೆಗಳನ್ನು ತೊಡುವುದರಲ್ಲಿ ರಾಜಠೀವಿ. ಆದರೆ ಆ ಠೀವಿಯಲ್ಲಿ ಅಹಂಕಾರವಿರಲಿಲ್ಲ, ಗಾಂಭೀರ್ಯವಿತ್ತು.

ಎಲ್ಲಿ ನಾಳೆ ಸಾಯುವೆನೋ ಎಂದು ಮನಸ್ಸಿನಲ್ಲಿ ನಿರಾಶೆ ಇದ್ದರೂ ಸರೋಜಿನಿ ಧೈರ್ಯ ಮಾಡಿದರು ಬದುಕಲೇ ಬೇಕೆಂದು ಮತ್ತು ಈ ಜೀವನದ ಸುಖ ಸೌಭಾಗ್ಯಗಳನ್ನು ಅನುಭವಿಸಲೇಬೇಕೆಂದು. ಆಗ ಮನಸ್ಸಿನ ನಿರಾಶೆ ಮಾಯವಾಗಿ ಆಸೆ ಮೂಡಿತು. ೧೯೦೪ ರಲ್ಲಿ ಮನಸ್ಸಿನ ಮೇಲೆ ಕವಿದಿದ್ದ ಮೋಡ ಕರಗಿತು. ೧೯೦೫ ರಲ್ಲಿ ಕವಿಹೃದಯದಿಂದ ಉತ್ಕೃಷ್ಟ ಕವಿತೆಗಳು ಹೊರ ಬಂದುವು. ಎಡ್ಮಂಡ್ ಗಾಸೆಯವರು ಇತ್ತ ಸಲಹೆ ಈಗ ಕಾರ್ಯರೂಪಕ್ಕಿಳಿಯಿತು. ಭಾರತದ ಜನಜೀವನ ಹಾಗೂ ಸಂಸ್ಕೃತಿಯ ಮೇಲೆ, ಮರ ಗಿಡ ಬಳ್ಳಿ ಹಕ್ಕಿಪಕ್ಷಿಗಳ ಮೇಲೆ ಕವನಗಳು ಮೂಡಿದುವು. ಈ ಕವನಗಳು ಕೇವಲ ಆತ್ಮ ತೃಪ್ತಿಗಾಗಿ ಬರೆದ ಹಾಡುಗಳು. ಹಣಕ್ಕಾಗಲೀ ಯಶಸ್ಸಿಗಾಗಲೀ ಬರೆದವುಗಳಲ್ಲ. ಆದರೂ ಇವನ್ನು ಪ್ರಕಟಿಸದೆ ಇಟ್ಟುಕೊಳ್ಳಲು ಸಾಧ್ಯವಾಗಲಿಲ್ಲ. ಸ್ನೇಹಿತರ ಒತ್ತಾಯದಿಂದ ಸರೋಜಿನಿ ತನ್ನ ಕೆಲವು ಕವನಗಳನ್ನು ಅಚ್ಚು ಹಾಕಿಸಿ ಬೇಕಾದವರಿಗೆ ಮಾತ್ರ ಹಂಚಿದರು. ಆರ್ಥರ್ ಸೈಮನ್ನರ ಗಮನಕ್ಕೂ ಇವು ಹೋದುವು. ಅವರು ಇವುಗಳನ್ನು ಓದಿ ಬಹಳ ಸಂತೋಷಪಟ್ಟು ಪ್ರಕಟಿಸುವ ಆವಶ್ಯಕತೆಯನ್ನು ಒತ್ತಿ ಹೇಳಿದರು. ಆಗ ಸರೋಜಿನಿ ತಮ್ಮ ಕವಿತೆಗಳನ್ನು ಪ್ರಕಟಿಸಿ ಬೆಳಕಿಗೆ ತರಬೇಕಾಯಿತು.

ಅವರ ಕವನಗಳು ಮೂರು ಗುಚ್ಛಗಳಾಗಿ ಬೆಳಕು ಕಂಡವು. ಮೊಟ್ಟ ಮೊದಲು ಅಂದರೆ ೧೯೦೫ ರಲ್ಲಿ 'The Golden Threshold' ಅಥವಾ 'ಚಿನ್ನದ ಹೊಸ್ತಿಲು' ಎಂಬ ಕಾವ್ಯ ಸಂಗ್ರಹ ಪ್ರಕಟವಾಯಿತು. ೧೯೧೨ ರಲ್ಲಿ 'The Bird of Time' 'ಕಾಲದ ಪಕ್ಷಿ'ಯೂ, ೧೯೧೭ ರಲ್ಲಿ 'The Broken wing' 'ಮುರಿದ ರೆಕ್ಕೆ'ಯೂ ಪ್ರಕಟವಾದುವು.

ಚಿನ್ನದ ಹೊಸ್ತಿಲು' ಎಂಬ ಕಾವ್ಯ ಸಂಗ್ರಹಕ್ಕೆ ಆರ್ಥರ್ ಸೈಮನ್ನರು ಮುನ್ನುಡಿ ಬರೆದರು. ಈ ಗ್ರಂಥವನ್ನು ಸರೋಜಿನಿ ತಮಗೆ ದಾರಿ ತೋರಿಸಿಕೊಟ್ಟ ಎಡ್ಮಂಡ್ ಗಾಸೆಯವರಿಗೆ ಅರ್ಪಿಸಿದರು. ಗ್ರಂಥ ಪ್ರಕಟವಾದದ್ದೇ ತಡ ಇಂಗ್ಲಿಷ್ ತಿಳಿದ ಎಲ್ಲರೂ ಅದರ ಸೊಗಸನ್ನು ಹೊಗಳಿದ್ದೇ ಹೊಗಳಿದ್ದು. ಇಲ್ಲಿ 'ಪೌರ್ವಾತ್ಯದ ಮಂತ್ರವಿದೆ' ಎಂದರು. 'ಸುಂದರ ಕವಿತೆಗಳಿವೆ' ಎಂದರು. 'ಕೇವಲ ಚಿನ್ನವಲ್ಲ ಅಪರಂಜಿ' ಎಂದು ಕೊಂಡಾಡಿದರು.

ಈ ಗ್ರಂಥದಲ್ಲಿ ನಲವತ್ತು ಕವನಗಳಿವೆ. ಮೊಟ್ಟಮೊದಲಿನ 'ಪಲ್ಲಕ್ಕಿ

ಹೊರುವವರು' ಎಂಬ ಕಾವ್ಯವನ್ನು ಓದಿದ ತಕ್ಷಣ ಕವಿತೆಯ ಸೊಗಸು ಗೊತ್ತಾಗುತ್ತದೆ. ಈ ಕವನದಲ್ಲಿ ಕಾಣುವ ಗತಿ, ಲಯ, ಸಂಗೀತ ಹಾಗೂ ಲಾಲಿತ್ಯವನ್ನು ಆಂಗ್ಲೇಯ ಸಾಹಿತ್ಯದ ವಿಶಾಲ ಭಂಡಾರದಲ್ಲಿಯೂ ಕಾಣಲು ಸಾಧ್ಯವಿಲ್ಲವೆಂದು ಒಬ್ಬ ವಿಮರ್ಶಕರು ಹೇಳಿದ್ದಾರೆ. ನವ ವಧು ವೊಬ್ಬಳು ಪಲ್ಲಕ್ಕಿಯಲ್ಲಿ ಕುಳಿತು ಗಂಡನ ಮನೆಗೆ ಹೋಗುತ್ತಿರಬಹುದು. ಆಕೆಯ ಮನಸ್ಸಿನಲ್ಲಿ ಹಿಡಿಸಲಾರದಷ್ಟು ಹಿಗ್ಗು. ನೆನೆನೆನೆಯುತ್ತಾ ಕಣ್ಣಿನಲ್ಲಿ ಆನಂದಬಾಷ್ಪಗಳು ಉದುರುತ್ತಿವೆ. ಪಲ್ಲಕ್ಕಿಯನ್ನು ಹೊರುತ್ತಿರುವ ಬೋಯಿಗಳಿಗೂ ಅಷ್ಟೇ ಹಿಗ್ಗು. ಆ ಹಿಗ್ಗಿನಲ್ಲಿ ಹಾಡುತ್ತ ಹೋಗುತ್ತಿದ್ದಾರೆ. ಸೌಂದರ್ಯರಾಶಿಯಂತಿರುವ ಹೊರೆಯನ್ನು ಹೊತ್ತ ಅವರಿಗೆ ಕಷ್ಟವೇ ಕಾಣದು. ಆನಂದದಲ್ಲಿ ಹಾಡಿಕೊಂಡು ದಾರಿ ಸಾಗಿಸುತ್ತಿದ್ದಾರೆ :

'ನಾವು ಈಕೆಯನ್ನು ಮೆಲ್ಲನೆ, ಬಹು ಮೆಲ್ಲನೆ ಸಾಗಿಸುತ್ತಿದ್ದೇವೆ. ನಮ್ಮ ಹಾಡಿನ ಗಾಳಿಯಲ್ಲಿ ಈಕೆ ಹೂವಿನಂತೆ ಒನೆಯುತ್ತಿದ್ದಾಳೆ. ಹೊಳೆಯ ನೊರೆಯನ್ನು ಸೋಂಕಿ ಹಕ್ಕಿ ಚಿಮ್ಮುವಂತೆ ಈಕೆ ಚಿಮ್ಮುತ್ತಿದ್ದಾಳೆ. ಕನಸಿನ ತುಟಿಗಳಿಂದ ತಿಳಿನಗು ತೇಲಿಬರುವಂತೆ ಈಕೆ ತೇಲಿ ಬರುತ್ತಿದ್ದಾಳೆ. ನಾವು ಬಹು ಆನಂದದಲಿ ದಾರಿ ಸಾಗಿಸುತ್ತಿದ್ದೇವೆ. ದಾರಕ್ಕೆ ಪೋಣಿಸಿದ ಮುತ್ತನ್ನು ಹೊರುವಂತೆ ಹೊರುತ್ತಿದ್ದೇವೆ.

'ಮೃದುಮಂದಗತಿಯಲ್ಲಿ ನಾವೀಕೆಯನ್ನು ಸಾಗಿಸುತ್ತಿದ್ದೇವೆ. ನಮ್ಮ ಹಾಡಿನ ಮಂಜಿನಲೀಕೆ ನಕ್ಷತ್ರದಂತೆ ಹೊಳೆಯುತ್ತಿದ್ದಾಳೆ. ಅಲೆಯ ಮೇಲೆ ಮಿಂಚುವ ಕಿರಣದಂತೆ ಈಕೆ ಮಿಂಚುತ್ತಿದ್ದಾಳೆ. ವಧುವಿನ ಕಣ್ಣಿನಿಂದ ಬೀಳುವ ಹನಿಯಂತೆ ಈಕೆ ಬೀಳುತ್ತಿದ್ದಾಳೆ. ನಾವು ಈಕೆಯನ್ನು ಮೆಲ್ಲನೆ, ಬಹು ಮೆಲ್ಲನೆ ಸಾಗಿಸುತ್ತಿದ್ದೇವೆ. ದಾರಕ್ಕೆ ಪೋಣಿಸಿದ ಮುತ್ತನ್ನು ಹೊರುವಂತೆ ಹೊರುತ್ತಿದ್ದೇವೆ.'

ಈ ಹಾಡಿನ ಸೊಗಸು ಓದಿ ಊಹಿಸಿಕೊಂಡಷ್ಟೂ ಹೆಚ್ಚುತ್ತದೆ.

'ಭಾರತದ ನೇಯ್ಗೆಯವರು' ಎಂಬ ಕವನದಲ್ಲಿ ಗೂಢವಾದ ಅರ್ಥ ಅಡಗಿದೆ. ಮನುಷ್ಯನ ಹುಟ್ಟು, ಮದುವೆ, ಸಾವುಗಳ ಅರ್ಥ ಸೂಚಕವಾಗಿದೆ :

‘ ನೇಯ್ಗೆಯವರೆ, ಬೆಳಗಿನ ಜಾವ ಇಷ್ಟೊಂದು ಸೊಗಸಾದ ಉಡುಪನ್ನೇಕೆ ನೇಯುತ್ತಿರುವಿರಿ? ಜಾಲಗಾರ ಹಕ್ಕಿಯ ರೆಕ್ಕೆಗೆ ಸರಿಹೋಲುವ ನೀಲಿಯ ಉಡುಪನ್ನು ಹುಟ್ಟಿದ ಮಗುವಿಗೆ ನೇಯುತ್ತಿರುವೆವು.

‘ನೇಯ್ಗೆಯವರೆ, ಸಂಜೆಯಾಗಿರುವಾಗ ಇಷ್ಟೊಂದು ಪ್ರಕಾಶವಾದ ಉಡುಪನ್ನೇಕೆ ನೇಯುತ್ತಿರುವಿರಿ? ರಾಣಿಯ ಮದುವೆಗೆ ನವಿಲು ಗರಿಯ ವರ್ಣಗಳಂತಹ ಮುಸುಕನ್ನು ನೇಯುತ್ತಿದ್ದೇವೆ.

‘ ನೇಯ್ಗೆಯವರೆ, ಬೆಳುದಿಂಗಳ ಚಳಿಯಲ್ಲಿ ಇಷ್ಟೊಂದು ಗಭೀರತೆಯಿಂದ ಏನನ್ನು ನೇಯುತ್ತಿರುವಿರಿ? ಗರಿಯಷ್ಟು ಬೆಳ್ಳಗಿರುವ ಅಭ್ರದಷ್ಟು ಶುಭ್ರವಿರುವ ಶ್ವೇತವಸನವನ್ನು ಸತ್ತವನ ಶವಕ್ಕಾಗಿ ನೇಯುತ್ತಿದ್ದೇವೆ.’

‘ ಕೋರಮಂಡಲದ ಬೆಸ್ತರು’ ಎಂಬ ಕವನದಲ್ಲಿ ‘ ಎದ್ದೇಳಿ, ತಮ್ಮಂದಿರೆ, ಎದ್ದೇಳಿ. ಎಚ್ಚೆತ್ತ ಆಕಾಶ ಬೆಳಗಿನ ಬೆಳಕಿಗೆ ನಮಿಸುತ್ತಿದೆ. ರಾತ್ರಿಯೆಲ್ಲಾ ಅತ್ತ ಮಗುವಿನಂತೆ ಗಾಳಿ ಬೆಳಗಿನ ಮಡಿಲಲ್ಲಿ ಮಲಗಿದೆ’ ಎಂಬ ಭಾವ ಬಹು ಸೊಗಸಾಗಿದೆ.

ಕವಿಗೆ ಇಲಿ, ಜಿಂಕೆಗಳ ದುಃಖವೂ ಅರ್ಥವಾಗುತ್ತದೆ. ಮನುಷ್ಯರಿಗಿದ್ದಂತೆ ಅವುಗಳಿಗೂ ಕಷ್ಟ ಸುಖಗಳಿರುತ್ತವೆ. ಕಷ್ಟವನ್ನು ಸಹಿಸುವುದು ಅವುಗಳಿಗೆಷ್ಟು ದುಸ್ತರ ಎಂಬುದನ್ನು ‘ ಬೀಸುವವರು’ ಎಂಬ ಕವನದಲ್ಲಿ ಕಾಣಬಹುದು :

‘ ಎಲೆ ಪುಟ್ಟ ಇಲಿ, ನಕ್ಷತ್ರಗಳು ಆಕಾಶದಲ್ಲಿ ನಗುತ್ತಿರಲು ನೀನೇಕೆ ಅಳುತ್ತಿರುವೆ? ಅಯ್ಯೋ, ನನ್ನ ಪ್ರಿಯ ಸತ್ತುಹೋದನೇ! ಇನ್ನು ನನ್ನ ಕಣ್ಣೀರೊರಸುವರು ಯಾರು? ಸಿರಿವಂತ ರೈತನೊಬ್ಬನ ಕಣಜದಲ್ಲಿ ಒಂದು ಕಾಳು ತಿನ್ನಲು ಹೋದ ನನ್ನ ಪ್ರಿಯನನ್ನು ಬೋನೊಡ್ಡಿ ಹಿಡಿದು ಕೊಂದರಲ್ಲಾ! ಅಯ್ಯೋ, ಅಯ್ಯೋ ನನ್ನ ಪ್ರಿಯ ಸತ್ತುಹೋದನೆ!

‘ ಎಲೆ ಪುಟ್ಟ ಜಿಂಕೆ, ನಿನ್ನ ಎಲೆಮನೆಯಲ್ಲಿ ಕುಳಿತು ಒಂಟಿಯಾಗಿ ನೀನೇಕೆ ನರಳುತಿರುವೆ? ಅಯ್ಯೋ, ಅಯ್ಯೋ, ನನ್ನ ನಲ್ಲನಿಲ್ಲವಾದನೆ! ಇನ್ನು ನನ್ನ ದುಃಖವನ್ನು ಶಮನ ಮಾಡುವವ

ರಾರು? ಸಂಜೆಯಲ್ಲಿ ನದಿಗೆ ನೀರು ಕುಡಿಯಲು ಹೋದ ಆ ನನ್ನ ನಲ್ಲನನ್ನು ಬೇಟೆಗಾರ ಹೊಂಚುತ್ತಿದ್ದು ಎದೆಗೆ ಬಾಣವನ್ನು ಹೊಡೆದು ಕೊಂದನಲ್ಲಾ! ಅಯ್ಯೋ ನನ್ನ ನಲ್ಲನಿಲ್ಲವಾದನೆ!

'ಎಲೆ ಪುಟ್ಟ ವಧು, ಜಗವೆಲ್ಲ ಮಲಗಿ ನಿದ್ರಿಸುತ್ತಿರುವಾಗ ನೀನೇಕೆ ಅಳುತ್ತಿರುವೆ? ಅಯ್ಯೋ, ನನ್ನ ಕಾಂತ ಕಣ್ಮರೆಯಾದನೆ! ಉಕ್ಕಿ ಬರುವ ನನ್ನ ಕಣ್ಣೀರ ತಡೆವರು ಯಾರು ಇನ್ನು? ಮುಂದಿನ ವರುಷಗಳ ಹಿಂಗದ ತೃಷೆಯನ್ನು ತಣಿಸುವರು ಯಾರು? ಮಂಚದಲಿ ಮುತ್ತಿಟ್ಟು ಪ್ರೀತಿಸುವರು ಯಾರು? ಅಯ್ಯೋ, ನನ್ನಿನಿಯನ ಚಿತೆ ಗಿಟ್ಟ ಆರದ ಬೆಂಕಿಯಲಿ ದಹಿಸುತಿದೆ ನನ್ನಾತ್ಮ ಧಗಧಗಿಸಿ! ಅಯ್ಯೋ, ನನ್ನ ಕಾಂತ ಕಣ್ಮರೆಯಾದನೆ!'

ಕರುಣ ರಸದ ಕವಿತೆಗಳಲ್ಲಿ 'ಅನಾಥ ಬಾಲಕ' ಎಂಬ ಕವನ ಎಲ್ಲ ಕವನಗಳಿಗಿಂತಲೂ ಸೊಗಸಾದುದು:

'ಮಿರುಗುವ ತಾರೆಯೆ, ನಾನು ಕತ್ತಲಿನಲ್ಲಿ ಅಳುವಾಗ ನೀನೆನ್ನ ತಾಯಾಗುವೆಯಾ? ನನ್ನೊಡನಿದ್ದು ಮುತ್ತಿಡುವೆಯಾ? ನಗುವ ಗಾಳಿಯೆ, ನೀನೆನ್ನ ಸೋದರನಾಗುವೆಯಾ? ನನ್ನೊಡನಾಡಿ ಭೂವ್ಯೋಮಾಕಾಶಗಳ ಕಥೆಯನು ಹೇಳುವೆಯಾ?

'ಎಲೆ ನಕ್ಷತ್ರ, ಒಮ್ಮೊಮ್ಮೆ ಒಂಟಿಯಾದೆನಗೆ ಬಹಳ ಬೇಜಾರು. ಎಲೆ ಗಾಳಿ, ಗೋಡೆಯ ಮೇಲೆ ಹರಿದಾಡುವ ನೆಳಲ ನೋಡಿ ಬಹಳ ಹೆದರಿಕೆ. ದೇವರು ಪುಟ್ಟ ಮಕ್ಕಳನು ಮುತ್ತಿಟ್ಟು ಮುದ್ದಾಡುವನಂತೆ. ನನ್ನನೂ ಮುದ್ದಿಸುವ, ನನ್ನ ಕೂಗನ್ನೂ ಕೇಳುವ ಯಾರಾದರೊಬ್ಬರನು ಅವನು ಸೃಷ್ಟಿಮಾಡಬಾರದಾಗಿತ್ತೆ!'

ಮನುಷ್ಯನಿಗೆ ವಿವೇಕ ಬರುವುದು ಕೇವಲ ಮನುಷ್ಯನಾಗಿ ಹುಟ್ಟಿದ್ದರಿಂದಲೇ ಬರುವುದಿಲ್ಲ. ವಯಸ್ಸಾಗಬೇಕು, ಕಷ್ಟಕಾರ್ಪಣ್ಯಗಳನ್ನು ಅನುಭವಿಸಬೇಕು. ಒಟ್ಟಿನಲ್ಲಿ ಬಾಳಬೇಕು. ಇಲ್ಲದಿದ್ದರೆ ವಿವೇಕ ಬರುವುದಿಲ್ಲ. ಇದೇ ಅಭಿಪ್ರಾಯದಿಂದ ಸರೋಜಿನಿ ಬಹುಶಃ ತಮ್ಮ ಮಕ್ಕಳನ್ನು ಕುರಿತು ಹೀಗೆ ಹಾಡಿದ್ದಾರೆ 'ಜೀವನ' ಎಂಬ ಕವಿತೆಯಲ್ಲಿ:

'ಮಕ್ಕಳೆ, ನೀವಿನ್ನು ಬಾಳಿಲ್ಲ. ಮುದ್ದು ಕನಸುಗಳಲಿ ಎದ್ದಾಡುತಿರುವಿರಿ. ಬರುವುದು ತಡೆಯಲಾಗದ ಕಾಲವೊಂದು.

ಮೂಡುವುದು ಹೃದಯದಲ್ಲಿ ಪ್ರೇಮವೊಂದು. ಆಸೆಪಟ್ಟ ಮನಸ್ಸು ಸುಖಕಾಗಿ ಸುಡುವುದು ಧಗಧಗೆಂದು.

'ಮಕ್ಕಳೆ, ಬಾಳಿದಂತಲ್ಲ ನೀವು ಬಹು ದುಃಖ ಬೆದರಿಕೆಗಳ ಎದುರಿಸುವ ತನಕ, ಕನಸೊಡೆವ ವರುಷಗಳ ಹೋರಾಟ ಸಹಿಸುವ ತನಕ, ಅತಿಯಾಸೆಯಲಿ ಗಾಯಗೊಂಡು ಗೋಳೋ ಎನ್ನುವ ತನಕ, ಹೋರಾಟದಲಿ ಸವೆದು ಸುಣ್ಣವಾಗುವ ತನಕ: ಏಕೆಂದರೆ ಅದೆ ಬಾಳು.'

'ಸಾವನ್ನು ಕುರಿತು ಕವಿ ಹೇಳಿದ್ದು' ಎಂಬ ಕವನದಲ್ಲಿ ಸರೋಜಿನಿ ಸಾವಿನೊಡನೆ ಹೋರಾಡಿದ ದೃಶ್ಯವನ್ನೇ ಚಿತ್ರಿಸಿದಂತೆ ಭಾಸವಾಗುತ್ತದೆ:

'ಎಲೆ ಸಾವೆ ನಿಲ್ಲು, ಒಂದು ಚಣ ನಿಲ್ಲು, ಸಾಯಲಾರೆ ನಾನು. ನನ್ನೀ ಸುಂದರ ಜೀವನದಲಿ ಇನ್ನೂ ಮಧುವುಕ್ಕುತ್ತಿರುವಾಗ ಸಾಯಲಾರೆ ನಾನು. ನನ್ನೀ ಯೌವನ ವಸಂತದಲಿ ಧದಿಕುಲಗಳು ಹಾಡುತಿರುವಾಗ ಸಾಯಲಾರೆ ನಾನು.

'ಅರಳುತಿರುವೆನ್ನಾಸೆ ಹೂಗಳ ಕೊಯ್ಯುವ ಮುನ್ನ, ನನ್ನ ಚಿನ್ನಗಳನಲಂಕರಿಸುವ ಮುನ್ನ, ನನ್ನ ಹಾಡುಗಳನೆಲ್ಲ ಹಾಡದ ಮುನ್ನ, ನನ್ನ ಕಣ್ಣೀರನೆಲ್ಲ ಕರೆಯದ ಮುನ್ನ ಸಾಯಲಾರೆ ನಾನು; ಸ್ವಲ್ಪ ನಿಲ್ಲಲಾರೆಯ ನೀನು?

'ನಿಲ್ಲು, ನಿಲ್ಲೆಲೆ ಸಾವೆ, ಒಂದು ಚಣ ನಿಲ್ಲು. ನನ್ನ ಪ್ರೇಮ ಸಂಕಟಗಳಿಗೆ ತೃಪ್ತಿಯಾಗುವ ತನಕ, ವೈವಿಧ್ಯಮಯ ಆಕಾಶ ಭೂಮಿಗಳನೀಂಟುವ ತನಕ, ಶರೀರದ ಆಸೆ ಆಕಾಂಕ್ಷೆಗಳು ಈಡೇರುವ ತನಕ ಸ್ವಲ್ಪ ನಿಲ್ಲು ಸಾವೆ, ನಾ ಸಾಯಲಾರೆ ಸ್ವಲ್ಪ ನಿಲ್ಲು.'

ಸರೋಜಿನಿ ತನ್ನ ನಾಲ್ಕು ಮಕ್ಕಳನ್ನು ಹರಸಿದ ಬಗೆ ಆದರ್ಶವಾಗಿದೆ. 'ನನ್ನ ಮಕ್ಕಳಿಗೆ' ಎಂಬ ಕವನದಲ್ಲಿ ಅದನ್ನು ನೋಡಿ:

'ಜಯಸೂರ್ಯ, ನನ್ನ ಜೀವನದ ಹೊಳೆವ ಉಷೆಯಲಿ ಮೂಡಿದೆಲೆ ಕಂದ, ಪ್ರೇಮದ ಸೌಮ್ಯಾಕಾಶದಲಿ ಪುಟ್ಟಿದೆಲೆ ಆನಂದ, ಬೆಳೆವ ನಿನ್ನ ಕೀರ್ತಿ ನನ್ನ ಹೃದಯಕ್ಕೆ ಮತ್ತೆನ್ನ ರಾಷ್ಟ್ರಕ್ಕೆ ಪವಿತ್ರ ನೈವೇದ್ಯವಾಗಲಿ. ನೀನಾಗು ಜಯ ಸೂರ್ಯ, ಸ್ವಾತಂತ್ರ್ಯದ ಸವಿಗಾನದ ಸೂರ್ಯ!

'ಪದ್ಮಜ, ಹೆಸರಿನಂತೆಸೆವ ಸೌರಭದಮುದ್ದುಗುವರಿ, ನಿನ್ನಂತೆ ಪದ್ಮದಿ ಪುಟ್ಟಿದ ಸಿರಿ ರಾಣಿ, ಲಕ್ಷ್ಮಿ, ನಿನ್ನ ರಕ್ಷಿಸಲಿ; ಹಿತಕರ ಚಂದ್ರನ ಪ್ರೇಮ ಕಿರಣಗಳನಟ್ಟಿ ನಿನ್ನನಾಶೀರ್ವದಿಸಲಿ; ಮೆಲ್ಲನೆ ಬೀಸುವ ಗಾಳಿಗಳ ಕಳುಹಿಸಿ ನಿನ್ನ ಮುತ್ತಿಡಲಿ. ಪದ್ಮಜ, ನೀನಾಗು ಸರ್ವ ಭಾವಾವೇಶದ ಸುಗಂಧಿನಿ !

' ರಣಧೀರ, ಜಯವಾಗಲಿ ನಿನಗೆ ಹೊಸದಾಗಿ ಹದ ಮಾಡಿದ ರಕ್ಷಾಕವಚದಲಿ ! ವಾಲ್ಮೀಕಿಯ ಕೆಚ್ಚೆದೆಯ ನಾಯಕರಂತೆ, ಮಹಾ ಕಾವ್ಯದ ಸುವರ್ಣ ಪಟ್ಟಿಯ ಮಾಣಿಕ್ಯಗಳಂತೆ ಗೆಲುವುದ ಕಲಿ, ಕಾದುವುದ ಕಲಿ, ಸರಿಯೆಂಬ ಪಕ್ಷದ ಮುನ್ನೊಣೆಯಲಿ ಹೋರಾಡು ವುದ ಕಲಿ. ರಣಧೀರ, ಪ್ರೇಮದರಸಾಗು ; ದುರ್ಬಲರ ರಕ್ಷಿಸುವ ದೊರೆಯಾಗು !

' ಲೀಲಾಮಣಿ, ನನ್ನಾನಂದದ ಮುದ್ದುಮಣಿ, ಆ ಮಮತೆಯ ರಾತ್ರಿಯಲಿ ತಾಯೆದೆಯ ರಕ್ಷೆಯಿಂ ದೂರಾದ ಎನ್ನರಗಿಣಿ, ನೆಗೆ ದಾಡು ಪಳಪಳನೆ, ಕುಣಿದಾಡು ಪ್ರೇಮದ ಮಂತ್ರಕಿರೀಟದಲಿ, ಸ್ಥಿರ ಆನಂದದಲಿ. ನಗುತಿರು ಎಂದೆಂದೂ ಜೀವಮಣಿ, ದೂರವಿರು ದುಃಖದಿಂ, ಲೀಲಾಮಣಿ ! '

' ಭಾರತಕ್ಕೆ ' ಎಂಬ ಕವನ ಶತಮಾನಗಳ ಹಿಂದೆ ಮೆರೆಯುತ್ತಿದ್ದ ಭಾರತ ಮಾತೆಯನ್ನು ಕುರಿತದ್ದಾಗಿದೆ. ' ಭಾರತ ಮಾತೆ, ಎದ್ದೇಳು, ಎದ್ದೇಳು. ನಿನ್ನ ಮಕ್ಕಳಿಗಾಗಿಯಾದರೂ ಎದ್ದು ಅವರ ಕೂಗಿಗೆ ಓ ಕೊಡು. ಮತ್ತೊಮ್ಮೆ ಕಿರೀಟ ಧರಿಸಿ ಮೆರೆ !' ಎಂದು ಹಾಡಿದ್ದಾರೆ. ಬೆಳೆಯುವ ವೃಕ್ಷ ಮೊಳಕೆಯಲ್ಲಿಯೇ ಕಂಡಿತೆಂಬಂತೆ ಸರೋಜಿನಿ ಚಿಕ್ಕವಯಸ್ಸಿನ ವರಾದ್ದರೂ ಭಾರತ ಮಾತೆಯ ಶೋಚನೀಯ ಸ್ಥಿತಿಗಾಗಿ ಮರುಗಿದ್ದಾರೆ. ಮುಂದಿನ ಮಹಾ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಅವರು ವಹಿಸಿದ ಪಾತ್ರಕ್ಕೆ ಇದು ನಾಂದಿ.

' ಚಿನ್ನದ ಹೊಸ್ತಿಲು ' ಕವನ ಸಂಗ್ರಹ ' ಪದ್ಮಾಸನ ಬುದ್ಧ ' ಎಂಬ ಕವನದಿಂದ ಮುಕ್ತಾಯವಾಗುತ್ತದೆ. ಜೀವನದ ಸಕಲ ಸುಖವನ್ನು ಅನು ಭವಿಸಿದ ಮೇಲೂ ಜೀವ ನಿಜವಾದ ಸುಖ ಕಾಣದೆ ಕೊನೆಯ ಮುಕ್ತಿ ಸುಖಕ್ಕಾಗಿ ಹಾತೊರೆಯುತ್ತದೆ: ' ದೂರದ ಮುಕ್ತಿ—ಸುಖವೊಂದು

ಕೈಬೀಸಿ ಕರೆಯುತ್ತಿದೆ....ಆ ಮಹತ್ತನೆಂತು ಮುಟ್ಟುವೆನು! ಆ ಪದ್ಮಾಸನದ ಅಚಿಂತ್ಯದ ನಿರ್ವಾಣವನೆಂತು ಹೊಂದುವೆನು!'

'ಚಿನ್ನದ ಹೊಸ್ತಿಲಿ'ನಲ್ಲಿದ್ದ ಕವಿತೆಗಳನ್ನು ಓದಿದ ಸಾರಸ್ವತ ಪ್ರಪಂಚ ಬಹಳ ಸಂತೋಷಪಟ್ಟಿತು. ಇಂಗ್ಲೀಷಿನಲ್ಲಿ ಬರೆದ ಕವಿತೆಗಳಾದರೂ ಅವು ಇಂಗ್ಲೀಷು ಕವಿತೆಗಳಂತಿರಲಿಲ್ಲ ಭಾಷೆ ಒಂದೇ ಆದರೂ ಭಾವನೆ ಬೇರೆಯಾಗಿತ್ತು. ಆ ಕವನಗಳಲ್ಲಿ ಭಾರತದ ಆಸೆ ಆಕಾಂಕ್ಷೆಗಳ ಬಹು ದೊಡ್ಡ ಸುಂದರ ಚಿತ್ರವಿತ್ತು. ಅಪೂರ್ವ ಮಾಧುರ್ಯ ಹಾಗೂ ರಸವಿತ್ತು. ಭಾರತೀಯ ಸಂಸ್ಕೃತಿಯ ಪ್ರತೀಕವಿತ್ತು. ಕವಿತೆಗಳನ್ನು ಓದಿದನಂತರ ಡಬ್ಲ್ಯು. ಟಿ. ಸ್ಟೈಡ್ ಎಂಬ ಮಹಾಶಯರು 'ಸರೋಜಿನಿಯ ಈ ಕೃತಿ ಸ್ತ್ರೀಯರು ಕವಿತೆಗಳನ್ನು ರಚಿಸಲಾರರೆಂಬ ನಿಂದಕರ ಬಾಯಿ ಮುಚ್ಚಿಸುತ್ತದೆ' ಎಂದುಬಿಟ್ಟರು.

ಯಾವ ಕಾವ್ಯದಿಂದ ತಮ್ಮ ಕೀರ್ತಿ ಮೊಳಗಿತೋ ಅದೇ ನಾಮವನ್ನು ಸರೋಜಿನಿ ತಮ್ಮ ವಾಸದ ಮನೆಗೂ ಇಟ್ಟರು. 'ಚಿನ್ನದ ಹೊಸ್ತಿಲು' ಎಂಬ ಹೊಸ ನಾಮಕರಣವಾಯಿತು ಅವರ ಮನೆಗೆ. ಆ ಮನೆಯಲ್ಲಿ ಕುಳಿತು ಸರೋಜಿನಿ 'ಕಾಲದ ಪಕ್ಷಿ' ಎಂಬ ತಮ್ಮ ಎರಡನೇ ಕಾವ್ಯಗುಚ್ಛವನ್ನು ಪ್ರಕಟಿಸಿದರು. ಈ ಗ್ರಂಥವನ್ನು ಅವರು ತಮ್ಮ ಮಾತಾಪಿತೃಗಳಿಗೆ ಅರ್ಪಿಸಿದರು. ಇದಕ್ಕೆ ಮುನ್ನುಡಿ ಬರೆದ ಎಡ್ಮಂಡ್ ಗಾಸೆಯವರು ಸರೋಜಿನಿಯವರ ಕಾವ್ಯಶ್ರೀ ಎಷ್ಟೆಂಬುದನ್ನು ಹೊಗಳಿದರು: "ಇಂದು ಭಾರತದಲ್ಲಿ ಬದುಕಿರುವ ಕವಿಗಳಲ್ಲೆಲ್ಲಾ ಶ್ರೀಮತಿ ನಾಯಿಡು ಬಹು ಉನ್ನತ ಸಿದ್ಧಿಯನ್ನು ಪಡೆದಿದ್ದಾರೆಂದು ನನ್ನ ಭಾವನೆ. ಕೊನೆಯ ಪಕ್ಷ ಇಂಗ್ಲೀಷಿನಲ್ಲಿ ಬರೆಯುವ ಕವಿಗಳಲ್ಲಿ ಇವರು ಉನ್ನತ ತರಗತಿಯವರೆಂದು ಹೇಳುವುದಕ್ಕೆ ಅಭ್ಯಂತರವಿಲ್ಲ. ಇಂಗ್ಲೀಷಿನಲ್ಲಿ ಬರೆದ ಭಾರತೀಯರಲ್ಲೆಲ್ಲಾ ಇವರು ಅತ್ಯಂತ ಉಜ್ವಲ ರೀತಿಯಲ್ಲಿ ಬರೆದಿದ್ದಾರೆ. ಇವರ ಕವನಗಳು ಅತ್ಯಂತ ಮೂಲಭೂತವಾದವುಗಳು. ಅಷ್ಟೇ ಅಲ್ಲ, ಬಹು ನಿಖರವಾದವುಗಳು. ಹೀಗೆ ಹೇಳಿದ ಮಾತ್ರಕ್ಕೆ ಮೂವತ್ತು ವರ್ಷಗಳ ಹಿಂದೆ ನಾನು ಬೆಳಕಿಗೆ ತಂದು ಪ್ರಪಂಚಕ್ಕೆ ತೋರಿಸಿಕೊಟ್ಟ ತೋರು ದತ್ತಳ ಕೀರ್ತಿಗೆ ಕಳಂಕ ತಂದಂತಲ್ಲ. ಆಕೆಯ ಕವನಗಳು ಬಹು ಸುಂದರವಾಗಿದ್ದರೂ ಅವುಗಳಲ್ಲಿ ಯೌವನದ, ಏಕಾಂತತೆಯ ಮತ್ತು ಆಕೆಯ



" ಹದಿನಾರು ವರ್ಷದ ಮಗು "

—ಜೆ. ಬಿ. ಈಟ್ಸರು ಬರೆದ ಚಿತ್ರ

ಕ್ಷಣಿಕವೂ ಬೇಸರವೂ ಆದ ಜೀವನದ ಬಹು ಕರುಣಾಮಯ ಸನ್ನಿವೇಶ ಗಳು ತುಂಬಿವೆ. ಆದರೆ ಶ್ರೀಮತಿ ನಾಯಿಡು ಅವರ ಪಕ್ವವಾದ ಕವನ ಗಳಲ್ಲಿ ಎಂತಹ ಕಠಿಣ ವಿಮರ್ಶಕನೂ ಯಾವ ಲೋಪದೋಷಗಳನ್ನು ಕಾಣಲು ಸಾಧ್ಯವಿಲ್ಲ.

"ಸರೋಜಿನಿ ಚಟ್ಟೋಪಾಧ್ಯಾಯಳು ಮೊದಲು ಲಂಡನ್ನಿಗೆ ಬಂದಾಗ ಹದಿನಾರು ವರ್ಷದ ಮಗು. ಆದರೆ ಅಷ್ಟೇ ವಯಸ್ಸಿನ ಆಂಗ್ಲ ಹೆಣ್ಣು ಮಗುವಿಗಿಂತ ಎಷ್ಟೋ ಭಿನ್ನಳಾಗಿದ್ದಳು—ಕಮಲದ ಹೂವಿಗೂ ಕಣಿವೆಯಲ್ಲಿ ಬೆಳೆಯುವ ಲಿಲಿ (Lily) ಹೂವಿಗೂ ಇರುವ ವ್ಯತ್ಯಾಸದಂತೆ. ಆಕೆಯ ಬುದ್ಧಿ ಬಹುಪಕ್ವವಾಗಿತ್ತು. ಬೇಕಾದಷ್ಟು ಓದಿದ್ದಳು. ಪ್ರಪಂಚದ ಅನು ಭವದಲ್ಲಿ ಪಾಶ್ಚಿಮಾತ್ಯ ಕನ್ಯೆಯರಿಗಿಂತ ಬಹು ಮುಂದೆ ಹೋಗಿದ್ದಳು.

"ಆಕೆಯ ಈ ಕವನಸಂಗ್ರಹದಲ್ಲಿ ಮತ್ತು ಆಗಲೇ ಪ್ರಕಟವಾದ ಕವನಸಂಗ್ರಹದಲ್ಲಿ ಒಂದು ವಿಶೇಷ ಗುಣವನ್ನು ಕಾಣುತ್ತೇವೆ. ಅದೇನೆಂದರೆ ಆಕೆಯ ಸ್ವತಂತ್ರ ಮಾರ್ಗ. ಭಾರತದ ಮಣ್ಣಿನಿಂದ ನೇರವಾಗಿ ಹುಟ್ಟಿದ ಆಕೆ ತನ್ನ ಭಾವನೆಗಳನ್ನು ಇಂಗ್ಲೀಷಿನಲ್ಲಿ ಹೇಳಿದರೂ ಪಾಶ್ಚಾತ್ಯ ಮಾರ್ಗಕ್ಕೆ ಕಟ್ಟುಬಿದ್ದಿಲ್ಲ. ಸರಿಯಾಗಿ ಓದಿದರೆ ಅವಳ ಕವನಗಳು ಪೌರ್ವಾತ್ಯದ ಕಗ್ಗತ್ತಲು ಸ್ಥಳಗಳ ಮೇಲೆ ಬೆಳಕು ಚೆಲ್ಲುವುದನ್ನು ನೋಡ ಬಹುದು."

ಮೊದಮೊದಲು ಕಂಡುಬಂದ ಹುಡುಗಿಯ ಹುಚ್ಚಾಟ 'ಕಾಲದ ಪಕ್ಷಿ' ಎಂಬ ಕವನಸಂಗ್ರಹದಲ್ಲಿ ಕಾಣಬರುತ್ತಿಲ್ಲ. ಅದರ ಬದಲು ಗಭೀ ರತೆ ಕಾಣಿಸಿಕೊಂಡಿದೆ. ಸರೋಜಿನಿ ಜೀವನದಲ್ಲಿ ನೊಂದಿದ್ದರು. ಸುಖ ವನ್ನೂ ಅನುಭವಿಸಿದ್ದರು. ಆಸೆಯಿಲ್ಲದಿರಲಿಲ್ಲ. ಭಾರತದ ಗಯಟೆಯೋ ಕೀಟ್ಸ್‌ನೋ ಆಗಬೇಕೆಂದು ಅವರು ಕನಸುಕಾಣುತ್ತಿದ್ದರು. ಎಡ್ಮಂಡ್ ಗಾಸೆಯವರಿಗೆ ಬರೆದ ಪತ್ರವೊಂದರಲ್ಲಿ ಅವರು ಹೀಗೆ ಬರೆದಿದ್ದರು: 'ನಾನು ಬದುಕಿರುವ ತನಕ ಕವನಗಳನ್ನು ರಚಿಸಿ ಹಾಡಬೇಕೆಂಬುದೇ ನನ್ನ ಹಿರಿ ಯಾಸೆ. ಬಹಳವಾಗಿ ಅಲ್ಲದಿದ್ದರೂ ಶಾಶ್ವತವಾಗಿ ಉಳಿಯುವ ಒಂದೇ ಒಂದು ಕವನ ಅಥವಾ ಒಂದೇ ಒಂದು ಪಂಕ್ತಿ ಬರೆದರೂ ಸಾಕು. ಬಹುಶಃ ಆ ಆಸೆ ಪೂರ್ತಿಯಾಗದೇ ಸಾಯುವೆನೋ ಏನೋ!' ಸಾವಿನ ಭೀತಿ ಸರೋಜಿನಿಯ ಬೆನ್ನಟ್ಟಿದಂತೆ ಕಾಣುತ್ತದೆ!

'ಕಾಲದ ಪಕ್ಷಿ' ಯಲ್ಲಿ ಬರುವ ಮೊಟ್ಟಮೊದಲಿನ ಕವನ 'ಕಾಲದ ಪಕ್ಷಿ' ಎಂದೇ. ಇದೇ ಹೆಸರು ಇಡೀ ಗ್ರಂಥಕ್ಕೆ ಬಂದಿದೆ. ಈ ಕವನ ಉಳಿದೆಲ್ಲ ಕವನಗಳ ಸಾರಾಂಶದಂತಿದೆ.

'ಹೇ, ಕಾಲದ ಪಕ್ಷಿಯೇ, ಹಣ್ಣುತುಂಬಿದ ಮರದಮೇಲೆ ಕುಳಿತು ನೀನು ಹಾಡುವ ಹಾಡುಗಳಾವುವು ?'

ಇದಕ್ಕೆ ಉತ್ತರ :

'ಜೀವನದ ಆನಂದವನ್ನು ಕುರಿತು, ಹುಚ್ಚೆದ್ದ ಹೋರಾಟ ಹಾಗೂ ಗಭೀರ ದುಃಖವನ್ನು ಕುರಿತು, ವಸಂತ ಋತುವಿನ ಉಕ್ಕುವ ಸೊಗಸನ್ನು ಕುರಿತು'

—ಇತ್ಯಾದಿ, ಇತ್ಯಾದಿ.

'ವಸಂತ ಪಂಚಮಿ' ಎಂಬ ಕವನ ವಿಧವೆಯ ದುಃಖವನ್ನು ಸೂಚಿಸುತ್ತದೆ. ಹೆಣ್ಣುಮಕ್ಕಳೂ ಮುತ್ತೈದೆಯರೂ ವಸಂತಪೂಜೆ ಮಾಡಲು ತಳಿಗೆ ಆರತಿಗಳನ್ನು ತೆಗೆದುಕೊಂಡು ಪೂಜೆಗೆ ಹೋಗುತ್ತಾರೆ. ಆದರೆ ವಿಧವೆಯಾದವಳಿಗೆ ಆ ಸಂತೋಷದಲ್ಲಿ ಭಾಗವಹಿಸುವ ಭಾಗ್ಯವಿಲ್ಲ. ಅವಳಿಗೆ ವಸಂತವೇಕೆ ಬಂದಿತೆಂದು ಅನ್ನಿಸುತ್ತದೆ :

'ಎಲೆ ಕೊಡತಿ ಹುಳು, ಹೋಗು-ನಿನ್ನ ಮಿರುಗುವ ರೆಕ್ಕೆಗಳನ್ನು ಮುದುರಿಕೊಂಡು ಹೊರಟುಹೋಗು. ವಸಂತಾಗಮನದ ಸುದ್ದಿಯನ್ನೇಕೆ ತರುವೆ? ಎಲೆ ಕೋಗಿಲೆಗಳೇ, ನಿಮ್ಮ ನಿಡುದನಿಯನ್ನು ನಿಲ್ಲಿಸಿ ಸಾಕು. ಎಲೆ ಧದಿಕುಲಗಳೇ, ನಿಮ್ಮ ಹುಚ್ಚೆದ್ದ ಗಂಟಲನ್ನು ಬಿಗಿದುಕೊಳ್ಳಿ. ಅಥವಾ ನಿಮ್ಮ ಗೂಡಿಗೆ ಬೇರೊಂದು ತೋಟ ನೋಡಿಕೊಳ್ಳಿ....ನಿಮ್ಮ ಹಾಡುಗಳು ನನ್ನೆದೆಗೆ ವಿಷಪೂರಿತ ಬಾಣದಂತಿವೆ. ನನ್ನ ಜೀವನವೇ ಹಾಳಾಗಿದೆ—ಒಸಗಿದ ಹುಲ್ಲಿನಂತೆ. ದುಃಖದ ಗಾಳಿಗೆ ನನ್ನೆದೆಯ ಹೂವು ಉದುರಿವೆ, ಎಲೆ ಕಿತ್ತಿವೆ.'

'ಹಳ್ಳಿಯ ಹಾಡು' ಎಂಬ ಕವನ ಸರಳವಾದರೂ ಸುಂದರವಾಗಿದೆ :

'ನನ್ನ ಕೊಡಗಳು ತುಂಬಿವೆ. ದಾರಿ ದೂರ. ಮನೆಗೆ ಹೋಗಲು ಜೊತೆಗೆ ಯಾರಿಲ್ಲ. ನಾನೇಕೆ ನಿಧಾನಿಸಿದೆ ಆ ದೋಣಿಯವನ ಹಾಡಿಗೆ ಮುಗ್ಧಳಾಗಿ ?........ಬೆಳುದಿಂಗಳಿಲ್ಲ. ದಾರಿಯಲ್ಲಿ ಹಾವು ಕಚ್ಚಿದರೆ ಅಥವಾ ಪಿಶಾಚಿ ಹಿಡಿದರೆ, ರಾಮ ರಾಮ, ನಾನು

ಸಾಯುವೆನಲ್ಲಾ ! ಏಕೆ ನಿಧಾನಿಸಿದಳೆಂದು ನನ್ನ ಅಣ್ಣ ಗೊಣಗುಟ್ಟುವನು. ದೇವರು ನನ್ನನ್ನು ಸುರಕ್ಷಿತವಾಗಿ ಕರೆದುತಂದರೆ ಸಾಕು, ಯಮುನೆ ಬಹು ಆಳವಲ್ಲ ಎಂದು ನನ್ನ ತಾಯಿ ಬಿಸುಸುಯ್ಯುವಳು. ಯಮುನಾ ನದಿಯ ನೀರು ನುಗ್ಗಿ ಹರಿಯುತ್ತಿದೆ. ಕರಿ ಹಕ್ಕಿಗಳು ಆಕಾಶವನ್ನು ಮುತ್ತಿದಂತೆ ಕತ್ತಲಾಗುತ್ತಿದೆ ಬಹು ಜಾಗ್ರತೆ. ಅಯ್ಯೋ, ಬಿರುಗಾಳಿ ಎದ್ದರೆ ನನ್ನ ಗತಿಯೇನು? ಸಿಡಿಲಿನಿಂದ ನಾನೆಲ್ಲಿ ತಪ್ಪಿಸಿಕೊಳ್ಳಲಿ? ಹೇ ರಾಮ ರಾಮ, ನೀನು ನನ್ನ ಕೈ ಹಿಡಿದು ನಡಸದಿದ್ದರೆ ನಾನು ಸಾಯುವೆ.'

'ಬಳೆಗಾರರು' ಎಂಬ ಕವನದಲ್ಲಿ

'ಪಳಪಳ ಹೊಳೆಯುವ ಹೊರೆ ಹೊತ್ತು ಸುಂದರಮಂದಿರಕೆ ಹೋಗುವ ಬಳೆಗಾರರು ನಾವು. ಕಾಮನಬಿಲ್‌ರಂಗಿನ ಬೆಳಕಿನಂಥ ವರ್ತುಲಗಳಾರಿಗೆ ಬೇಕು? ಸುಖದಿಂದಿರ್ಪ ಸತಿ ಸುದತಿಯರಿಗೆ ಜೀವಾನಂದವನೀಯುವ ಈ ಸಂಕೇತಗಳಾರಿಗೆ ಬೇಕು?'

—ಎಂಬ ಭಾವ ಸೊಗಸಾಗಿದೆ.

'ಹುಸೇನ್ ಸಾಗರ'ದಲ್ಲಿ ಸರೋಜಿನಿ ತಮ್ಮ ಹೃದಯವನ್ನು ಸಾಗರಕ್ಕೆ ಹೋಲಿಸಿಕೊಂಡಿದ್ದಾರೆ:

'ಎಲೆ ಸಾಗರ, ನೀನು ಪ್ರೇಮಿಯಾದ ಗಾಳಿಗೆ ಮಾತ್ರ ಅಲುಗಾಡಿ ಹೃದಯವನ್ನು ಬಿಚ್ಚಿ ತೋರಿಸುವೆ. ನನ್ನಂತೆ ನೀನೂ ಒಬ್ಬನನು ಮೆಚ್ಚಿರುವೆ. ನೀನು ನನ್ನಾತ್ಮದ ಜೀವಂತ ಪ್ರತಿಮೆ.'

ಜೀವನದಲ್ಲಿ ಅನೇಕ ಸಲ ನಿರಾಶೆಯ ಸನ್ನಿವೇಶಗಳು ಸರೋಜಿನಿಗೆ ಒದಗಿದುವು. ಆದರೂ ಬಾಳಿನಲ್ಲಿ ನಂಬಿಕೆಯಿಟ್ಟು ಇಂದಿನ ದುಃಖಕ್ಕಾಗಿ ಮುಂಧಿನ ಸುಖವನ್ನು ಮರೆಯಬೇಡ ಎಂಬ ಆಶಾವಾದವನ್ನು ಅವರು ಮರೆಯಲಿಲ್ಲ. ಇದು 'ನಶ್ವರತೆ' ಎಂಬ ಕವನದಲ್ಲಿ ಎದ್ದು ಕಾಣುತ್ತದೆ:

'ಜೀವನದಲ್ಲಿ ಎನಿತು ಕಷ್ಟಗಳೊದಗಿದರೂ ಅಳಬೇಡ. ಅಳುವಿಗೆ ಉಷೆ ತನ್ನ ಉತ್ಸಾಹವನ್ನು ಮುಚ್ಚಿಕೊಳ್ಳುವುದಿಲ್ಲ. ವಸಂತಋತು ಕಮಲಕ್ಕಾಗಲೀ ಅಶೋಕದೆಲೆಗಾಗಲೀ ಕೊಡುವ ಸೌಂದರ್ಯವನ್ನು ಕೊಡದೆ ಬಿಡುವುದಿಲ್ಲ. ಬೇಡ, ಜೀವನದ ತುಂಬ ಕಷ್ಟಗಳ ಕಗ್ಗತ್ತಲೆಯೇ ತುಂಬಿದ್ದರೂ ನರಳಬೇಡ. ಕಾಲ

ನಿಲ್ಲುವುದಿಲ್ಲ. ಇಷ್ಟು ಕಹಿಯಾದ, ಇಷ್ಟು ನೀಳವಾದ, ಇಷ್ಟು ವಿಚಿತ್ರವಾದ ಇಂದಿನ ದಿನ ಬಹು ಕ್ಷಿಪ್ರದಲ್ಲಿಯೇ ಮರೆತ ನಿನ್ನೆಯಾಗುವುದು. ಬೇಡ, ಅಳಬೇಡ. ಹೊಸ ಆಸೆ, ಹೊಸ ಕನಸು, ಹೊಸ ಮುಖ, ಹುಟ್ಟಿದ ವರ್ಷಗಳ ವೆಚ್ಚನಾಗದಾನಂದ ಇವು ನಿನ್ನ ಹೃದಯ ವೇದನೆಗೆ ದ್ರೋಹವೆಸಗುವುವು; ನಿನ್ನ ಕಣ್ಣೀರನ್ನೆ ನಿನ್ನ ಕಣ್ಣುಗಳು ನಂಬದಂತಾಗುವುದು.'

'ಹಣ್ಮುದುಕಿ' ಎಂಬ ಕವನ ಮರುಕ ಹುಟ್ಟಿಸುವಷ್ಟು ಚೆನ್ನಾಗಿದೆ. ದೀನ ದರಿದ್ರರಲ್ಲಿ ಸರೋಜಿನಿಗಿದ್ದ ಅನುಕಂಪ ಇದರಿಂದ ವ್ಯಕ್ತವಾಗುತ್ತದೆ:

'ಹಣ್ಮುದುಕಿಯೊಬ್ಬಳು ಒಂಟಿಯಾಗಿ ಬೀದಿಯ ಆಲದ ಮರದಡಿ ಭಿಕ್ಷೆಗಾಗಿ ಕುಳಿತಿಹಳು. ಕುರುಡಿಯಾದ ಆಕೆಗೆ ಹೋಗುವವರ ಕಾಲ್ಸಪ್ಪಳ ಕೇಳಿಸುತ್ತಿದೆ. ನಡುಗುವ ಕೈಗಳ ಭಿಕ್ಷಾಪಾತ್ರೆ ಕರುಣೆಯ ಬಿಡಿಗಾಸಿಗಾಗಿ ಕಾಯುತ್ತಿದೆ. ಕಾಸು ಬೀಳಲಿ ಬೀಳದಿರಲಿ, ಜನಕೆ ದಯ ಬರಲಿ ಬರದಿರಲಿ ಆಕೆ ಮಾತ್ರ ಧೈರ್ಯದಿಂದ ಕುಳಿತಿದ್ದಾಳೆ. ಇಂದಲ್ಲ ನಾಳೆ ಕಾಸೊಂದು ಸಿಕ್ಕೀತೆಂದು ಸ್ಥಿರ ಮನಸ್ಸಿನಲ್ಲಿ ಕುಳಿತಿದ್ದಾಳೆ. ಬಿಸಿಲು ಗಾಳಿ ಮಳೆಗಳನೆದುರಿಸಿ, ಬಡತನ ಹಸಿವು ನೋವುಗಳ ಮೀರಿಸಿ, ಕೊನೆಯ ನಿದ್ದೆಗಾಗಿ ಕಾಯುತ್ತ ಕುಳಿತಿಹಳಾಕೆ. ಪ್ರಾಯದಲ್ಲಿ ಆಕೆಗೆ ಮೆಚ್ಚಿನ ಗಂಡನಿದ್ದ, ಮುದ್ದಿನ ಮಗನಿದ್ದ. ಆದರೆ ಇಂದು ಈ ಇಳಿವಯಸ್ಸಿನಲ್ಲಿ, ಆಕೆಯ ಬಳಲಿಕೆಯಲ್ಲಿ ಕಣ್ರೆಪ್ಪೆಗಳ ಮುಚ್ಚಿ ಮಲಗಿಸುವ ಒಬ್ಬರಿಲ್ಲವಲ್ಲಾ, ಹೇ ದೇವಾ! ಯಾರಿರಲಿ ಯಾರಿಲ್ಲದಿರಲಿ, ಯಾರು ಕೊಡಲಿ ಕೊಡದಿರಲಿ ಆಕೆಗೊಂವೇ ತೃಪ್ತಿ: ಲಾ ಇಲಾಹಿಲ್ಲಾಲ್ ಅಲ್ಲಾ, ಲಾ ಇಲಾಹಿಲ್ಲಾಲ್ ಅಲ್ಲಾ, ಮಹಮ್ಮದ್-ಅರ್-ರಸೂಲಲ್ಲಾ!'

ಸರೋಜಿನಿಗೆ ಸರ್ವಮತಗಳೂ ಶ್ರೇಷ್ಠ. ಸರ್ವಮತಗಳ ಪ್ರಾರ್ಥನೆಯೂ ಶ್ರೇಷ್ಠ. ಹಿಂದೂ ಮುಸಲ್ಮಾನ ಕ್ರೈಸ್ತ ಪಾರ್ಸಿಗಳೆಲ್ಲ ಒಂದೆ. ಅವರು ಮಾಡುವ ಪೂಜೆಯೆಲ್ಲ ದೇವರ ಪೂಜೆ. ಈ ಉದಾತ್ತ ಧ್ಯೇಯವನ್ನು 'ಸಂಜೆಯ ಪೂಜೆಗೆ ಕರೆ' ಎಂಬ ಕವನದಲ್ಲಿ ಕಾಣಬಹುದು:

'ಅಲ್ಲಾ ಹೊ ಅಕ್ಬರ್! ಅಲ್ಲಾ ಹೊ ಅಕ್ಬರ್! ಎಂದು ಮೌಲ್ವಿಗಳು ಮಸೀದಿ ಮಿನಾರುಗಳಿಂದ ಕರೆಯುತಿಹರು. ಕರೆಯಿರಿ,

ಇಸ್ಲಾಮಿನ ಎಲೆ ಶ್ರೇಷ್ಠ ದೂತರೇ, ಕರೆಯಿರಿ ಸಂಜೆಗತ್ತಲು ಇಳಿಯು ತಿರೆ, ಅಲ್ಲಾ ಹೊ ಅಕ್ಬರ್! ಅಲ್ಲಾ ಹೊ ಅಕ್ಬರ್ ಎಂದು.

'ಏವಿ ಮೇರಿಯಾ! ಏವಿ ಮೇರಿಯಾ! ಎಂದು ಪಾದ್ರಿಗಳು ಭಕ್ತಿಯಲಿ ಪಾಡುತಿಹರು ಪೀಠದಲಿ ನಿಂತು. ಕನ್ಯೆಯಲಿ ಹುಟ್ಟಿದ ಕಂದನನು ಪೂಜಿಸುವ ಎಲೆ ಜನರೇ, ಬೈಗಿನ ಗಂಟೆಯು ಬಾರಿಸುತಿರೆ ಪ್ರಾರ್ಥನೆಯ ಮಾಡಿ: ಏವಿ ಮೇರಿಯಾ! ಏವಿ ಮೇರಿಯಾ! ಎಂದು.

'ಅಹುರ ಮಜ್ದಾ! ಅಹುರ ಮಜ್ದಾ! ಎಷ್ಟು ನಾದಮಯ ಅವೆಸ್ಟಾ ಪ್ರಾರ್ಥನೆ! ಅಗ್ನಿಬೆಳಕಿಗೆ ಅಡ್ಡಬೀಳುವೆಲೆ ಜನರೆ ಬಗ್ಗಿ ನಮಿಸಿ ಆರದ ದೀವಟಿಗೆಯ ನೀಲಿಯುರಿಗೆ: ಅಹುರ ಮಜ್ದಾ! ಅಹುರ ಮಜ್ದಾ! ಎಂದು.

'ನಾರಾಯಣ! ನಾರಾಯಣ! ಕೇಳಿ ಕಾಲಾತೀತ ದೇವ ಗೀತೆಯಂ. ಕೈಯೆತ್ತಿ ಎಲೆ ಬ್ರಹ್ಮನ ಮಕ್ಕಳಿರಾ, ದನಿಯೆತ್ತಿ ಹಾಡಿರಿ; ಮೈಮರೆತು ಪೂಜಿಸಿರಿ—ನಾರಾಯಣ! ನಾರಾಯಣ! ಎಂದು.'

ಕೊನೆಯಲ್ಲಿ ದೇವರಿಗೆ ಮೊರೆ. ಯಾತಕ್ಕಾಗಿ? ಐಶ್ವರ್ಯಕ್ಕಲ್ಲ, ಅಷ್ಟಸಿದ್ಧಿಗಲ್ಲ. ಪ್ರೇಮಕ್ಕಾಗಿ, ಸತ್ಯಕ್ಕಾಗಿ, ಹಾಡಿನ ಹಿಗ್ಗಿಗಾಗಿ. 'ಪಾರಿತೋಷಕ' ಎಂಬ ಕವನದಲ್ಲಿ ಈ ಮೊರೆಯನ್ನು ಕೇಳಿ:

'ಹೊಲ ಕಾಡಿಗೆ ವಸಂತದ ಬಹುಮಾನ; ಗಿಡಗ ಕೊಕ್ಕರೆಗೆ ರೆಕ್ಕೆಯ ಬಹುಮಾನ. ಚಿರತೆಗದರ ಸೊಬಗು; ಪಾರಿವಾಳಕದರ ಮಿರುಗು. ನನಗಾದರೋ ಎಲೆ ದೊರೆಯೇ, ಪ್ರೇಮದ ಪರವಶತೆ!

'ಮುಳುಗಿದ ಕೈಗೆ ಸಮುದ್ರದ ಮುತ್ತು; ನಲ್ಲೆಯ ಮುಖಕೆ ನಲ್ಲನ ಸವಿಮುತ್ತು. ಕನಸಿನ ಹೃದಯಕೆ ತಾರುಣ್ಯದ ಕನಸು; ನನಗಾದರೋ ಎಲೆ ದೊರೆಯೆ ಸತ್ಯದ ಸವಿ ತಿನಸು!

'ಪುರೋಹಿತ ಪ್ರವಾದಿಗಳಿಗೆ ಅವರ ಮತಗಳ ನಲಿವು; ದೊರೆದಳಗಳಿಗೆ ಅವರ ಸಾಹಸದ ಉಲಿವು. ಸೋತವರಿಗೆ ವಿರಾಮ; ಗೆದ್ದವರಿಗೆ ಆರಾಮ. ನನಗಾದರೊ ಎಲೆ ದೊರೆಯೆ ಹಾಡಿನ ಪರವಶತೆ!'

'ಕಾಲದ ಪಕ್ಷಿ' ಎಂಬ ಕಾವ್ಯಗುಚ್ಛವನ್ನು ಓದಿದ ಸಹೃದಯರು

ಸರೋಜಿನಿಯ ಕಾವ್ಯಶಕ್ತಿಯನ್ನು ಮತ್ತಷ್ಟು ಪ್ರಶಂಸೆಮಾಡಿದರು. ಇದರಿಂದ ಉತ್ತೇಜಿತರಾದ ಸರೋಜಿನಿ ೧೯೧೭ ರಲ್ಲಿ 'ಮುರಿದ ರೆಕ್ಕೆ' ಎಂಬ ಕವನ ಸಂಗ್ರಹವನ್ನು ಹೊರತಂದರು. ಇದು ಅವರ ಕೊನೆಯ ಕಾವ್ಯಗುಚ್ಛ. ಈ ಗ್ರಂಥವನ್ನು 'ಇಂದಿನ ಕನಸಿಗೆ ನಾಳೆಯ ನನಸಿಗೆ' ಅರ್ಪಿಸಿದರು. ತಾವೇ ಇದಕ್ಕೆ ನಾಲ್ಕು ಮಾತಿನ ಮುನ್ನುಡಿ ಬರೆದರು : "ಗತಕಾಲದ ನಮ್ಮ ಭವ್ಯ ಇತಿಹಾಸವನ್ನು ನೋಡಿ, ಭಾರತ ಮಹಿಳೆಯರು ರಾಷ್ಟ್ರದ ಅಡುಗೆ ಮನೆಯ ಜ್ಯೋತಿಯನ್ನು, ಸಂದೇಶದ ಜ್ಯೋತಿಯನ್ನು, ಬಲಿದಾನದ ಜ್ಯೋತಿಯನ್ನು ಬೆಳಗಿ ಪ್ರಖ್ಯಾತರಾಗಿದ್ದಾರೆ. ಇಂದಿನ ಭಾರತದ ಮಹಿಳೆ ಮತ್ತೊಮ್ಮೆ ಎಚ್ಚೆತ್ತಿದ್ದಾಳೆ. ರಾಷ್ಟ್ರೀಯ ಜೀವನದ ಭವ್ಯದರ್ಶನಮಾಡಿ ಅದರ ರಕ್ಷಕಳೂ ಬೋಧಕಳೂ ಆಗಬೇಕೆಂದು ಮನದಟ್ಟು ಮಾಡಿಕೊಂಡಿದ್ದಾಳೆ. ಆ ದರ್ಶನ ಪ್ರೇಮದ ದರ್ಶನ, ನಂಬಿಕೆಯ ದರ್ಶನ, ಹಾಗೂ ರಾಷ್ಟ್ರಪ್ರೇಮದ ದರ್ಶನ....ರಾಷ್ಟ್ರದ ಬಲಿಪೀಠದಲ್ಲಿ ನಾನು ದೊಡ್ಡದನ್ನು ಅರ್ಪಿಸಲಾರೆ. ನಾನು ಬಡವೆ. ಆದಕಾರಣ ಈ ಗೀತನೈವೇದ್ಯವನ್ನು ನನ್ನ ತಾಯಿಗೆ ಅರ್ಪಿಸುತ್ತಿದ್ದೇನೆ."

ಈ ಕವನ ಸಂಗ್ರಹದಲ್ಲಿ ಬರುವ ಮೊದಲ ಕವನ 'ಮುರಿದ ರೆಕ್ಕೆ' ಎಂದು. ಈ ಕವನಕ್ಕೆ ಒಂದು ಕಾರಣವಿದೆ. ಸರೋಜಿನಿ ಸುಮಾರು ೧೯೧೫ರ ಹೊತ್ತಿಗಾಗಲೇ ಕಾವ್ಯಕುಂಜದಿಂದ ಹೊರಬಂದು ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಅಲ್ಪ ಸ್ವಲ್ಪ ಭಾಗವಹಿಸುತ್ತಿದ್ದರು. ಗೋಪಾಲಕೃಷ್ಣ ಗೋಖಲೆಯವರಂತಹ ಮಹಾವ್ಯಕ್ತಿಗಳ ಪರಿಚಯವಾಗಿತ್ತು. ಅವರು ಒಮ್ಮೆ ತಮ್ಮ ಆರೋಗ್ಯ ಸುಧಾರಣೆಗೋಸ್ಕರ ಪುಣೆಗೆ ಹೋದರು. ಅಲ್ಲಿ ಭಾರತ ಸೇವಾ ಸಂಘದಲ್ಲಿ (Servants of India Society) ಇಳಿದುಕೊಂಡರು. ದಿನವೂ ಗೋಖಲೆಯವರು ಬಂದು ಆರೋಗ್ಯ ವಿಚಾರಿಸಿಕೊಂಡು ಹೋಗುತ್ತಿದ್ದರು. ಬಂದಾಗಲೆಲ್ಲ ನಾಲ್ಕು ಉತ್ತೇಜನದ ಮಾತುಗಳನ್ನಾಡುತ್ತಿದ್ದರು. ಒಂದು ದಿನ ಸಂಜೆ ಹಾಗೆ ಮಾತಾಡುತ್ತಿರುವಾಗ ಸರೋಜಿನಿಯಲ್ಲಿ ಕಂಡು ಬಂದ ನಿರಾಶೆಯ ಭಾವನೆಯನ್ನು ನೋಡಿ 'ನಿನ್ನಂತಹ ಹಾಡುವ ಹಕ್ಕಿ ರೆಕ್ಕೆ ಮುರಿದಿದೆಯೆಂದು ನಿರಾಶೆ ಪಡುವುದೇಕೆ' ಎಂದು ಉತ್ತೇಜನದ ಮಾತುಗಳಾಡಿದರು. ಆ ಉತ್ತೇಜನದ ಮಾತೇ ಕಾವ್ಯವಸ್ತುವಾಯಿತು.

ಈ ಕಾವ್ಯ ಗುಚ್ಛದಲ್ಲಿ ಅನೇಕ ಸುಂದರ ಕವಿತೆಗಳಿವೆ. ರಾಷ್ಟ್ರೀಯ ಜೀವನದಲ್ಲಿ ಆಗಲೇ ಪಾಲುಗೊಳ್ಳುತ್ತಿದ್ದ ಸರೋಜಿನಿ ಗೋಖಲೆ, ಜಿನ್ನಾ, ಗಾಂಧೀಜೀ ಮುಂತಾದವರಿಗೆ ಅರ್ಪಿಸಿದ ಕವನಗಳಿವೆ. ೧೯೧೫ ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಹಾಡಿದ 'ಎದ್ದೇಳು' ಎಂಬ ಕವನ ವಿದೆ. ಈ ಸಂಗ್ರಹದಲ್ಲಿರುವ ಕವನಗಳಲ್ಲಿ ಕವಿ ತನ್ನನ್ನೇ ಅರ್ಪಿಸಿಕೊಳ್ಳುವ ತ್ಯಾಗಮನಸ್ಸು ಎದ್ದು ಕಾಣುತ್ತಿದೆ. 'ನನ್ನ ಸ್ಥಿತಿ ಯಾವ ಹೊತ್ತು ಏನೋ! ಕಾಪಾಡುವ ಭಾರ ನಿನ್ನದು. ಬೇಕಾದರೆ ಬರಲು ಸಿದ್ಧ.' ಎಂದು ಆತ್ಮ ಮೊರೆಯಿಡುತ್ತದೆ. ಆ ಮೊರೆಯನ್ನು ಲಾಲಿಸಿ :

'ನಿನಗೇನೆಯಾದುದನರ್ಪಿಸಲು ನನ್ನಲೇನಿರಲಿಲ್ಲ. ಆದಕಾರಣ ನಿನ್ನ ಪಾದಕ್ಕೆ ನನ್ನ ತಲೆಯನಿಟ್ಟೆ. ನಿನ್ನ ಪಾದಗಳ ಅಡಿಯಲ್ಲಿ ಹಸ್ತ ಗಳನಿಟ್ಟೆ, ನಿನ್ನ ಪಾದಗಳ ಮುಂದೆ ನನ್ನ ಪ್ರಾಣವನೇ ಇಟ್ಟೆ.'

—ವಿಜಯಿ

'ಎಲೆ ವಿಧಿ, ನೋವಿನ ಬೀಸುವಕಲ್ಲಿನಲಿ ನನ್ನ ಜೀವವ ಬೀಸಿ ಹಿಟ್ಟು ಮಾಡಿದೆ. ಇಕೊ, ಅದ ಮಿದಿದು ನನ್ನ ಕಣ್ಣೀರಿನಲಿ ಭರವಸೆಯ ರೊಟ್ಟಿಯನು ತಟ್ಟುವೆನು. ರೊಟ್ಟಿಯನು ಮಾಡಿ ದುಃಖದ ಕಹಿ ಬೇರನಲ್ಲದೆ ಬೇರೊಂದ ಕಾಣದ ಅಸಂಖ್ಯಾತ ಹೃದಯಗಳಿಗೆ ಶಾಂತಿ ಸಮಾಧಾನವ ನೀಡುವೆನು!'

—ಅಜೇಯ

'ತುದಿ ಬೆರಳುಗಳಿಂದ ನೀನೊಂದು ಕಾಡ ಹೂ ಹಿಡಿದು ಬೇಕು ಬೇಡಿಲ್ಲದ ತುಟಿಗಳಿಗೆ ಅದ ಸೋಮಾರಿತನದಿಂದ ಎತ್ತಿದೆ; ಸೋಮಾರಿಯಂತೆ ಅದರ ಕೆಂಪು ದಳಗಳ ಕಿತ್ತೆಸೆದೆ....ಅಯ್ಯೋ, ಅದು ನನ್ನ ಹೃದಯ!

'ತುದಿ ಬೆರಳುಗಳಲಿ ದ್ರಾಕ್ಷಾರಸದ ಬಟ್ಟಲನ್ನು ಹಿಡಿದು ಬೇಕು ಬೇಡಿಲ್ಲದ ತುಟಿಗಳಿಗದ ಹಗುರವಾಗಿ ಎತ್ತಿದೆ; ಹಗುರವಾಗಿ ಅದ ಕುಡಿದು ಬಟ್ಟಲ ಬಿಸಾಡಿದೆ....ಅಯ್ಯೋ! ಅದು ನನ್ನ ಆತ್ಮ!'

—ಚಂಚಲ

ನೀನು ಕರೆದರೆ ಕ್ಷಿಪ್ರದಲ್ಲಿ ಬರುವೆನು ದೇವಾ! ನಡುಗುವ ಜಿಂಕೆಯನು, ನಿಟ್ಟುಸಿರು ಬಿಡುವ ಪಾರಿವಾಳವನು ಮೀರಿ;

ಹಾವಾಡಿಗನ ಪುಂಗಿಯ ನಾದಕ್ಕೆ ಮರುಳಾಗಿ ಹಾರುವಾ ಹಾವಿನ ಗತಿಯನು ಮೀರಿ....ನೀನು ಕರೆದರೆ ಬರುವೆ ನಾ ಹೆದರದೆ.

‘ ನೀನು ಕರೆದರೆ ನಾನು ಬರುವೆನು. ಆಸೆಗಿಂ ಅತಿ ಸೂಕ್ಷ್ಮವಾಗಿ, ಬೆಂಕಿಯ ರೆಕ್ಕೆಯಂ ಕಾಲಿಗೆ ಕಟ್ಟಿಕೊಂಡ ಸಿಡಿಲಿಗಿಂ ಮಿಗಿಲಾಗಿ ನಾನು ಬರುವೆನು. ಜೀವನದ ಕಪ್ಪು ಪೆರ್ದೆರೆಗಳಾರ್ಭಟಿಸಲಿ, ಸಾವಿನ ಪ್ರಪಾತಗಳಡ್ಡಬರಲಿ....ನೀನು ಕರೆದರೆ ನಾನು ಹೆದರದೆ ಬರುವೆ.’ —ನೀನು ಕರೆದರೆ

‘ ಕಳೆದು ಹೋದ ಭಾವಾವೇಶ ಪುನಃ ಬೇಕಿಲ್ಲ; ನಿಷೇಧಿಸಿದ ನಂಬಿಕೆ, ಬೇಡವೆಂದ ಕನಸು ಬೇಕಿಲ್ಲ. ಹಾಳಾದ ಉದ್ದೇಶ, ಒಡೆದ ಹೆಮ್ಮೆ ಬೇಕಿಲ್ಲ; ತಾರೆಗಳ ಬೆಳಕು, ಬೆಳಗಿನ ಸಂಪರ್ಕ ಬೇಕಿಲ್ಲ. ಬೇಕೆನಗೆ ಕನಿಕರದ ಅರಗಳಿಗೆಯಲಿ ದುಃಖದಿಂ ಗೋಳಿಡುವ ನನ್ನಾತ್ಮ ಕಣ್ಣೀರು ಕರೆಯುವ ಕಾರುಣ್ಯ.’ —ಮೊರೆ

‘ ನೀನಿಚ್ಛೆಪಟ್ಟರೆ, ದೇವ, ನನ್ನ ಮಾಂಸವನೆ ನಿನ್ನ ನಾಯಿಗಳಿಗೆ ತಿನಿಸು ! ನಿನಗೆ ಬೇಕಾದರೆ ನನ್ನ ರಕ್ತವನೆ ನಿನ್ನ ತೋಟದ ಗಿಡಗಳಿಗೆ ಎರೆ. ನನ್ನ ಹೃದಯವನು ಬೂದಿ ಮಾಡು; ನನ್ನ ಕನಸುಗಳ ಧೂಳಿಮಾಡು—ಹೇ ದೇವ, ನಾನು ನಿನ್ನವಳಲ್ಲವೆ ಬದುಕಿಸಲು ಸಾಯಿಸಲು ? ’ —ನಿವೇದನೆ

ಮತ್ತೆರಡು ಕವನಗಳಿಂದ ಸರೋಜಿನಿಯವರ ಕಾವ್ಯವಿಹಾರವನ್ನು ಮುಗಿಸಬಹುದು :

‘ ಅಲೆಯುವ ಭಿಕ್ಷುಕರು ’ ಎಂಬ ಕವನ ಮೇಲೆ ಹೇಳಿದ ಅರ್ಪಣಾ ಭಾವನೆಯನ್ನೇ ಸೂಚಿಸುತ್ತದೆ :

‘ ಉಷೆಯ ಹೊಸ್ತಿಲಿನಿಂದ ಹೊರಟು ನಾವು ಅಲೆದಾಡುವೆವು, ಯಾವಾಗಲೂ ಅಲೆದಾಡುವೆವು ಸ್ನೇಹದ ಬೆಳಕು ಕಾಣುವ ತನಕ—
ಯ ಅಲ್ಲಾ ! ಯ ಅಲ್ಲಾ !

‘ ವಿಧಿಯ ಸ್ವಾತಂತ್ರ್ಯದ ಮಕ್ಕಳೈ ನಾವು. ನಮಗೇನು ಬೇಕು ಐಶ್ವರ್ಯ ಅಧಿಕಾರ, ಶ್ರೀಮಂತರ ವೈಭವದ ಶೃಂಗಾರ ?
ಯ ಅಲ್ಲಾ ! ಯ ಅಲ್ಲಾ !

‘ ಈ ಜೀವನ ಕೊಡಲಿ ಬಿಡಲಿ, ಸೂರು ಉಡುಗೆ ತೊಡುಗೆ

ಗಳಿರಲಿ ಇಲ್ಲದಿರಲಿ, ಅನ್ನ ಚಿನ್ನಗಳಿರಲಿ ಇಲ್ಲದಿರಲಿ, ನಾವೆಂದೂ ಆನಂದರು, ನಾವೆಂದೂ ಧೀರರು–ಯ ಅಲ್ಲಾ ! ಯ ಅಲ್ಲಾ !

'ಕಾಲ ಬೀಸುವ ಗಾಳಿ ; ಭವಿಷ್ಯ ಅರಳದ ಗುಲಾಬಿ. ಅದ ಕೊಯ್ಯುವರಾರೆಂಬುದನು ಯಾರೂ ಅರಿಯರು—ಯ ಅಲ್ಲಾ ! ಯ ಅಲ್ಲಾ !

'ಅದರಿಂದ ಅಂಜದೀ ತಂಡ ನಡೆಯುತಿಹುದು ; ಸ್ವಾತಂತ್ರ್ಯದ ದಂಡವನು ಹಿಡಿದು ಸಾಗುತಿಹುದು. ನಾಡಿನಿಂ ನಾಡಿಗೆ ನಾವು ಅಲೆಯುತಿರುವೆವು. ಯ ಅಲ್ಲಾ ! ಯ ಅಲ್ಲಾ !'

'ಗುಲಾಬಿಯ ಕಾಲ' ಎಂಬ ಕವಿತೆ ಕವಿಯು ಸೌಂದರ್ಯದಲ್ಲಿ ಸಮಾಧಿಯಾಗುವ ಅವನ ಅಂತಿಮ ಗುರಿಯನ್ನು ಸಾರುತ್ತದೆ :

ದೇವ ! ಇದು ಗುಲಾಬಿಯ ಕಾಲ ! ಹೊಲ ತೋಟಗಳಲಿ ಕುಡಿಯಿಡುತಿವೆ, ಅರಳುತಿವೆ ಎಂತು ಸೊಗಸಾಗಿ ! ಸಮಾಧಿ ಶಿಖರಗಳ ಮೇಲೆಂತು ಬೀಸುತಿವೆ, ಭೋಗ ಸೌಂದರ್ಯದ ಕೆಂಪು ಮಳೆಯನೆ ಕರೆಯುತಿವೆ !

'ಗುಲಾಬಿಯ ಸಮಾಧಿಯಲಿ ನನ್ನನು ಅಡಗಿಸು. ಸಕಲ ಸುಗಂಧಗಳ ಪೊದೆಯಿಂದ ತಿರಿದು ತಂದ ಗುಲಾಬಿಯ ಮದ್ಯದ ಲೆನ್ನನು ಮುಳುಗಿಸು. ಗುಲಾಬಿಯ ಚಿತೆಗೆನ್ನ ಕಟ್ಟು ; ಗುಲಾಬಿಯ ಬೆಂಕಿಗೆನ್ನನಟ್ಟು. ಮುದ್ದಿಸು ಎನ್ನ ಪ್ರೇಮದ ಗುಲಾಬಿಯ ಕಿರೀಟವ ನಿಟ್ಟು.'

ಹೀಗಿದೆ ಸರೋಜಿನಿಯವರ ಕವಿತಾ ಶಕ್ತಿ. ಮೂರು ಕವನ ಗುಚ್ಛಗಳಲ್ಲಿ ಕಂಡು ಬಂದ ಅವರ ನಾದಮಯ ಭಾವಮಯ ಕಾವ್ಯಶಕ್ತಿಯನ್ನು, ಆ ಸೌಂಧರ್ಯವನ್ನು ಸಾರಸ್ವತ ಲೋಕ ಕೊಂಡಾಡಿತು. ಲಂಡನ್ನಿನ ರಾಯಲ್ ಸೊಸೈಟಿ ಆಫ್ ಲಿಟರೇಚರ್ ಎಂಬ ಪ್ರಸಿದ್ಧ ಸಾಹಿತ್ಯ ಸಂಸ್ಥೆ ಸರೋಜಿನಿಯವರನ್ನು ತಮ್ಮ ಸಂಸ್ಥೆಯ ಗೌರವ ಸದಸ್ಯಣಿಯಾಗಿ ಸೇರಿಸಿಕೊಂಡಿತು. ಈ ಸಂಸ್ಥೆಯ ಸದಸ್ಯತ್ವವೆಂದರೆ ಸಾಮಾನ್ಯವಾದುದಲ್ಲ. ಮೇಧಾವಿಗಳೂ ಪ್ರತಿಭಾವಂತರೂ ಆದ ಕವಿಗಳಿಗೆ ಮತ್ತು ಸಾಹಿತಿಗಳಿಗೆ ಮಾತ್ರ ಅಲ್ಲಿ ಸ್ಥಳವಿತ್ತು. ಬ್ರಿಟಿಷ್ ಚಕ್ರವರ್ತಿ ಸರೋಜಿನಿಗೆ 'ಕೈಜರ್ ಹಿಂದ್' ಎಂಬ ಚಿನ್ನದ ಪದಕವನ್ನಿತ್ತು ಗೌರವಿಸಿದರು. ಈ ಪದಕವನ್ನು

ಪಡೆದ ಭಾರತೀಯರು ಇಬ್ಬರೇ ಇಬ್ಬರು: ಸರೋಜಿನಿ ದೇವಿ ಮತ್ತು ರವೀಂದ್ರನಾಥ ಠಾಕೂರರು. ದೇಶದ ಜನತೆ 'ಭಾರತದ ಕೋಗಿಲೆ' ಎಂಬ ಬಿರುದು ಕೊಟ್ಟಿತು. ಸಹೃದಯ ವಿಮರ್ಶಕರು ರವೀಂದ್ರನಾಥರು ಆಧ್ಯಾತ್ಮಿಕ ಕವಿಯಾದರೆ ಸರೋಜಿನಿ ಭಾವಾತ್ಮಕ ಕವಿ ಎಂದರು. ಅವರಿಬ್ಬರಿಗಿದ್ದ ವ್ಯತ್ಯಾಸ ಪುರುಷ—ಸ್ತ್ರೀಗಿದ್ದ ವ್ಯತ್ಯಾಸವಷ್ಟೇ ಎಂದರು. ಬೋಧಾತ್ಮಕ ಕವಿಗಳಾದ ಶ್ರೀ ಅರವಿಂದರು 'ಸರೋಜಿನಿಯವರ ಕವಿತೆಯಲ್ಲಿರುವ ಗುಣಗಳು ಅವರ ಅತ್ಯುತ್ತಮ ಕೃತಿಯನ್ನು ಮನೋಹರವಾಗಿ, ಅಸದೃಶವಾಗಿ, ಅಸಮಾನವಾಗಿ ಮಾಡಿವೆ.' ಎಂದು ಹೊಗಳಿದರು. ಆಲ್‌ಫ್ರೆಡ್ ಈ. ಫೆರಿಸ್ (Alfred E. Pheres) ಎಂಬುವರು 'ಜಪಾನ್ ಟೈಂಸ್' ಎಂಬ ಪತ್ರಿಕೆಯಲ್ಲಿ ಬರೆಯುತ್ತಾ 'ಹಿಂದು ಮುಂದೆ ನೋಡದೆ ಹೇಳಬಹುದು—ಸರೋಜಿನಿ ಈಗ ಇರುವ ಕವಿಗಳಲ್ಲೆಲ್ಲಾ ಅತ್ಯಂತ ಉನ್ನತ ಮಟ್ಟದ ಕವಿ' ಎಂದು ನುಡಿದರು. 'ಭಾರತೀಯ ಸ್ತ್ರೀಯರ ಆರಿಸಿದ ಕವನಗಳು' ಎಂಬ ಗ್ರಂಥಕ್ಕೆ ಬರೆದ ಭೂಮಿಕೆಯಲ್ಲಿ ಮಾರ್ಗರೆಟ್ ಮೈಕನಿಕೋಲ್ ಎಂಬ ಮಹಿಳೆ 'ಸರೋಜಿನಿಯವರ ಕವಿತೆಯಲ್ಲಿ ವಿಷಮತೆಯನ್ನು ಸಂಪೂರ್ಣವಾಗಿ ತೊಡೆದು ಸ್ವರಸಾಮಂಜಸ್ಯವನ್ನುಂಟುಮಾಡುವ ಪ್ರವಾಹವಿದೆ' ಎಂದು ಹೇಳಿದರು.

# ೭. ನಿರಾಶೆಯಿಂದ ನೆಚ್ಚಿಗೆ

ಕಾವ್ಯಸಾಮ್ರಾಜ್ಯದಲ್ಲಿ ವಿಹರಿಸುತ್ತಿದ್ದ ಸರೋಜಿನಿ ಬೇರೆ ಕೆಲಸಗಳಲ್ಲಿಯೂ ಆದಷ್ಟು ಭಾಗವಹಿಸುತ್ತಿದ್ದರು. ತಮ್ಮ ಸಂಸಾರ ನಿರ್ವಹಣೆಯಲ್ಲಿ ಬಿಡುವು ಸಿಕ್ಕಾಗಲೆಲ್ಲ ಸಾಮಾಜಿಕ ಕಾರ್ಯಗಳಲ್ಲಿ ಪ್ರವೇಶಿಸುತ್ತಿದ್ದರು. ಆದರೆ ಅವರಿಗೆ ಹೆಚ್ಚು ಬಿಡುವು ಸಿಕ್ಕುತ್ತಿರಲಿಲ್ಲ. ತಮ್ಮ ಮಕ್ಕಳ ಲಾಲನೆ ಪಾಲನೆಯನ್ನು ದಾದಿಯರಿಗೆ ಬಿಟ್ಟು ತಾವು ಹಾಯಾಗಿ ಕುಳಿತುಕೊಳ್ಳುವ ವ್ಯಕ್ತಿಯಾಗಿರಲಿಲ್ಲ. ಏಕೆಂದರೆ ಡಾ ನಾಯಿಡು ಒಂದಲ್ಲ ಹತ್ತು ಜನ ದಾದಿಯರನ್ನು ನೇಮಿಸುವಷ್ಟು ಅನುಕೂಲಸ್ಥರಾಗಿದ್ದರು. ಆದರೆ ಸರೋಜಿನಿ ಅದಕ್ಕೆ ಇಷ್ಟಪಡಲಿಲ್ಲ. ಮಕ್ಕಳ ಯೋಗಕ್ಷೇಮವನ್ನು, ಗೃಹ ಕೃತ್ಯದ ಕೆಲಸಗಳನ್ನು ತಾವೇ ನೋಡಿಕೊಳ್ಳುತ್ತಿದ್ದರು. ಅಡುಗೆಮನೆಯಲ್ಲಿಯೂ ಅವರ ಚಟುವಟಿಕೆಯನ್ನು ಕಾಣಬಹುದಿತ್ತು. ಹರಿದ ಸೀರೆಯೊಂದನ್ನು ಉಟ್ಟು ಕೈ ಮೈ ಮಸಿಮಾಡಿಕೊಂಡು ಅಡುಗೆಯಲ್ಲಿ ತೊಡಗುತ್ತಿದ್ದರು. ಅಷ್ಟೊಂದು ಆಸಕ್ತಿ ಅವರಿಗೆ ಗೃಹಕೃತ್ಯದ ಕೆಲಸದಲ್ಲಿ. ಅವರು ಒಂದಲ್ಲ ಹತ್ತಾರು ಭಕ್ಷ್ಯ ಭೋಜ್ಯಗಳನ್ನು ಮಾಡಿ ಬಡಿಸುವ ಸಿದ್ಧಹಸ್ತ ಪಡೆದಿದ್ದರು. ಒಟ್ಟಿನಲ್ಲಿ ಅವರು ತಮ್ಮ ತಂದೆ-ತಾಯಿಗಳಿಗೆ ಆದರ್ಶ ಮಗಳಾಗಿ, ಗಂಡನಿಗೆ ಆದರ್ಶ ಸತಿಯಾಗಿ, ಮಕ್ಕಳಿಗೆ ಆದರ್ಶ ತಾಯಾಗಿ, ಸರ್ವರಿಗೆ ಆದರ್ಶ ವ್ಯಕ್ತಿಯಾಗಿ ತಮ್ಮ ಸಂಸಾರ ಜೀವನ ಸಾಗಿಸಿದರು.

ಆದರೆ ಸರೋಜಿನಿ ಕೇವಲ ತನ್ನ ಸುಖವನ್ನು ನೋಡಿಕೊಂಡರೆ ಸಾಕೆ ಎಂದು ಆಲೋಚಿಸುತ್ತಿದ್ದರು. ಕೇವಲ ಕವಿತೆಯನ್ನು ಕಟ್ಟಿಕೊಂಡು ಕುಳಿತರೆ ಅದರಿಂದ ಸಕಲ ಭಾಗ್ಯವಾದಂತಾಯಿತೆ ಎಂದು ಚಿಂತಿಸುತ್ತಿದ್ದರು. ಅಂದಿನ ಸಮಾಜ, ಅದರಲ್ಲಿಯೂ ಸ್ತ್ರೀ ಸಮಾಜ, ಸರೋಜಿನಿಯಂತಹ ವ್ಯಕ್ತಿಗಳಿಗೆ ಕಾಯುತ್ತ ಕುಳಿತಿತ್ತು. ಅಜ್ಞಾನ, ಅವಿದ್ಯೆ, ಬಾಲ್ಯ ವಿವಾಹ, ಘೋಷಾ ಪದ್ಧತಿ ಇತ್ಯಾದಿ ಸಾಮಾಜಿಕ ಲೋಪದೋಷಗಳನ್ನು ನಿವಾರಣೆ ಮಾಡಬಲ್ಲ ವ್ಯಕ್ತಿ ಬೇಕಾಗಿತ್ತು. ಅಂತಹ ವ್ಯಕ್ತಿ ಸರೋಜಿನಿಯಾಗಿದ್ದರು. ಅವರಲ್ಲಿ ಅದಕ್ಕೆ ತಕ್ಕ ಯೋಗ್ಯತೆ ಇತ್ತು. ಅವರು ಹೆಸರಾಂತ ಮನೆತನದ ಹೆಣ್ಣುಮಗಳು. ವಿದ್ಯೆಯಂತೂ ತುಂಬಿತ್ತು. ಸಮಾಜದ

ಆಗಿನ ಮುಖಂಡರುಗಳಲ್ಲಿ ಸಾಮಾನ್ಯವಾಗಿ ಕಂಡುಬರುತ್ತಿದ್ದ ತಿಳಿವಳಿಕೆ ಗಿಂತ ಹೆಚ್ಚು ತಿಳಿವಳಿಕೆ ಅವರಲ್ಲಿ ಕಂಡು ಬರುತ್ತಿತ್ತು. ಜೊತೆಗೆ ಅವರ ವಿದೇಶಗಮನ ಆ ತಿಳಿವಳಿಕೆಗೆ ವೈಶಾಲ್ಯತೆಯನ್ನು ನೀಡಿತ್ತು; ನಮ್ಮ ದೇಶದ ಹಾಗೂ ಸಮಾಜದ ನಡೆನುಡಿಗಳಲ್ಲಿ, ಕಾಯದೆ ಕಟ್ಟಳೆಗಳಲ್ಲಿ ಇರುವ ಲೋಪದೋಷಗಳೇನೆಂದು ತಿಳಿದುಕೊಳ್ಳುವ ತಾರತಮ್ಯ ಹಾಗೂ ವಿಮರ್ಶನಾ ಶಕ್ತಿ ಇತ್ತು. ಇವೆಲ್ಲದರ ಜೊತೆಗೆ ತಮ್ಮ ದೇಶದ ಜನರ ಸ್ಥಿತಿಯನ್ನು ಕಂಡು ಮರುಗುವ ಹೃದಯ ಅವರಿಗಿತ್ತು.

ಈ ಎಲ್ಲ ಕಾರಣಗಳಿಂದ ಅವರು ಸುಮ್ಮನೆ ಕುಳಿತುಕೊಳ್ಳಲು ಸಾಧ್ಯ ವಾಗಲಿಲ್ಲ. ಮೆಲ್ಲಮೆಲ್ಲನೆ ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರಗಳಲ್ಲಿ ಭಾಗವಹಿಸಲಾರಂಭಿಸಿದರು. ಅವರ ಗಂಡ ಡಾ. ನಾಯಿಡು ಅವರು ಅದಕ್ಕೆ ಅಡ್ಡಿ ಬರಲಿಲ್ಲ. ತನ್ನ ಹೆಂಡತಿ ಸಾಮಾನ್ಯ ವ್ಯಕ್ತಿಯಲ್ಲ ಎಂದು ಅವರಿಗೆ ಸ್ಪಷ್ಟವಾಗಿ ಗೊತ್ತಾಯಿತು. ಸರೋಜಿನಿ ಮೊಟ್ಟಮೊದಲು ಭಾಗವಹಿಸಿದ ಸಾರ್ವಜನಿಕ ಕೆಲಸವೆಂದರೆ ಹೈದರಾಬಾದು ಸಂಸ್ಥಾನದಲ್ಲಿ ನದಿಯ ಪ್ರವಾಹ ದಿಂದ ಪೀಡಿತರಾದ ಜನರಿಗೆ ಪರಿಹಾರ ಒದಗಿಸಿದ್ದು. ನದಿಯ ಪ್ರವಾಹ ದಲ್ಲಿ ಅನೇಕ ಜನ ಆಶ್ರಯ ಕಳೆದುಕೊಂಡು ಕಷ್ಟಕ್ಕೊಳಗಾದರು. ಅವರ ದುಃಸ್ಥಿತಿಯನ್ನು ಕಂಡು ಸರೋಜಿನಿಯ ಹೃದಯ ಮರುಗಿತು. ಮನೆಯಲ್ಲಿ ತೊಟ್ಟಿಲು ತೂಗುವುದನ್ನು ಬಿಟ್ಟು ಹೊರಗೆ ಹೊರಟರು. ದೇಶದಲ್ಲೆಲ್ಲಾ ಅಲೆದರು. ಅನುಕೂಲಸ್ಥರನ್ನು ಕಂಡು ಮಾತಾಡಿ ಹಣ ಶೇಖರಿಸಿದರು. ಆ ಹಣದಿಂದ ಬಟ್ಟೆಬರೆಗಳನ್ನೂ ಅನ್ನ ಆಹಾರಗಳನ್ನೂ ಒದಗಿಸಿದರು. ಗಂಡನೊಡಗೂಡಿ ನಿರಾಶ್ರಿತರಿಗೆ ವೈದ್ಯಸಹಾಯ ಒದಗಿಸಿದರು. ಸಾವಿರಾರು ಜನರು ಅವರ ಸಹಾಯ ಪಡೆದರು. ಅವರ 'ಚಿನ್ನದ ಹೊಸ್ತಿಲು' ಅಭಯಾಶ್ರಮವಾಯಿತು. ಆಶ್ರಯ ಪಡೆದ ಜನರು ಗಂಡಹೆಂಡಿರನ್ನೂ ಅವರ ಮಕ್ಕಳನ್ನೂ ಹರಸಿದರು.

ಸರೋಜಿನಿ ಇಷ್ಟರಿಂದಲೇ ತೃಪ್ತರಾಗಲಿಲ್ಲ. ಒಮ್ಮೆ ಸೇವಾ ಕಾರ್ಯ ದಲ್ಲಿ ಭಾಗವಹಿಸಿದರೋ ಇಲ್ಲವೋ ಆಗ ಅದರಲ್ಲಿ ಆನಂದವಿದೆ, ತೃಪ್ತಿ ಇದೆ ಎಂಬುದನ್ನು ಅರಿತರು. ಇಂಗ್ಲೆಂಡಿನಿಂದ ಹಿಂದಿರುಗಿ ವಿವಾಹ ಮಾಡಿಕೊಂಡು ಒಂದೆಡೆ ನಿಂತಾಗಿನಿಂದಲೂ ಅವರು ದೇಶದ ಸ್ತ್ರೀಯರ ದುಃಸ್ಥಿತಿಯ ಬಗ್ಗೆ ಚಿಂತಿಸುತ್ತಿದ್ದರು. 'ಅಯ್ಯೋ! ನಮ್ಮ ಸ್ತ್ರೀಯರು ಈಗ ಎಷ್ಟು ಅವಿದ್ಯಾ

ವಂತರು! ಅವರು ಹಿಂದೆ ಎಷ್ಟು ವಿದ್ಯಾವಂತರಾಗಿದ್ದರು. ಅವರ ಅವಿದ್ಯೆಯನ್ನೂ ಅಜ್ಞಾನವನ್ನೂ ಮೂಢನಂಬಿಕೆಗಳನ್ನೂ ತೊಲಗಿಸುವುದು ಹೇಗೆ? ಸ್ತ್ರೀ ಪುರುಷನ ಅರ್ಧಾಂಗಿಯಲ್ಲವೆ? ಸಂಸಾರ ರಥವನ್ನು ಪುರುಷನೊಡನೆ ಎಳೆಯುವ ವ್ಯಕ್ತಿಯಲ್ಲವೆ? ಎರಡು ವ್ಯಕ್ತಿಗಳೂ ಸಮಾನವಾಗಿರಬೇಡವೆ? ಹಾಗಿಲ್ಲದೆ ಒಬ್ಬರು ಮುಂದಿದ್ದು ಮತ್ತೊಬ್ಬರು ಹಿಂದಿದ್ದರೆ ಸಂಸಾರರಥ ಸುಗಮವಾಗಿ ಸಾಗುವುದೇ?'—ಹೀಗೆಲ್ಲ ಯೋಚಿಸುತ್ತಿದ್ದರು. ಹೆಂಗಸರನ್ನೆಲ್ಲಾ ಒಂದು ಕಡೆ ಸೇರಿಸಿ 'ನೀವೆಲ್ಲಾ ವಿದ್ಯಾವತಿಯರಾಗಬೇಕು. ನೀವು ವಿದ್ಯಾವತಿಯರಾದರೆ ನಿಮ್ಮ ಮಕ್ಕಳೂ ವಿದ್ಯಾವಂತರಾಗುತ್ತಾರೆ. ಇಲ್ಲದಿದ್ದರೆ ಇಲ್ಲ' ಎಂದು ಬೋಧಿಸುತ್ತಿದ್ದರು. ಗಂಡಸರನ್ನು ಸೇರಿಸಿ ಅಥವಾ ಅವರು ಎಲ್ಲಾದರೂ ಸೇರಿದ್ದಾಗ ಧೈರ್ಯವಾಗಿ ಅವರ ಮುಂದೆ ನಿಂತು 'ನೀವೊಬ್ಬರು ವಿದ್ಯಾವಂತರಾದರೆ ಸಾಲದು. ನಿಮ್ಮ ಹೆಂಡತಿಯರೂ ವಿದ್ಯಾವತಿಯರಾಗಬೇಕು. ವಿದ್ಯೆ ಬೆಳಕು; ಅವಿದ್ಯೆ ಕತ್ತಲೆ. ಕತ್ತಲೆಯಲ್ಲಿ ತೊಳಲಬೇಡಿ. ಬೆಳಕಿನಲ್ಲಿ ಸಂಸ್ಕೃತಿಯ ಜೀವನ ನಡಸಿ' ಎಂದು ಹೇಳುತ್ತಿದ್ದರು. ಭಾರತದಲ್ಲಿ ಆಗಲೇ ಆನಿಬೆಸೆಂಟರೂ ಮಾರ್ಗರೆಟ್ ಕಸಿನ್ಸರೂ ಈ ಬಗ್ಗೆ ಒಂದು ಚಳುವಳಿಯನ್ನೇ ಹೂಡಿದ್ದರು. ಸರೋಜಿನಿ ಈ ಕಾರ್ಯ ಕ್ಷೇತ್ರದಲ್ಲಿ ಭಾಗವಹಿಸಿದ್ದು ಆ ಚಳುವಳಿಗೆ ಹೆಚ್ಚು ಬೆಂಬಲ ಕೊಟ್ಟಂತಾಯಿತು.

ಹೀಗೆ ಮೆಲ್ಲಮೆಲ್ಲನೆ ಸರೋಜಿನಿ ಸಮಾಜಸೇವೆ, ಸ್ತ್ರೀ ಆಂದೋಳನದಲ್ಲಿ ಭಾಗವಹಿಸಲಾರಂಭಿಸಿದರು. ಈ ಕೆಲಸಗಳಲ್ಲಿ ತೊಡಗಿದ ಅವರಿಗೆ ದೇಶದ ನಾಯಕರ ಪರಿಚಯವೂ ಆಗುತ್ತಿತ್ತು. ದೊಡ್ಡ ದೊಡ್ಡ ಸಭೆಗಳಲ್ಲಿ ಸಮ್ಮೇಳನಗಳಲ್ಲಿ ಭಾಗವಹಿಸುವ ಅವಕಾಶವೂ ಸಿಗುತ್ತಿತ್ತು. ೧೯೦೬ರಲ್ಲಿಯೇ ಅವರು ಕಲ್ಕತ್ತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಭಾಷಣಮಾಡಿದರೆಂದು ಬಾಬು ರಾಜೇಂದ್ರಪ್ರಸಾದರು ತಮ್ಮ ಆತ್ಮ ಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ. ಆ ಕಾಲಕ್ಕೆ ಪ್ರಸಾದರು ಇನ್ನೂ ಕಾಂಗ್ರೆಸ್ಸಿಗೆ ಸೇರಿರಲಿಲ್ಲ. ಅವರು ಸೇರಿದ್ದು ೧೯೧೧ರಲ್ಲಿ. ೧೯೦೬ ರಲ್ಲಿ ಅವರು ಅಧಿವೇಶನಕ್ಕೆ ಸ್ವಯಂಸೇವಕರಾಗಿ ಬಂದಿದ್ದರಂತೆ. ಆಗ ಅವರು ಪ್ರಥಮ ಬಾರಿಗೆ ಸರೋಜಿನಿ, ಪಂಡಿತ ಮಾಳವೀಯ ಮತ್ತು ಮಹಮ್ಮದಾಲಿ ಜಿನ್ನಾರವರ ಭಾಷಣಗಳನ್ನು ಕೇಳಿದರಂತೆ. ಅಂದರೆ, ಈಗಿನ ನಮ್ಮ

ರಾಷ್ಟ್ರಾಧ್ಯಕ್ಷರು ಇನ್ನೂ ಕಾಂಗ್ರೆಸ್ಸನ್ನು ಸೇರುವ ಮೊದಲೇ ಸರೋಜಿನಿ ಮುಖಂಡರ ಶ್ರೇಣಿಯಲ್ಲಿದ್ದರು; ಪ್ರಸಿದ್ಧ ಭಾಷಣಕಾರರೆಂದು ಹೆಸರು ಪಡೆದಿದ್ದರು. ವಿಶಾಲವಾದ ಭಾರತದೇಶದಿಂದ ಬಂದ ಅನೇಕಾನೇಕ ಮುಖಂಡರುಗಳನ್ನು ಬಿಟ್ಟು ಕಾಂಗ್ರೆಸ್ಸಿನ ಬಹಿರಂಗ ಅಧಿವೇಶನದಲ್ಲಿ ಭಾಷಣಮಾಡಲು ಅವಕಾಶ ಸಿಕ್ಕುತ್ತಿದ್ದುದು ಸಾಮಾನ್ಯ ವಿಷಯವಾಗಿರಲಿಲ್ಲ. ಹೀಗಿರುವಾಗ ಸರೋಜಿನಿಗೆ ಭಾಷಣ ಮಾಡುವ ಆಹ್ವಾನ ಬರುತ್ತಿದ್ದುದು ಬಹು ದೊಡ್ಡ ಗೌರವವಾಗಿತ್ತು. ಈ ಶತಮಾನದ ಆದಿಯಲ್ಲಿಯೇ ಸರೋಜಿನಿ ಎಂತಹ ಕೀರ್ತಿ ಪಡೆದಿದ್ದರು, ಎಂತಹ ಗೌರವ ಸಂಪಾದಿಸಿದ್ದರೆಂಬುದು ಇದರಿಂದ ವ್ಯಕ್ತವಾಗುತ್ತದೆ.

ಆದರೂ ಸರೋಜಿನಿಯಲ್ಲಿ ಧೈರ್ಯವಾಗಿ ಮುನ್ನುಗ್ಗುವ ಮನಸ್ಸೇಕೋ ಇರಲಿಲ್ಲ. 'ಚಿನ್ನದ ಹೊಸ್ತಿಲ'ನ್ನು ದಾಟಿ ಹೊರಗೆ ಹಾರಿದ 'ಕಾಲದ ಪಕ್ಷಿ' ನನ್ನದು 'ಮುರಿದ ರೆಕ್ಕೆ'ಯಲ್ಲಾ ! ಎಂದು ನಿರಾಶೆಗೊಂಡಿತ್ತು. ಬಹುಶಃ ಅವರ ಅನಾರೋಗ್ಯ ಅದಕ್ಕೆ ಕಾರಣವಿತ್ತೋ ಏನೋ. ಯಾವಾಗಲೂ ಅವರು ಒಂದಲ್ಲ ಒಂದು ಕಾಯಿಲೆಯಿಂದ ನರಳುತ್ತಿದ್ದರು. ಆ ನರಳುವಿಕೆಯನ್ನು ಸ್ಪಷ್ಟವಾಗಿ ವ್ಯಕ್ತಮಾಡಿದ್ದಾರೆ ಸರೋಜಿನಿ ತಮ್ಮ ಕವನಗಳಲ್ಲಿ. 'ನಾನು ಯಾವಾಗ ಸಾಯುತ್ತೇನೋ!' ಎಂಬ ಭೀತಿ ಅವರ ಮನಸ್ಸಿನಲ್ಲಿ ಯಾವಾಗಲೂ ಇತ್ತು. ೧೯೧೬ ರಲ್ಲಿ ಮೊಟ್ಟಮೊದಲಿಗೆ ಮಾರ್ಗರೆಟ್ ಕಸಿನ್ಸರು ಸರೋಜಿನಿಯನ್ನು ಅವರ ಹೈದರಾಬಾದಿನ ಮನೆಯಲ್ಲಿ ಕಂಡಾಗ ಸರೋಜಿನಿ ಹಾಸಗೆಯ ಮೇಲೆ ಮಲಗಿಕೊಂಡೇ 'ಮುರಿದ ರೆಕ್ಕೆ'ಗೆ ಸಿದ್ಧವಾಗಿದ್ದ ಕವನಗಳನ್ನು ಹಸ್ತಪ್ರತಿಯಿಂದ ಓದಿದರಂತೆ. ಚಿಕ್ಕ ವಯಸ್ಸಿನಲ್ಲಿ ಅಷ್ಟೇ ಅಲ್ಲ, ಈಚೆಗೂ ಅವರು ದಿನಬೆಳಗೆದ್ದರೆ ಯಾವುದಾದರೊಂದು ಅಸ್ವಸ್ಥತೆಯಿಂದ ನರಳುತ್ತಿದ್ದರು. ಒಮ್ಮೆ ಅವರನ್ನು ಒಬ್ಬ ಸ್ನೇಹಿತರು ಕೇಳಿದರಂತೆ 'ನಿಮಗೆ ಏನಾದರೊಂದು ಕಷ್ಟವಿದ್ದೇ ಇರುತ್ತದೆಯಲ್ಲಾ' ಎಂದು. ಅದಕ್ಕೆ ಸರೋಜಿನಿ ನಗುತ್ತ 'ನನ್ನಲ್ಲಿ ಸರಿಯಾಗಿರುವುದು ಯಾವುದಿದೆ ಹೇಳಿ' ಎಂದು ಮರುಪ್ರಶ್ನೆ ಕೇಳಿದರಂತೆ. ಹೀಗೆ ಅವರಿಗೆ ನಿತ್ಯ ಯಾವುದಾದರೊಂದು ಕಷ್ಟವಿದ್ದೇ ಇರುತ್ತಿತ್ತು. ಈ ಕಾರಣದಿಂದ ಅವರಿಗೆ ಜೀವನದಲ್ಲಿ ನಿಜವಾಗಿಯೂ ಬೇಸರವಾಗುತ್ತಿತ್ತು. ನಿರಾಶೆ ತಾನೇ ತಾನಾಗಿ ಬಂದುಬಿಟ್ಟಿತ್ತು.

ಒಮ್ಮೆ ಅವರು ಪುಣೆಯಲ್ಲಿ ತಮ್ಮ ಆರೋಗ್ಯ ಸುಧಾರಣೆಗೋಸ್ಕರ ಅಲ್ಲಿದ್ದ ಭಾರತ ಸೇವಾ ಸಂಘದಲ್ಲಿ (ಸರ್ವೆಂಟ್ಸ್ ಆಫ್ ಇಂಡಿಯಾಸೊಸೈಟಿಯಲ್ಲಿ) ತಂಗಿದ್ದರು. ಗೋಖಲೆಯವರ ಆಹ್ವಾನದ ಮೇಲೆಯೇ ಅವರು ಅಲ್ಲಿಗೆ ಹೋಗಿದ್ದರು. ದಿನವೂ ಗೋಖಲೆಯವರು ಬಂದು ಅವರ ಆರೋಗ್ಯವನ್ನು ವಿಚಾರಿಸಿ ಒಂದೆರಡು ಹಿತವಚನಗಳನ್ನು ಆಡಿ ಹೋಗುತ್ತಿದ್ದರು. ಆದರೂ ಸರೋಜಿನಿಯಲ್ಲಿ ಮೂಡಿದ್ದ ನಿರಾಶಾ ಭಾವನೆಯನ್ನು ಕಂಡು 'ಮಗು ನಿರಾಶಳಾಗಬೇಡ, ಚಿನ್ನದ ಹೊಸ್ತಿಲನ್ನು ದಾಟಿ ಬಂದ ಕಾಲದ ಪಕ್ಷಿ ರೆಕ್ಕೆ ಮುರಿದಿದೆಯೆಂದು ಹೆದರಬಾರದು' ಎಂದು ತಲೆ ಸವರುತ್ತ ಧೈರ್ಯವಿತ್ತರು. ಮತ್ತೊಮ್ಮೆ ಅವರಿಗೆ ಬಂದ ಯಾವುದೋ ಆವೇಶದಲ್ಲಿ ಸರೋಜಿನಿಯ ಕೈ ಹಿಡಿದು ಈ ರೀತಿ ನುಡಿದರು : "ಮಗಳೇ, ನೀನು ನನ್ನ ಸಂಗಡ ನಿಂತು ಅಲ್ಲಿ ಕಾಣುವ ಗಿರಿ ನಕ್ಷತ್ರಗಳ ಸಾಕ್ಷಿಯಾಗಿ ಮಾತು ಕೊಡು, ದೀಕ್ಷೆ ತೊಡು : 'ನನ್ನ ಜೀವನ, ನನ್ನ ಪ್ರತಿಭೆ, ನನ್ನ ಹಾಡು, ನನ್ನ ನುಡಿ, ನನ್ನ ಆಲೋಚನೆ ಮತ್ತು ನನ್ನ ಕನಸು ಮಾತೃಭೂಮಿಗೆ ಮುಡಿಪು.' ಎಂದು. ಎಲೆ ಕವಿಯೇ, ಗಿರಿಗಳ ಮೇಲೆ ನಿಂತು ದರ್ಶನಗಳನ್ನು ಕಂಡುಂಡು ಕೆಳಗೆ ದುಡಿಯುವವರಿಗೆ ನೆಚ್ಚಿನ ನುಡಿಗಳ ಸಂದೇಶವನ್ನು ನೀಡು."

ಈ ಭವ್ಯ ನುಡಿಗಳನ್ನು ಕೇಳಿದ ಸರೋಜಿನಿಯಲ್ಲಿ ಶ್ರೀ ರಾಮಕೃಷ್ಣ ಪರಮಹಂಸರ ನುಡಿಗಳನ್ನು ಕೇಳಿದ ಸ್ವಾಮಿ ವಿವೇಕಾನಂದರಲ್ಲಿ ಆದ ಪರಿವರ್ತನೆಯಾಯಿತು. ಅಂದು ಸ್ಥಿರಮಾಡಿಕೊಂಡರು ಸರೋಜಿನಿ ತಮ್ಮ ಮನಸ್ಸನ್ನು. 'ನನ್ನ ಕಷ್ಟ ಏನಿದ್ದರೂ ಅದು ಅಲ್ಪ. ದೇಶದ ಜನರು ನನಗಿಂತ ಹತ್ತರಷ್ಟು ಕಷ್ಟಪಡುತ್ತಿದ್ದಾರೆ. ಅವರ ಸೇವೆ ಮಾಡಲು, ಅವರ ಕಣ್ಣೀರು ಒರಸಲು ನನಗಿನ್ನೂ ಶಕ್ತಿ ಇದೆ. ಅದನ್ನು ವಿನಿಯೋಗಿಸುವೆ. ನನ್ನ ಕೈ ಮೀರಿ ದೇಶದ ಉನ್ನತಿಗಾಗಿ ದುಡಿಯುವೆ' ಎಂದು ನಿರ್ಧಾರ ಮಾಡಿಕೊಂಡರು.

ಅಂದರೆ ಸರೋಜಿನಿ ಅನಿವಾರ್ಯವಾಗಿ ಕಾವ್ಯಕ್ಷೇತ್ರವನ್ನು ಬಿಟ್ಟು ಸಾಮಾಜಿಕ ಹಾಗೂ ರಾಜಕೀಯ ಕ್ಷೇತ್ರವನ್ನು ಪ್ರವೇಶಿಸಬೇಕಾಯಿತು. ಆದರೆ ಹೀಗೆ ಮಾಡಿದ್ದು ಸರಿಯೇ ಎಂದು ಅನೇಕರು ಕೇಳಬಹುದು. ಆಗಲೂ ಕೇಳಿದರು. ಹಾಡುವ ಕೋಗಿಲೆ ರಾಜಕೀಯ ಗೊಂದಲಕ್ಕೆ ಳಿಯು

ದಿದ್ದರೆ ಪ್ರಪಂಚದ ಸರ್ವಶ್ರೇಷ್ಠ ಕವಿಗಳಲ್ಲಿ ಒಬ್ಬರಾಗುತ್ತಿದ್ದರು. ಈ ಕೂಗಾಟದ ರಾಜಕೀಯಕ್ಕಿಳಿದು ತಮ್ಮ ಸ್ಥಿರಪಟ್ಟವನ್ನು ಕಳೆದುಕೊಂಡು ಜನರ ಕ್ಷಣಿಕ ಮನ್ನಣೆಗೆ ಗುರಿಯಾದರಲ್ಲಾ ಎಂದು ಆಕ್ಷೇಪಣೆ ಮಾಡಿದರು. ಆದರೆ ಸರೋಜಿನಿಯ ಜೀವನದಲ್ಲಿ ಯಾವ ಪರಿವರ್ತನೆಯಾಯಿತು ಅದು ತತ್ವಶಃ ಯಾವ ಪರಿವರ್ತನೆಯೂ ಅಲ್ಲ ಎಂಬುದನ್ನು ನಾವು ನೋಡಬೇಕು. ಹೊರಗಿನ ಅವಸ್ಥೆಗಳನ್ನು ಬದಲಿಸುತ್ತ ಹೋಗುವುದು ಜೀವನದ ಮುಖ್ಯ ಧಾರೆಯಾಗಿದೆ. ಕವಿಯಾಗಿದ್ದ ಸರೋಜಿನಿ, ಜನತೆಯಿಂದ ದೂರವಿದ್ದು ಅವರ ಜೀವನದ ಬಗ್ಗೆ ಹಾಡುತ್ತಿದ್ದ ಸರೋಜಿನಿ, ಜನತೆಯಲ್ಲಿ ಬೆರೆತು ಹೋದರು ಅಷ್ಟೆ. ಆತ್ಮ ಸಮರ್ಪಣೆ ವ್ಯಕ್ತಿಯಿಂದ ಸಮಾಜಕ್ಕೆ ಹಬ್ಬಿತು. ನಾರಿಯು ಮಾತೆಯಾದಳು. ಮಾತೃತ್ವದ ಭಾವನೆಗಳು ಆಕೆಯ ಭೋಗ ವನ್ನು ಶಿಥಿಲಗೊಳಿಸಿದುವು. ಜೀವನ ಅಗಣಿತ ಮಕ್ಕಳಲ್ಲಿ ಹಂಚಿಹೋಗಿ ವಿಸ್ತೃತವಾಯಿತು.

ಹೀಗೆ ಹೇಳಿದ್ದರಿಂದ ಸರೋಜಿನಿದೇವಿಯಲ್ಲಿದ್ದ ಕವಿ ನಷ್ಟವಾದ ನೆಂದು ಭಾವಿಸಬಾರದು. ಅಥವಾ ಕವಿಯ ಸಮಾಧಿಯ ಮೇಲೆ ರಾಜ ನೀತಿಜ್ಞತೆಯ ಅವತಾರವಾಯಿತೆಂದೂ ಭಾವಿಸಬಾರದು. ಕವಿ ನಷ್ಟವಾಗ ಲಿಲ್ಲ. ಆವನು ವಿಕಸಿತವಾಗಿ ಬಂಧನಗಳನ್ನು ಬಿಚ್ಚಿ, ಸೀಮೆಗಳನ್ನು ದಾಟಿ ಹೊರಗೆ ಬಂದ. ಈ ಬಗ್ಗೆ ಸರೋಜಿನಿದೇವಿಯನ್ನೇ ಒಮ್ಮೆ ಪ್ರಶ್ನಿಸಿದಾಗ ಅವರು ಒಂದು ಸಭೆಯಲ್ಲಿ ತರುಣರನ್ನು ಉದ್ದೇಶಿಸಿ ಈ ರೀತಿ ಉತ್ತರ ಕೊಟ್ಟರು :

"ಅನೇಕ ಸಲ ನನ್ನನ್ನು ಕೇಳಿದ್ದಾರೆ: ನೀನು ಕನಸಿನ ದಂತ ಶಿಖರವನ್ನು ತೊರೆದು ಈ ಕೋಲಾಹಲದ ಜೀವನಕ್ಕೇಕೆ ಬಂದೆಯೆಂದು. ಕವಿಯ ಕೊಳಲು ವೀಣೆಗಳನ್ನು ತೊರೆದು ಸ್ವಾತಂತ್ರ್ಯ ಸಂಗ್ರಾಮದ ಕಹಳೆ ಯನ್ನೇಕೆ ಹಿಡಿದು ಬಂದೆ ಎಂದು. ಅದಕ್ಕೆ ನನ್ನ ಉತ್ತರ ಇಷ್ಟೆ: ಕವಿ ಗುಲಾಬಿ ತೋಟದಲ್ಲಿ ಕಟ್ಟಿದ ಕನಸಿನ ದಂತಶಿಖರದಲ್ಲಿದ್ದರೆ ಆತನ ಕರ್ತವ್ಯ ಮುಗಿಯಲಿಲ್ಲ. ಅವನ ಕರ್ತವ್ಯ ಜನಗಳ ಮಧ್ಯೆ ಇದೆ; ಹೆದ್ದಾರಿಗಳ ಕೆಂಧೂಳಿನಲ್ಲಿದೆ. ಕವಿಯು ಆಗುಹೋಗು ಯುದ್ಧದ ಕಷ್ಟಕಾರ್ಪಣ್ಯ ಗಳಲ್ಲಿದೆ. ಅಪಾಯವೊದಗಿದಾಗ, ಸೋಲಾಗಿ ನಿರಾಶೆಯ ಮೋಡ ಕವಿದಾಗ ಕನಸು ಕಾಣುವವನಿಗೆ ಕವಿ ಹೇಳಬೇಕು : 'ನೀನು ನಿಜವಾಗಿಯೂ ಕನಸು

ಕಾಣುವುದಾದರೆ ಎಲ್ಲ ಕಷ್ಟಗಳೂ ಎಲ್ಲ ಭ್ರಾಂತಿಗಳೂ ಎಲ್ಲ ನಿರಾಶೆಗಳೂ ಕೇವಲ ಮಾಯೆ, ನೆಚ್ಚು ಮಾತ್ರ ಸತ್ಯ ' ಎಂದು. ಇಂದು ನಾನು ಇನ್ನೂ ಹೆಚ್ಚು ಕನಸು ಕಾಣುವ, ಅಪಾರ ಸಾಹಸವುಳ್ಳ ತರುಣರ ಮುಂದೆ ನಿಂತಿದ್ದೇನೆ. ಇಂದು ಹೋರಾಟದ ಕಾಲವೊದಗಿದೆ. ಭಾರತಕ್ಕೆ ಗೆಲುವು ದೊರಕಿಸುವುದು ನಿಮ್ಮ ಕೈಯಲ್ಲಿದೆ. ನಾನು, ಕೇವಲ ಅಬಲೆಯಾದ ನಾನು, ಮನೆ ಬಿಟ್ಟು ಬಂದಿದ್ದೇನೆ. ಕನಸುಗಳನ್ನು ಕಾಣುತ್ತಿದ್ದ ನಾನು ಕೋಲಾಹಲದ ರಂಗಕ್ಕೆ ಧುಮುಕಿದ್ದೇನೆ. ಇದೋ ಕೂಗುವೆನು ' ನುಗ್ಗಿ, ಮುನ್ನುಗ್ಗಿ ! ಜಯಗಳಿಸಿರಿ !' ಎಂದು."

ಆದರೆ ಸರೋಜಿನಿದೇವಿ ದೇಶಭಕ್ತಳಾಗಿದ್ದಷ್ಟು ರಾಜನೀತಿಜ್ಞಳಾಗಿರಲಿಲ್ಲ ಎಂಬುದನ್ನು ನಾವಿಲ್ಲಿ ಮರೆಯಬಾರದು. ಆಕೆಯ ಅಗಾಧ ದೇಶಭಕ್ತಿಗೆ ರಾಜನೀತಿ ಆಧಾರವಾಗಿರಲಿಲ್ಲ. ಅವರಲ್ಲಿ ಮಾತೃತ್ವವೇನಿತ್ತು ಅದು ತನ್ನ ಅಗಣಿತ ಮಕ್ಕಳ ದುಃಖವನ್ನು ಸಹಿಸುತ್ತಿರಲಿಲ್ಲ. ಸಂಪೂರ್ಣ ಆತ್ಮಾರ್ಪಣೆ ಮಾಡುವುದೇ ಆ ಮಾತೃತ್ವದ ಹಂಬಲವಾಗಿತ್ತು. ಅವರು ಮಾತನಾಡಿದರೆ ಮಾತುಗಳು ಕಾವ್ಯಧಾರೆಯಂತೆ ಮುಖದಿಂದ ಹೊರಹೊಮ್ಮುತ್ತಿದ್ದುವು. ರಾಜನೀತಿ ಅವರ ಮೃದುಭಾವನೆಗಳನ್ನು ಕೊಂಚವೂ ಶಿಥಿಲಮಾಡಿರಲಿಲ್ಲ. ಅವರ ವಾಣಿಯಲ್ಲಿ ಯೌವನದ ಉನ್ಮೇಷವೂ ಪ್ರಾತಃಕಾಲದ ಗಾಳಿಯಲ್ಲಿರುವ ಚೇತನವೂ ತುಂಬಿದ್ದುವು. ಅನಂತರ ಅಂದರೆ ೧೯೨೧ ರಲ್ಲಿ ಅವರು ಅಮೇರಿಕದ ಜನತೆಯನ್ನು ಕುರಿತು ಯಾವ ಭಾಷಣ ಮಾಡಿದರೋ ಆ ಭಾಷಣದಲ್ಲಿ ಮಾತೃತ್ವದ ಓಜೆ ತುಂಬಿತ್ತು—ಸ್ವಯಂ ಭಾರತಮಾತೆಯೇ ಅಮೇರಿಕಾ ದೇಶದವರೊಡನೆ ಮಾತನಾಡುತ್ತಿದ್ದಂತೆ. ಇದಕ್ಕೆ ಕಾರಣ ಅವರ ಮಾತೃತ್ವ ರಾಜಕೀಯ ನೀತಿಯನ್ನು ಮೀರಿ ನಿಂತದ್ದೇ ಆಗಿತ್ತು. ಅದನ್ನು ಕಂಡೇ ಹಲವಾರು ವರ್ಷಗಳನಂತರ ಪ್ರೊಫೆಸರ್ ಆಲ್ಡಸ್ ಹಕ್ಸ್ಲೀಯವರು (Prof. Aldous Huxley) ತಮ್ಮ ' ಜೆಸ್ಟಿಂಗ್ ಪೈಲೇಟ್ ' ಎಂಬ ಪ್ರವಾಸಿಕ ಗ್ರಂಥದಲ್ಲಿ ' ಸರೋಜಿನಿ ನಾಯಿಡುರವರಂತೆ ಭಾರತದ ಎಲ್ಲ ರಾಜನೀತಿಜ್ಞರೂ ಇದ್ದ ಪಕ್ಷದಲ್ಲಿ ಅದು ಭಾರತಕ್ಕೆ ಬಹು ಮಂಗಳಕರ ' ಎಂದು ಹೇಳಿದರು. ತಾವು ರಾಜನೀತಿಜ್ಞರಲ್ಲವೆಂದು ಸರೋಜಿನಿಯವರೇ ಆಗಾಗ್ಗೆ ಹೇಳುತ್ತಿದ್ದರು. ' ಹಾಗೆ ನನ್ನನ್ನು ಕರೆಯುವುದು ವಿಧಿಯ ಅಣಕ, ದೊಡ್ಡ ತಮಾಷೆ ' ಎಂದು ಅವರು ವಿನೋದ ಮಾಡುತ್ತಿದ್ದರು.

ಸರೋಜಿನಿಯ ಮಾತೃತ್ವ ಮನೆಯಲ್ಲಿ ಕುಳಿತು ಕೇವಲ ಹಾಡಿ ಸಂತೋಷಪಡಲಿಚ್ಛಿಸಲಿಲ್ಲ. ಜೀವನದಲ್ಲಿ ಧುಮುಕಿ ತನ್ನ ಬಂಧುಭಗಿನಿಯರ ಸೇವೆಯಲ್ಲಿ ತೊಡಗಬೇಕೆಂದು ಹಾರೈಸಿತು. ಆ ಹಾರೈಕೆ ಈಡೇರಲು ಸದವಕಾಶವೂ ಒದಗಿತ್ತು. ಗೋಖಲೆಯವರು ಅವರ ಕೈಮರವಾದರು. ಮೇಲಾಗಲೇ ಹೇಳಿದ ಗೋಖಲೆಯವರ ನುಡಿಗಳನ್ನು ಕೇಳಿ ಅವರಲ್ಲಿ ನವ ಚೇತನ ಸಂಚಾರವಾದಂತಾಯಿತು. ಅವರ ನುಡಿ ಕಟ್ಟಾಜ್ಞೆಯಂತಿತ್ತು.

ಆ ಕಾಲ ಬಹಳ ಪ್ರಕ್ಷುಬ್ಧವಾಗಿತ್ತು. ರಾಷ್ಟ್ರದ ಆಕಾಶದಲ್ಲಿ ಕಾರ್ಮೋಡಗಳು ಕವಿದಿದ್ದುವು. ಹಿಂದೂ ಮುಸಲ್ಮಾನರಲ್ಲಿ ವೈಷಮ್ಯ ದಿನೇ ದಿನೇ ಬೆಳೆಯುತ್ತಿತ್ತು. ಆಗ್ಗೆ ಇದ್ದ ರಾಜಕೀಯದ ಮಿತಗಾಮಿ (Moderates), ಅತಿಗಾಮಿ (Extremists) ಪಕ್ಷಗಳು ದೂರ ದೂರ ಹೋಗುತ್ತಿದ್ದುವು. ಇವನ್ನೆಲ್ಲ ನೋಡಿ ಗೋಖಲೆಯವರಿಗೆ ರೋಸು ಹಿಡಿದು ಹೋಗಿತ್ತು. ಅವರು ಮಹಾ ರಾಜನೀತಿಜ್ಞರಾದರೂ ದೇಶವನ್ನು ಸರಿಯಾದ ದಾರಿಗೆಳೆದು ತರುವುದು ಅವರೊಬ್ಬರಿಗೆ ಕಷ್ಟವಾದ ಕೆಲಸವಾಗಿತ್ತು. ಆದರೆ ದೇಶದ ಅದೃಷ್ಟದಿಂದ ರಾಜಕೀಯ ಆಕಾಶದಲ್ಲಿ ಕವಿದಿದ್ದ ಮೋಡಗಳು ನಿಧಾನವಾಗಿ ಕರಗತೊಡಗಿದುವು. ಹೊಸ ಮುಸ್ಲಿಂ ಲೀಗು ೧೯೧೩ರಲ್ಲಿ ಲಕ್ನೋ ನಗರದಲ್ಲಿ ಸಭೆ ಸೇರಿತು. ಅದು ಇತಿಹಾಸ ಪ್ರಸಿದ್ಧವಾದ ಅಧಿವೇಶನ. ಮುಸ್ಲಿಮರು ಹಿಂದೂಗಳೊಡನೆ ಸಖ್ಯದಿಂದಿರಬೇಕೆಂದೂ ತಮ್ಮ ಕ್ಷೇಮ ಭಾರತದ ಕ್ಷೇಮವನ್ನವಲಂಬಿಸಿರುವುದರಿಂದ ಅದಕ್ಕಾಗಿ ದುಡಿಯಬೇಕೆಂದೂ ತೀರ್ಮಾನ ಕೈಕೊಂಡರು. ಅಂತಹ ಮಹಾಧಿವೇಶನದಲ್ಲಿ—ಕೇವಲ ಮುಸ್ಲಿಮರೇ ಇದ್ದ ಆ ಸಭೆಯಲ್ಲಿ—ಅವರನ್ನು ಉದ್ದೇಶಿಸಿ ಮಾತನಾಡುವ ಅವಕಾಶ ಸರೋಜಿನಿದೇವಿಯವರಿಗೆ ಒದಗಿತು. ವೇದಿಕೆಯ ಮೇಲೆ ನಿಂತು ಹೊಸ ಕಂಠದಿಂದ ಕವಿವಾಣಿ ನುಡಿಯಿತು. ಅನಂತರ ೧೯೧೫ ರಲ್ಲಿ ಸರ್. ಎಸ್. ಪಿ. ಸಿಂನ್ಹಾರವರ ಅಧ್ಯಕ್ಷತೆಯಲ್ಲಿ ನಡೆದ ಕಾಂಗ್ರೆಸ್ ಅಧಿವೇಶನದಲ್ಲಿ ಮೊಟ್ಟಮೊದಲನೆಯ ಸಲ ಸರೋಜಿನಿದೇವಿ ಸ್ವರಾಜ್ಯದ ಬಗ್ಗೆ ಮಾತನಾಡಿದರು. ತಮ್ಮ ವಾಗ್ಝರಿಯನ್ನು ಸುಂದರವಾದ ಕವನವೊಂದರಿಂದ ಮುಕ್ತಾಯ ಮಾಡಿದರು. ಅಂದಿನಿಂದ ಸರೋಜಿನಿದೇವಿಯವರ ರಾಜಕೀಯ ಜೀವನ ಪ್ರಾರಂಭವಾಯಿತೆನ್ನಬಹುದು.

# ೮. ಮಹಾತ್ಮನ ಪ್ರಥಮ ದರ್ಶನ

೧೯೧೫ ರಲ್ಲಿ ಗೋಖಲೆಯವರು ಇದ್ದಕ್ಕಿದ್ದಂತೆ ಕಾಲವಾದರು. ಅವರೇ ಸರೋಜಿನಿದೇವಿಯನ್ನು ದಂತ ಶಿಖರದಿಂದ ರಾಜಕೀಯ ಕೋಲಾಹಲಕ್ಕೆ ಇಳಿಸಿದ್ದವರು. ಅಂಥವರನ್ನು ಕಳೆದುಕೊಂಡ ಸರೋಜಿನಿ ಬಹು ದುಃಖಪಟ್ಟರು. ಆಗ್ಗೆ ಸ್ವಲ್ಪ ಮುಂಚೆ ದಕ್ಷಿಣ ಆಫ್ರಿಕಾದಿಂದ ಬಂದಿದ್ದ ಗಾಂಧೀಜಿ ಗೋಖಲೆಯವರ ಶವ ಸಂಸ್ಕಾರದಲ್ಲಿ ಭಾಗವಹಿಸಿ ಕಣ್ಣೀರಿಟ್ಟರು. ಅಂದಿನಿಂದ ಗಾಂಧೀಜಿ ತಮ್ಮ ಕ್ರಾಪನ್ನು ತೆಗೆಸಿ ಜುಟ್ಟು ಬಿಡಿಸಿದರು ಸಾಮಾನ್ಯ ಜನತೆಯಂತೆ ತಮ್ಮ ವೇಷ ಭೂಷಣವನ್ನು ಬದಲಾಯಿಸಿಕೊಂಡರು. ರಾಜಕೀಯ ರಂಗದಲ್ಲಿ ಕೈದೀವಿಗೆಯಂತಿದ್ದ ಗೋಖಲೆಯವರನ್ನು ಕಳೆದುಕೊಂಡ ಸರೋಜಿನಿದೇವಿ ಅನಿವಾರ್ಯವಾಗಿ ಗಾಂಧೀಜಿಯವರನ್ನೇ ತಮ್ಮ ಕೈದೀವಿಗೆಯನ್ನಾಗಿ ಮಾಡಿಕೊಂಡರು. ಆ ಕೈದೀವಿಗೆಯಲ್ಲಿ ತಮ್ಮ ಜೀವನವನ್ನು ಪ್ರಜ್ವಲ ಮಾಡಿಕೊಂಡ ಕಥೆ ಮಹಾ ಕಥೆ.

ಗಾಂಧೀಜಿಯವರಿಗೂ ಸರೋಜಿನಿದೇವಿಗೂ ಪ್ರಪ್ರಥಮ ಭೇಟಿ ಜರುಗಿದ್ದು ಲಂಡನ್ನಿನಲ್ಲಿ. ಅದು ನಡೆದದ್ದು ಹೀಗೆ: ದಕ್ಷಿಣ ಆಫ್ರಿಕಾದಲ್ಲಿ ಭಾರತೀಯ ವಲಸೆಗಾರರಿಗೆ ಆಗುತ್ತಿದ್ದ ಅನ್ಯಾಯಗಳನ್ನು ನೋಡಿ ಬ್ಯಾರಿಸ್ಟರಾಗಿ ಅಲ್ಲಿಗೆ ಹೋದ ಗಾಂಧೀಜಿಯವರು ಭಾರತೀಯರ ಕಷ್ಟ ಸುಧಾರಣೆಗೆ ಕೈ ಹಾಕಿದರು. ಸತ್ಯಾಗ್ರಹ ಹೂಡಿದರು. ಕೊನೆಯ ಹೋರಾಟ ೧೯೧೩ರಲ್ಲಿ. ಕೇಪ್ ಕಾಲೋನಿಯ ಸುಪ್ರೀಂ ಕೋರ್ಟು ಒಂದು ತೀರ್ಮಾನ ಕೊಟ್ಟಿತು. ಆ ತೀರ್ಪಿನ ಪ್ರಕಾರ ಹಿಂದು ಮುಸ್ಲಿಂ ಮತ್ತು ಪಾರ್ಸಿ ಜನರು ಅವರವರ ಮತಪದ್ಧತಿಯ ಅನುಸಾರವಾಗಿ ಮಾಡಿಕೊಂಡ ವಿವಾಹಗಳು ಅಕ್ರಮವಾದುವು. ದಕ್ಷಿಣ ಆಫ್ರಿಕಾದಲ್ಲಿದ್ದ ಭಾರತೀಯ ಸ್ತ್ರೀಯರು ವಿವಾಹಿತ ಧರ್ಮಪತ್ನಿಯರೆಂದು ಕರೆದುಕೊಳ್ಳುವಂತಿರಲಿಲ್ಲ. ಅವರು ಇಟ್ಟುಕೊಂಡವರ ಸ್ಥಾನಮಾನಕ್ಕಿಳಿದರು. ಅವರ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳು ನ್ಯಾಯಬಾಹಿರರಂತಾದರು. ಅಪ್ಪನ ಆಸ್ತಿಯಲ್ಲಿ ಅವರಿಗೆ ಯಾವ ಹಕ್ಕೂ ದೊರೆಯದಂತಾಯಿತು. ಹೀಗಾಗಿ ದಕ್ಷಿಣ ಆಫ್ರಿಕದ ಭಾರತೀಯರ ಸಮಸ್ಯೆ ಸ್ತ್ರೀ ಸಮಸ್ಯೆಯಾಯಿತು. ಇಂತಹ ಕಾನೂನನ್ನು

ರದ್ದು ಪಡಿಸಬೇಕೆಂದು ಗಾಂಧೀಜಿ ಸರ್ಕಾರವನ್ನು ಕೇಳಿದರು. ಆದರೆ ಸರ್ಕಾರ ರದ್ದು ಪಡಿಸುವುದು ಹೋಗಲಿ ಒಂದು ತಿದ್ದು ಪಡಿಯನ್ನೂ ಮಾಡು ವುದಿಲ್ಲವೆಂದಿತು. ಅನಿವಾರ್ಯವಾಗಿ ಸತ್ಯಾಗ್ರಹ ಪ್ರಾರಂಭವಾಯಿತು. ಪುರುಷರಿಗಿಂತ ಹೆಚ್ಚಾಗಿ ಸ್ತ್ರೀಯರು ಇದರಲ್ಲಿ ಭಾಗವಹಿಸಿದರು. ಸ್ತ್ರೀಯರ ನಾಯಕತ್ವವನ್ನು ಗಾಂಧೀಜಿಯವರ ಪತ್ನಿ ಕಸ್ತೂರಿ ಬಾ ವಹಿಸಿದರು. ಮನೆ ಬಿಟ್ಟು ಹೊರಗೆ ಬರದ ಎಷ್ಟೋ ಜನ ಸ್ತ್ರೀಯರು ಮನೆ ಬಿಟ್ಟು ಹೊರಗೆ ಬಂದರು. ನೇಟಾಲಿನ ಗಡಿಯನ್ನು ದಾಟಿದರು. ಅಲ್ಲಿಗೆ ಹೋಗಲು ಪರವಾನಗಿ ಬೇಕಾಗಿತ್ತು. ಪರವಾನಗಿ ಪಡೆಯದೆಯೇ ಇವರು ಗಡಿಯನ್ನು ದಾಟಿ ಕಾನೂನು ಉಲ್ಲಂಘನೆ ಮಾಡಿದರು. ಗಾಂಧೀಜಿ ಯವರ ದಸ್ತಗಿರಿಯಾಯಿತು. ಕಸ್ತೂರಿ ಬಾ ಅವರನ್ನೂ ದಸ್ತಗಿರಿ ಮಾಡಿ ದರು. ಎಷ್ಟೋ ಜನ ಸ್ತ್ರೀಯರನ್ನು ಜೈಲಿನಲ್ಲಿ ಇಟ್ಟುಕೊಳ್ಳಲಾರದೆ ಬಿಟ್ಟುಬಿಡುತ್ತಿದ್ದರು. ಆದರೆ ಅವರು ಪುನಃ ಸತ್ಯಾಗ್ರಹ ಹೂಡುತ್ತಿದ್ದರು. ಪೊಲಕ್ ಮುಂತಾದ ಗಾಂಧೀಜಿಯ ಫರಂಗಿ ಸ್ನೇಹಿತರು ಸತ್ಯಾಗ್ರಹದಲ್ಲಿ ಭಾಗವಹಿಸಿ ಸೆರೆಮನೆ ಸೇರಿದರು. ಜೈಲಿನಲ್ಲಿ ಸ್ಥಳವಿಲ್ಲದಂತಾಯಿತು.

ಈ ಹೋರಾಟ ಭಾರತಕ್ಕೆ ಸರಿಯಾಗಿ ತಿಳಿಯಬೇಕೆಂದು ಗಾಂಧೀಜಿ ಇಲ್ಲಿಗೆ ಸುದ್ದಿ ಕಳುಹಿಸಿಕೊಟ್ಟರು. ದಕ್ಷಿಣ ಆಫ್ರಿಕದ ಭಾರತೀಯರ ಹೋರಾಟವನ್ನು ಕೇಳಿದ ಭಾರತೀಯರು ಉದ್ವಿಗ್ನರಾದರು. ಗೋಖಲೆ ಯವರು ಫರಂಗಿಯವರಾದ ಸಿ. ಎಫ್. ಆಂಡ್ರ್ಯೂಸ್ ಮತ್ತು ಪಿಯರ್‌ಸನ್ ಎಂಬುವರನ್ನು ಭಾರತದ ರಾಯಭಾರಿಗಳಾಗಿ ಕಳುಹಿಸಿಕೊಟ್ಟರು. ಅವರು ಹೋಗಿ ವಿದ್ಯಮಾನಗಳನ್ನು ಅರಿತು ಗಾಂಧೀಜಿ ಹೇಳುವುದರಲ್ಲಿ ಯಾವುದೂ ಉತ್ಪ್ರೇಕ್ಷೆ ಇಲ್ಲವೆಂದು ತಿಳಿಸಿದರು. ಅವರೂ ಅಲ್ಲಿಯ ಸಮಸ್ಯಾ ಪರಿಹಾರಕ್ಕೆ ಸಹಾಯಕರಾಗಿ ಅಲ್ಲಿಯೇ ನಿಂತರು.

ಸುಮಾರು ಇಪ್ಪತ್ತು ಸಹಸ್ರ ಜನಗಳು ಜೈಲಿನಲ್ಲಿದ್ದರು. ಇಷ್ಟು ಜನರನ್ನು ಇಟ್ಟುಕೊಳ್ಳಲಾರದೆ ಸುಸ್ತಾದ ಜನರಲ್ ಸ್ಮಟ್ಸರು (General Smutts) ೧೯೧೩ ನೇ ಡಿಸೆಂಬರ್ ತಿಂಗಳಿನಲ್ಲಿ ಗಾಂಧೀಜಿ ಮತ್ತು ಇತರ ಸತ್ಯಾಗ್ರಹಿಗಳನ್ನು ಬಿಡುಗಡೆ ಮಾಡಿದರು. ಸ್ಮಟ್ಸರು ತಗ್ಗಿದರು. ವಿವಾಹಕ್ಕೆ ಸಂಬಂಧಪಟ್ಟ ಕಾನೂನನ್ನು ಹಿಂದಕ್ಕೆ ತೆಗೆದುಕೊಂಡರು. ದಕ್ಷಿಣ ಆಫ್ರಿಕಾದಲ್ಲಿದ್ದ ಭಾರತೀಯರಿಗೆ ಆ ದೇಶದವರಿಗಿದ್ದಂತೆ ಸ್ವಾತಂತ್ರ್ಯ

ದೊರೆಯಿತು. ಸತ್ಯಾಗ್ರಹ ಸಮರಕ್ಕೆ ವಿಜಯವಾಯಿತು. ಕೆಲವು ದಿವಸಗಳನಂತರ ಗಾಂಧೀಜಿಯ ಬಗ್ಗೆ ಸ್ಮಟ್ಸರು ಈ ರೀತಿ ಬರೆದರು:

"ಯಾವ ಮಹನೀಯರಲ್ಲಿ ನನಗೆ ಅತ್ಯಂತ ಗೌರವವಿತ್ತೋ ಅಂಥವರ ವಿರೋಧಿಯಾಗಬೇಕಾದ್ದು ನನ್ನ ವಿಧಿ....ಅವರು ಮಾನವ ಹಿನ್ನೆಲೆಯನ್ನು ಎಂದೂ ಮರೆತವರಲ್ಲ, ಎಂದೂ ಸಿಟ್ಟಾದವರಲ್ಲ, ಎಂದೂ ದ್ವೇಷ ಮಾಡಿದವರಲ್ಲ. ಎಂತಹ ಕಷ್ಟ ಸ್ಥಿತಿಯೇ ಬರಲಿ, ತಮ್ಮ ಮೃದು ಹಾಸ್ಯವನ್ನು ಬಿಟ್ಟವರಲ್ಲ."

ಈ ರೀತಿ ವಿಜಯ ಸಾಧಿಸಿದ ಗಾಂಧೀಜಿ ತಮ್ಮ ವಕೀಲಿ ವೃತ್ತಿಗೆ ತಿಲಾಂಜಲಿಯನ್ನಿತ್ತರು. ತಮಗಿದ್ದ ಅಪಾರ ಆದಾಯವನ್ನು ತೊರೆದು ಬಡತನದ ಜೀವನವನ್ನು ಹಿಡಿದರು. ಸೇವೆಗಾಗಿ ತಮ್ಮ ಜೀವನವನ್ನು ಮುಡಿಪಿಟ್ಟರು. ತಮ್ಮ ಮಕ್ಕಳನ್ನು ಭಾರತಕ್ಕೆ ಕಳುಹಿಸಿಬಿಟ್ಟರು. ಮುಂದೆ ಮಾಡಬೇಕಾದ ಕೆಲಸದ ಬಗ್ಗೆ ಗೋಖಲೆಯವರೊಡನೆ ಆಲೋಚಿಸಲು ಲಂಡನ್ನಿಗೆ ಹೊರಟರು. ಗೋಖಲೆಯವರೂ ಲಂಡನ್ನಿಗೆ ಬರುವವರಾಗಿದ್ದರು.

ಪತ್ನಿ ಸಮೇತ ಗಾಂಧೀಜಿ ಲಂಡನ್ ತಲುಪಿದರು. ಆದರೆ ಅವರು ಲಂಡನ್ ತಲುಪಿದ ಎರಡು ದಿನಗಳ ಕೆಳಗೆ ಮೊದಲನೆ ಮಹಾ ಯುದ್ಧದ ಘೋಷಣೆಯಾಗಿಬಿಟ್ಟಿತ್ತು. ಇಂಗ್ಲೆಂಡೂ ಜರ್ಮನಿಯೂ ಸಮರಾಂಗಣಕ್ಕಿಳಿದುವು. ಹೀಗಾಗಿ ೧೯೧೪ರ ನೆ ಇಸವಿಯ ಬೇಸಗೆಯಲ್ಲಿ ಗಾಂಧೀಜಿ ಲಂಡನ್ ನಗರವನ್ನು ತಲುಪಿದಾಗ ಅದು ಆಗಲೇ ಯುದ್ಧಸನ್ನದ್ಧವಾಗಿತ್ತು. ಊರಿನ ತುಂಬ ಕಾಕೀ ಬಟ್ಟೆಯ ಜನರೇ ಕಾಣಿಸುತ್ತಿದ್ದರು. ಲಂಡನ್ ನಗರ ನೋಡಿ ಕಸ್ತೂರಿ ಬಾ ಕಕ್ಕಾಬಿಕ್ಕಿಯಾದರು. ಗಾಂಧೀಜಿ ಲಂಡನ್ ತಲುಪ್ಪಿ ಒಂದು ಮನೆಯಲ್ಲಿ ಇಳಿದುಕೊಂಡು ಗೋಖಲೆಯವರಿಗಾಗಿ ಕಾಯುತ್ತ ಕುಳಿತರು. ಆದರೆ ಯುದ್ಧದ ದೆಸೆಯಿಂದ ಪ್ಯಾರಿಸ್ಸಿನಲ್ಲಿದ್ದ ಅವರು ಲಂಡನ್ನಿಗೆ ಬರುವುದು ಸಾಧ್ಯವಾಗಲಿಲ್ಲ. ಅವರನ್ನು ನೋಡದೆ ಭಾರತಕ್ಕೆ ಹಿಂದಿರುಗುವುದು ಗಾಂಧೀಜಿಗೆ ಇಷ್ಟವಿರಲಿಲ್ಲ. ಇರುವಷ್ಟು ದಿನ ತಾವೇನು ಮಾಡಬೇಕೆಂದು ಯೋಚಿಸಿದರು. ಅವರಿಗೆ ಬೋಯರ್ ಮತ್ತು ಜೂಲು ಯುದ್ಧಗಳಲ್ಲಿ ವೈದ್ಯಕೀಯ ಮತ್ತು ಇನ್ನಿತರ ಸಹಾಯ ಒದಗಿಸಿದ ಅನುಭವವಿತ್ತು. ಆ ಅನುಭವವನ್ನು ಉಪಯೋಗಿಸಿಕೊಂಡು

ಈಗಲೂ ಯುದ್ಧರಂಗದಲ್ಲಿ ನೊಂದವರಿಗೆ ಚಿಕಿತ್ಸೆ ಮಾಡಲು ಒಂದು ಚಿಕಿತ್ಸಾ ತಂಡವನ್ನು ಸಿದ್ಧಪಡಿಸಬೇಕೆಂದು ಯೋಚಿಸಿದರು. ಸ್ವಯಂ ಸೇವಕರಾಗಿ ಸೇರಬೇಕೆಂದು ಲಂಡನ್ನಿನಲ್ಲಿದ್ದ ಭಾರತೀಯರನ್ನು ಕೇಳಿ ಕೊಂಡರು. ಕೇಳಿದ ಕೂಡಲೇ ಎಂಬತ್ತು ಜನ ಸೇರಿದರು. ಗಾಂಧೀಜಿ ಅವರಿಗೆ ಸಮವಸ್ತ್ರಗಳನ್ನು ಕತ್ತರಿಸಿಕೊಡುವ ಕೆಲಸ ವಹಿಸಿದರು.

ಆಗಸ್ಟ್ ತಿಂಗಳು. ಮಳೆಗಾಲ. ಗಾಂಧೀಜಿಗೆ ವಿಪರೀತ ನೆಗಡಿ. ಒಂದು ದಿನ ಸಾಯಂಕಾಲ ಅವರು ಸಂಜೆ ಊಟಕ್ಕೆ ಕುಳಿತಿದ್ದಾರೆ. ಆಗ ಯಾರೋ ಗಾಂಧೀಜಿ ಇದ್ದ ಹಜಾರಕ್ಕೆ ಮೆಟ್ಟಲು ಹತ್ತಿ ಬರುತ್ತಿದ್ದ ಶಬ್ದವಾಯಿತು. ಬಂದವಳು ಒಬ್ಬ ಹೆಂಗಸು. ಕತ್ತರಿಸಿದ್ದ ಬಟ್ಟೆ ಗಳನ್ನು ಗಂಟು ಕಟ್ಟಿ ಒಬ್ಬ ಸೇವಕನ ಮೇಲೆ ಹೊರಿಸಿಕೊಂಡು ಬಂದಿ ದ್ದಳು ಆ ಹೆಂಗಸು. ಆಕೆಯಲ್ಲಿ ಪ್ರಾಚ್ಯಸೌಂದರ್ಯ ಎದ್ದು ಕಾಣು ತ್ತಿತ್ತು. ಬೆಲೆಯಾದ ಸೀರೆ ಉಟ್ಟಿದ್ದಳು. ಒಡವೆ ತೊಟ್ಟಿದ್ದಳು. ಆಕೆ ಶ್ರೀಮಂತ ಮನೆತನಕ್ಕೆ ಸೇರಿದ ಹೆಣ್ಣೆಂದು ಸ್ಪಷ್ಟವಾಗಿ ಕಾಣುತ್ತಿತ್ತು. ಗಾಂಧೀಜಿಯವರು ಹಡಗಿನಿಂದ ಇಳಿದಾಗಲೇ ನೋಡಬೇಕೆಂದು ಆಶಿಸಿ ದ್ದಳು ಆ ಹೆಂಗಸು. ಆದರೆ ಅದು ಸಾಧ್ಯವಾಗಿರಲಿಲ್ಲ. ಇಂದು ಕೆನ್ಸಿಂಗ್ ಟನ್ ಪಾರ್ಕಿನಲ್ಲಿ ಗಾಂಧೀಜಿ ಇಳಿದುಕೊಂಡಿದ್ದ ಮನೆಗಾಗಿ ಅರ್ಧ ಗಂಟೆ ತಡವರಿಸಿ ಕೊನೆಗೆ ಮನೆ ಸಿಕ್ಕು, ಮೆಟ್ಟಲೇರಿ ತನ್ನ ಮುಂದಿನ ಮಹಾ ಭಾಗ್ಯ ನನ್ನು ಕಾಣಲು ಬಂದಿದ್ದಳು. ಆಕೆಯೇ ಸರೋಜಿನಿದೇವಿ. ತಮ್ಮ ಈ ಪ್ರಥಮ ದರ್ಶನದ ಬಗ್ಗೆ ಸರೋಜಿನಿ ಈ ರೀತಿ ನುಡಿದಿದ್ದಾರೆ: "ಕೊಟ್ಟ ಕೊನೆಗೆ ಯಾವ ನಾಜೂಕೂ ಇಲ್ಲದ ಹಳೆಯ ಮನೆಯೊಂದು ಸಿಕ್ಕಿತು. ಮೇಲೇರಲು ಕಡಿದಾದ ಮೆಟ್ಟಲುಗಳು. ದಾರಿ ಕಾಣಿಸುವುದಕ್ಕೆ ಇದ್ದುದು ಒಂದೇ ಒಂದು ದೀಪ. ಕೊನೆಗೆ ತೆರೆದ ಬಾಗಿಲು ಸಿಕ್ಕಿತು. ಬಾಗಿಲೇ ಒಂದು ಚೌಕಟ್ಟಾದರೆ ಆ ಚೌಕಟ್ಟಿನೊಳಗೆ ಒಂದು ಜೀವಂತ ವ್ಯಕ್ತಿಯ ಚಿತ್ರವಿತ್ತು. ತಲೆ ಬೋಳಿಸಿಕೊಂಡ ಒಂದು ಪುಟ್ಟ ವ್ಯಕ್ತಿ ನೆಲದ ಮೇಲೆ ಹಾಸಿದ್ದ ಕರಿಯ ಕಂಬಳಿಯಮೇಲೆ ಕುಳಿತಿತ್ತು. ಟೊಮಾಟೋ ಹಣ್ಣನ್ನು ಆಲೀವ್ ಎಣ್ಣೆಯಲ್ಲಿ ಅದ್ದಿ ತಿನ್ನುತ್ತಿತ್ತು. ಆ ವ್ಯಕ್ತಿಯ ಸುತ್ತಮುತ್ತ ಹುರಿದ ಕಡಲೆಕಾಯಿಯನ್ನೂ ಒಣಗಿದ ಬಾಳೆಹಣ್ಣಿನಿಂದ ಮಾಡಿದ ಬಿಸ್ಕತ್ತುಗಳನ್ನೂ ತುಂಬಿದ ಹಳೆಯ ಡಬ್ಬಿಗಳಿದ್ದುವು."

ಈ ಸ್ಥಿತಿಯಲ್ಲಿ ಕಂಡರು ಸರೋಜಿನಿದೇವಿ ಯಾರನ್ನು ಅನಂತರ ತಂದೆಯೆಂದು ಕರೆದರೋ ಆ ಮಹಾತ್ಮನನ್ನು. ಶ್ರೀಮಂತಿಕೆಯ ಉಡುಪು ಧರಿಸಿ ಬಂದಿದ್ದ ಆಕೆ ಕರಿಯ ಕಂಬಳಿಯ ಮೇಲೆ ಕುಳಿತಿದ್ದ ಆ ವಕ್ರ ರೀತಿಯ ಉಡುಪಿನ ವ್ಯಕ್ತಿಯನ್ನು ನೋಡಿ ವಿನೋದಕ್ಕಾಗಿ ನಕ್ಕಳು. ಮೊದಲೇ ಹೇಳಿದ್ದರು ಗೋಖಲೆ 'ಗಾಂಧೀಜಿ ಮಣ್ಣಿನಲ್ಲಿ ಮಹಾಪುರುಷ ರನ್ನು ಮಾಡುವ ವ್ಯಕ್ತಿ' ಎಂದು. 'ಸ್ಮಟ್ಸನಂಥವನನ್ನೇ ಸೋಲಿಸಿದ ಮಹಾಧೀರ' ಎಂದು ಹೊಗಳಿದ್ದರು. ಆದರೆ ಆ ಪುಟ್ಟ ಶರೀರದ ವ್ಯಕ್ತಿ ಯನ್ನು ನೋಡಿದ ಸರೋಜಿನಿಗೆ ವೀರಪುರುಷನ ಲಕ್ಷಣಗಳಾಗಲೀ ಮಹಾ ವ್ಯಕ್ತಿತ್ವವಾಗಲೀ ಕಾಣಿಸಲಿಲ್ಲ.

ನಕ್ಕರೆ ಪ್ರತಿ ನಗಿಸುವ, ತಾವೂ ನಗುವ ವ್ಯಕ್ತಿ ಗಾಂಧೀಜಿ. ಅವರೂ ನಕ್ಕರು. ನಕ್ಕು, 'ಆಹಾ, ನೀವು ಸರೋಜಿನಿ ನಾಯಿಡು ಇರ ಬೇಕಲ್ಲವೆ? ಬನ್ನಿ ಊಟಮಾಡಿ' ಎಂದರು 'ಒಲ್ಲೆ, ಥ್ಯಾಂಕ್ಸ್' ಎಂದರು ಸರೋಜಿನಿ. ಗಾಂಧೀಜಿ ಪುನಃ ನಕ್ಕರು. ಹೊರಿಸಿಕೊಂಡು ಬಂದಿದ್ದ ಗಂಟನ್ನು ಸರೋಜಿನಿ ಕೆಳಗಿಡಿಸಿದರು. ಗಾಂಧೀಜಿ ತಮ್ಮ 'ಅವ್ಯವಸ್ಥೆ'ಯ ಊಟ ಮಾಡುತ್ತಲೇ ಇದ್ದರು. 'ಕತ್ತರಿಸಿಕೊಂಡು ಬಂದಿದ್ದೇನೆ. ಹೊಲಿಯುವ ಕೆಲಸವೊಂದೇ ಬಾಕಿ.' ಎಂದರು ಸರೋಜಿನಿ. 'ಹೊಲಿಸುವ ಕೆಲಸ ಮಾಡಿಸುತ್ತೇನೆ.' ಎಂದರು ಗಾಂಧೀಜಿ. ಅವರ ಮನಸ್ಸಿನಲ್ಲಿ ಬಟ್ಟೆ ಹೊಲಿಸುವ ಯೋಚನೆಯಲ್ಲದೆ ಬೇರೊಂದು ಯೋಚನೆ ಇದ್ದಂತೆ ಕಾಣಲಿಲ್ಲ. ತಮ್ಮ ವಿಚಿತ್ರ ಉಡುಪು, ಅವ್ಯವಸ್ಥೆಯ ಊಟ, ಸರೋಜಿನಿಯ ನಗು, ತಮ್ಮ ನೆಗಡಿ ಇವು ಯಾವೂ ಅವರಿಗೆ ಗಮನವಿದ್ದಂತೆ ಕಾಣಿಸಲಿಲ್ಲ.

ಮಾತನಾಡುತ್ತಾ ಆಡುತ್ತಾ ಸರೋಜಿನಿದೇವಿಗೆ ಆ ಮನುಷ್ಯನ ಬಗ್ಗೆ ಇದ್ದ ಮೊದಲ ಭಾವನೆ ಬದಲಾವಣೆಯಾಯಿತು. ಅವರು ಹೇಗಿದ್ದ ರೆನ್ನುವುದಕ್ಕಿಂತ ಅವರ ಅಂತರಾಳವೆಂತಿತ್ತು ಎಂಬುದೇ ಹೆಚ್ಚು ಗಮ ನಾರ್ಹವಾಯಿತು. ಆ ಮನುಷ್ಯನ ಅಂತರಾಳವನ್ನು ಹೊಕ್ಕು ನೋಡಿದ ಕವಿಗೆ ಮಹಾ ಮಾನವತ್ವದ ಅರಿವಾಯಿತು. ಆ ಅರಿವಾಯಿತೋ ಇಲ್ಲವೋ ಇಬ್ಬರಲ್ಲಿ ಎಂದಿಲ್ಲದ ಬಾಂಧವ್ಯ ಬೆಳೆಯಿತು. ಆ ಭೇಟಿ ಸರೋಜಿನಿ ದೇವಿಯ ಇಡೀ ಜೀವನವನ್ನೇ ಮಾರ್ಪಡಿಸಿತು. ಆ ಮಹಾತ್ಮನ ಸಹಪಾಠಿ ಯಾಗಿ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಹೋರಾಡಿ ಭಾರತದ ಬಂಧವಿಮೋಚನೆ

ಮಾಡಿದ ಮಹಾ ವ್ಯಕ್ತಿಗಳಲ್ಲಿ ಒಬ್ಬರಾಗುವ ಮಹಾ ಭಾಗ್ಯವೊದಗಿಸಿತು. ಅಂತೆಯೇ ಗಾಂಧೀಜೀಗೂ ಒಬ್ಬ 'ತಾಯಿ' ಸಿಕ್ಕಿದಳು. 'ಅಮ್ಮಾಜಾನ್' ದೊಡ್ಡಮ್ಮ ಎಂದು ಯಾರನ್ನು ಗಾಂಧೀಜಿ ಅನಂತರ ಸಂಬೋಧಿಸುತ್ತಿದ್ದರೋ ಅಂತಹ ತಾಯಿಯ ಮಡಿಲು ದೊರೆಯಿತು ಆ 'ಅನಾಥ'ನಿಗೆ.

ದಿನೇ ದಿನೇ ಭಾರತದಲ್ಲಿ ಖ್ಯಾತಿ ಪಡೆಯುತ್ತಿದ್ದ ಸರೋಜಿನಿಯನ್ನು, ಕವಿಯನ್ನು, ಗೌರವಿಸಲು ಇಂಗ್ಲೆಂಡಿನ ರಾಯಲ್ ಸೊಸೈಟಿ ಆಫ್ ಲಿಟರೇಚರ್ ಎಂಬ ಮಹಾ ಸಂಸ್ಥೆಯವರು ೧೯೧೪ರಲ್ಲಿ ಅವರನ್ನು ಲಂಡನ್ನಿಗೆ ಕರೆಸಿಕೊಂಡಿದ್ದರು. ಆಗಲೇ ಅವರು ಗಾಂಧೀಜಿಯುವರನ್ನು ಭೇಟಿ ಮಾಡಿದ್ದು. ಗೋಖಲೆಯವರನ್ನೂ ಅದೇ ಸಂದರ್ಭದಲ್ಲಿ ಭೇಟಿ ಮಾಡಬೇಕೆಂದು ಸರೋಜಿನಿ ಆಶಿಸಿದ್ದರು. ಇಂಗ್ಲೆಂಡಿನಲ್ಲಿ ನಡೆಯುತ್ತಿದ್ದ ಸ್ತ್ರೀ ಸ್ವಾತಂತ್ರ್ಯದ ಚಳುವಳಿಯಿಂದ ಭಾರತದ ಸ್ತ್ರೀಯರಿಗೂ ಏನಾದರು ಸಹಾಯವಾದೀತೋ ಎಂಬುದನ್ನು ಆಲೋಚಿಸಲು ಅವರು ಲಂಡನ್ನಿನಲ್ಲಿ ಹಲವು ಕಾಲ ತಂಗಿದ್ದರು. ಆದರೆ ಗೋಖಲೆಯವರು ಬರಲಿಲ್ಲ. ಈ ಮಧ್ಯೆ ಗಾಂಧೀಜೀಯವರ ಚಿಕಿತ್ಸಾತಂಡಕ್ಕೆ ಬೇಕಾದ ಸಮವಸ್ತ್ರಗಳನ್ನು ಕತ್ತರಿಸಿಕೊಡುವ ಕೆಲಸವನ್ನು ಕೈಗೆ ಹಚ್ಚಿಕೊಂಡು ಇಂದು ಆ ನೆಪದ ಮೇಲೆ ತಮ್ಮ ಭಾಗ್ಯವಿಧಾತನನ್ನು ಕಂಡರು. ಅಂದಿನಿಂದ ಸರೋಜಿನಿ ಮಾರ್ಪಾಟಾದ ವ್ಯಕ್ತಿಯಾದರು. ಅವರ ದಾರಿಯೇ ಬೇರೆಯಾಯಿತು.

ಈ ಪ್ರಥಮ ಭೇಟಿಯನಂತರವೂ ಸರೋಜಿನಿ ಗಾಂಧೀಜಿಯುವರನ್ನು ಆಗಾಗ್ಗೆ ಭೇಟಿ ಮಾಡುತ್ತಿದ್ದರು. ದಿನೇ ದಿನೇ ಅವರೀರ್ವರಿಗೂ ಹೆಚ್ಚಿನ ಬಾಂಧವ್ಯ ಬೆಳೆಯುತ್ತಾ ಬಂದಿತು. ಗಾಂಧೀಜಿ ಅನೇಕ ಮಹತ್ಕಾರ್ಯಗಳನ್ನು ಆಗಲೇ ಸಾಧಿಸಿದ್ದರು. ಆದರೆ ಅವನ್ನು ಹೇಳಿಕೊಂಡು ಜಂಭ ಕೊಚ್ಚಿಕೊಳ್ಳುವ ವ್ಯಕ್ತಿಯಾಗಿರಲಿಲ್ಲ ಗಾಂಧೀಜಿ. ಸಾಮಾನ್ಯ ಕೆಲಸಗಾರನು ತೊಡುವ ಶರಟು ಶರಾಯಿಗಳಲ್ಲೇ ಅವರು ಎಂತಹ ಕೋಟ್ಯಾಧೀಶ್ವರನನ್ನಾಗಲೀ, ಕೈಯಲ್ಲಿ ಕಾಸಿಲ್ಲದ ವಿದ್ಯಾರ್ಥಿಯನ್ನಾಗಲೀ, ಬಹು ಶಿಸ್ತಿನ ಬ್ರಿಟಿಷ್ ಅಧಿಕಾರಿಯನ್ನಾಗಲೀ ಅಥವಾ ಸಾಮಾನ್ಯ ಜನರನ್ನಾಗಲೀ ಕಾಣುತ್ತಿದ್ದರು. ಸರೋಜಿನಿಯೇ ಹೇಳಿದಂತೆ 'ಅವರ ಮನೆಗೆ ಎಲ್ಲಾ ರಾಷ್ಟ್ರಗಳ ಜನರು—ಅವರು ಪೂರ್ವದವರಾಗಲೀ, ಪಶ್ಚಿಮದವರಾಗಲೀ—ಬರುತ್ತಿದ್ದರು. ಅದೊಂದೇ ಸಾಕು ಅವರ ದೊಡ್ಡಸ್ತಿಕೆ ಭಾಷಾ

ಭೇದವನ್ನು ಮೀರಿದ್ದು, ಇಡೀ ಪ್ರಪಂಚದ ಗೌರವಕ್ಕೆ ಅರ್ಹವಾದದ್ದು ಎಂಬುದನ್ನು ಸಿದ್ಧಪಡಿಸುವುದಕ್ಕೆ.'

ಗೋಖಲೆಯವರು ಪ್ಯಾರಿಸ್ಸಿನಿಂದ ಲಂಡನ್ನಿಗೆ ಬರುವುದು ಸಾಧ್ಯವಾಗಲೇ ಇಲ್ಲ. ಅವರು ಅಲ್ಲಿಂದಲೇ ಭಾರತಕ್ಕೆ ಹಿಂದಿರುಗಿದರು. ಸರೋಜಿನಿಯೂ ಲಂಡನ್ನಿನಿಂದ ಭಾರತಕ್ಕೆ ಹಿಂದಿರುಗಿದರು. ತಮ್ಮ ನೆಗಡಿ ಉಲ್ಬಣಿಸಿದ್ದರಿಂದ ವೈದ್ಯರ ಸಲಹೆಯಂತೆ ಚಿಕಿತ್ಸಾತಂಡದ ಕೆಲಸವನ್ನು ಮುಂದುವರಿಸದೆ ಗಾಂಧೀಜಿಯವರೂ ಕಸ್ತೂರಿ ಬಾ ಸಮೇತ ಭಾರತಕ್ಕೆ ಬಂದರು. ಇಲ್ಲಿಯೇ ಗೋಖಲೆಯವರನ್ನು ಕಂಡು ಮಾತುಕತೆ ನಡಸಿದರು. ಸರೋಜಿನಿ ದೇವಿಯವರೂ ಆಗಾಗ್ಗೆ ಗಾಂಧೀಜಿಯವರನ್ನು ಕಾಣುತ್ತ ತಮ್ಮ ಸಂಪರ್ಕವನ್ನು ಹೆಚ್ಚಿಸಿಕೊಂಡರು. ತಾವು ಮಾಡುತ್ತಿದ್ದ ಕೆಲಸವನ್ನು ಗಾಂಧೀಜಿಯವರಿಗೂ ಕಸ್ತೂರಿ ಬಾ ಅವರಿಗೂ ತಿಳಿಸುತ್ತಿದ್ದರು.

ಶ್ರೀಮತಿ ಆನಿಬೆಸೆಂಟರು ತಮ್ಮ 'ನ್ಯೂ ಇಂಡಿಯಾ' ಎಂಬ ಪತ್ರಿಕೆಯಲ್ಲಿ ಬ್ರಿಟಿಷ್ ಸಾಮ್ರಾಜ್ಯದ ವಿರೋಧಿಗಳನ್ನು ಕಟುವಾಗಿ ಟೀಕಿಸುತ್ತಿದ್ದರು. ಸರೋಜಿನಿದೇವಿಯವರೂ ಹೆಚ್ಚು ಕಡಮೆ ಅದೇ ಧಾಟಿಯಲ್ಲಿ ಸಾರ್ವಜನಿಕ ವೇದಿಕೆಗಳ ಮೇಲೆ ನಿಂತು ಭಾಷಣಮಾಡುತ್ತಿದ್ದರು. ಇನ್ನೂ ಅವರಿಗೆ ಬ್ರಿಟಿಷರ ಮನೋಭಾವ ಗೊತ್ತಿರಲಿಲ್ಲ. ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸೂ ಸಹ ಯುದ್ಧ ನಡೆಯುವ ವೇಳೆಯಲ್ಲಿ ಯಾವ ಅಡ್ಡಿ ಆತಂಕಗಳನ್ನೂ ಒಡ್ಡದೆ ಯುದ್ಧಕ್ಕೆ ಸಹಾಯಕವಾಗಿರಬೇಕೆಂಬ ತೀರ್ಮಾನ ಕೈಕೊಂಡಿತ್ತು. ಯುದ್ಧಕ್ಕಾಗಿ ಹೈದರಾಬಾದಿನಲ್ಲಿ ಸರೋಜಿನಿಯವರು ಜನಗಳಿಂದ ಆಹಾರಧಾನ್ಯಗಳನ್ನು ಶೇಖರಿಸುವ ಕೆಲಸ ಇಟ್ಟುಕೊಂಡರು. ಜೊತೆಗೆ ಹಣವನ್ನೂ ಶೇಖರಿಸಿದರು. ಇವೆಲ್ಲ ಬ್ರಿಟಿಷ್ ಸಾಮ್ರಾಜ್ಯದ ಸಹಾಯಾರ್ಥವಾಗಿ. ಅವರಲ್ಲಿ ಇಟ್ಟಿದ್ದ ನಂಬಿಕೆ ವಿಶ್ವಾಸಕ್ಕಾಗಿ ಮುಂದೆ ನುಗ್ಗಿ ಕೆಲಸಮಾಡಿದರು.

# ೯. ತಂದೆ ತೀರಿಕೊಂಡರು

ಹೀಗಿರುವಾಗ, ೧೯೧೫ ನೇ ಜನವರಿ ೨೮ ನೇ ತಾರೀಖು ಸರೋಜಿನಿಯ ತಂದೆ ಅಘೋರನಾಥ ಚಟ್ಟೋಪಾಧ್ಯಾಯರು ತೀರಿಕೊಂಡರು. ಅವರು ತೀರಿಹೋದದ್ದು ಕಲ್ಕತ್ತೆಯಲ್ಲಿ. ಹೈದರಾಬಾದನ್ನು ಬಿಟ್ಟು ಅವರು ಕಲ್ಕತ್ತೆಗೆ ಹೋದ ಕೊನೆಯ ಕಥೆಯನ್ನು ಹರೀಂದ್ರನಾಥ ಚಟ್ಟೋಪಾಧ್ಯಾಯರು ಹೀಗೆ ವರ್ಣಿಸಿದ್ದಾರೆ :

" 'ತಂದೆಯು ನಕ್ಕರೆ ಹೋಮರನಂತೆ ನಗುತ್ತಿದ್ದರು. ನಕ್ಕರೆ ಮೇಲ್ಛಾವಣಿಯೇ ಎಲ್ಲಿ ಕುಸಿಯುವುದೋ ಎನ್ನುವಷ್ಟು ಗಟ್ಟಿಯಾಗಿ ನಗುತ್ತಿದ್ದರು' ಎಂದು ಸರೋಜಿನಿ ಹೇಳಿದ್ದಾಳೆ. ಆಹುದು. ಆದರೆ ಅವರ ಕರುಣೆ ಮೇಲ್ಛಾವಣಿಯನ್ನೇ ಮೇಲೆತ್ತಿ ದೀನ ದರಿದ್ರರಿಗೆ ಆಶ್ರಯ ನೀಡುವಷ್ಟು ದೊಡ್ಡದಾಗಿತ್ತು. ನಮ್ಮ ತಂದೆ ತಾಯಿಗಳಿಗೆ ಕೈಕಡಿಯುತ್ತಿತ್ತು. ಯಾವುದಕ್ಕೆ? ತೆಗೆದುಕೊಳ್ಳುವುದಕ್ಕಲ್ಲ, ಕೊಡುವುದಕ್ಕೆ 'ಕೊಡಿ ಕೊಡಿ, ಆದರೆ ತೆಗೆದುಕೊಳ್ಳಬೇಡಿ' ಎಂದು ತಮ್ಮ ಮಕ್ಕಳಿಗೆ ಎಷ್ಟು ಸಲ ಹೇಳಿದರೂ ಅವರಿಗೆ ಬೇಜಾರಾಗುತ್ತಿರಲಿಲ್ಲ. ಈ ಕಾರಣ ನಮ್ಮ ಮನೆಯ ಸ್ಥಿತಿಗತಿಗಳೇ ಬದಲಾಯಿಸಿದುವು. ಅಪಾರ ವೆಚ್ಚದ ಕಾರಣವಾಗಿ ದಿನಕ್ಕೆ ಒಂದು ಹೊತ್ತು ಊಟ ಸಿಗುವುದೂ ಕಷ್ಟವಾಯಿತು. ಆದರೆ ಅಡುಗೆಯಲ್ಲಿ ಸಿದ್ಧಹಸ್ತಳಾದ ನಮ್ಮ ತಾಯಿ ಯಾವಾವುದೋ ಸೊಪ್ಪು ಸೆದೆಗಳನ್ನು ತಂದು ರುಚಿರುಚಿಯಾದ ಭಕ್ಷ್ಯ ಭೋಜ್ಯಗಳನ್ನು ಮಾಡಿ ಬಡಿಸುತ್ತಿದ್ದಳು. ನಮ್ಮ ತಂದೆಯ ಬಗ್ಗೆ ಒಂದು ಕಥೆಯಿದೆ. ಒಂದು ದಿನ ಮನೆಯಲ್ಲಿ ಏನೇನೂ ಇರಲಿಲ್ಲ. ಮಕ್ಕಳೆಲ್ಲ ಊಟಮಾಡಿದಮೇಲೆ ತಂದೆ ಬಂದರು. ಬಂದವರು ಊಟದ ಕೋಣೆಗೆ ಹೋಗಿ 'ಮಾಣಿ, ಊಟ ತೆಗೆದುಕೊಂಡು ಬಾ" ಎಂದು ಕೂಗಿದರು. ಮಾಣಿ 'ಊಟವಿಲ್ಲ ಬುದ್ಧಿ' ಎಂದ. 'ಊಟವಿಲ್ಲ! ಒಳ್ಳೆಯದು.' ಎಂದು ಹೇಳಿ ತಂದೆ ತಮ್ಮ ಅಂಗಳದಲ್ಲಿದ್ದ ಆರಾಮಕುರ್ಚಿಯ ಮೇಲೆ ಕುಳಿತು ಅಲ್ಲಿ ನೆರೆದಿದ್ದ ಜನರೊಡನೆ ತತ್ವಶಾಸ್ತ್ರದಮೇಲೆ ಚರ್ಚೆ ಮಾಡತೊಡಗಿದರು.

" ನನಗಿನ್ನೂ ಹದಿನಾಲ್ಕು ವರುಷ ವಯಸ್ಸು. ನಮ್ಮ ಮನೆಯ

ಪರಿಸ್ಥಿತಿ ತೀರ ಬದಲಾಯಿಸುತ್ತಿತ್ತು. ಮೊದಲಿದ್ದ ಸುಖ ಜೀವನ ಈಗ ಕಾಣುತ್ತಿರಲಿಲ್ಲ. ಮನೆಯಲ್ಲಿದ್ದ ಕುರ್ಚಿ, ಮೇಜು, ಸೋಫಾಗಳು ಹರಾಜಿಗೆ ಲಾಯಖ್ಖಾಗಿದ್ದುವು ಅವುಗಳನ್ನು ಸರಿಯಾದ ಸ್ಥಿತಿಯಲ್ಲಿ ಇಟ್ಟುಕೊಳ್ಳಲೂ ದುಡ್ಡಿರಲಿಲ್ಲ ಬಡಬಗ್ಗರಿಗೆ, ಮನೆಗೆ ಬಂದವರಿಗೆ ಯಥೇಚ್ಛವಾಗಿ ಉಣಿಸಿ ತಿನಿಸಿದ್ದರಿಂದ ಸಾಲ ಬೆಳೆದುಬಂತು. ಸಾಲ ಕೊಟ್ಟವರು ಒತ್ತಾಯದಿಂದ ಕೇಳಲಾರಂಭಿಸಿದರು. ನಮ್ಮ ತಂದೆ ತಾಯಿಗಳು ತಮ್ಮ ಯೋಗ್ಯತೆ ಮೀರಿ ಖರ್ಚುಮಾಡಿದವರಲ್ಲ; ಅವರು ತಮ್ಮ ಕೈಮೀರಿ ಕೊಟ್ಟವರು. ಒಂದು ದಿನ ನಮ್ಮ ಮನೆಗೆ ಹಲವಾರು ಜನ ಬಂದರು. ಅವರ ಮುಖಗಳು ವಕ್ರವಾಗಿದ್ದುವು. ವರ್ತನೆ ಅಸಹ್ಯವಾಗಿತ್ತು. ನಮ್ಮ ಆಸ್ತಿಪಾಸ್ತಿಯನ್ನು ಜಪ್ತಿಮಾಡಲು ಅವರು ಬಂದಿದ್ದರು. ತಾಯಿ ಬಿಕ್ಕಿ ಬಿಕ್ಕಿ ಅಳಲಾರಂಭಿಸಿದಳು. ತಂದೆ ಎಂದಿನಂತೆ ಸ್ಥಿತಪ್ರಜ್ಞನಾಗಿ ತಮ್ಮ ಆರಾಮ ಕುರ್ಚಿಯಲ್ಲಿ ಕುಳಿತು ಹುಕ್ಕಾ ಸೇದುತ್ತಿದ್ದರು. ರೋಮ್‌ನಗರ ಉರಿಯುತ್ತಿರುವಾಗ ನೀರೋ ದೊರೆ ಪಿಟೀಲು ಬಾರಿಸುತ್ತಿದ್ದಂತೆ, ಮನೆ ಜಪ್ತಿಯಾಗುವಾಗ ನಮ್ಮ ತಂದೆ ಹುಕ್ಕಾ ಸೇದುತ್ತಿದ್ದರು. 'ಏನು ಬೇಕು ನಿಮಗೆ?' ಎಂದರು ತಂದೆ ಬಂದವರನ್ನು ಕುರಿತು. 'ನಿಮ್ಮ ಆಸ್ತಿಪಾಸ್ತಿಯನ್ನು ಜಪ್ತಿಮಾಡಲು ಬಂದಿದ್ದೇವೆ' ಎಂದರು ಅವರು. ಹಾಗೆ ಮಾಡುವುದಕ್ಕೆ ಯಾವ ಅಡ್ಡಿಯೂ ಇಲ್ಲವೆಂದರು ತಂದೆ. ತಾಯಿಯನ್ನು ಕುರಿತು 'ಇದೆಲ್ಲ ನಮ್ಮ ಮುಕ್ತಹಸ್ತದ ಅನಿವಾರ್ಯ ಪರಿಣಾಮ' ಎಂದು ಹೇಳಿದರು.

"ಬಂದಿದ್ದವರು ಸಸ್ಯಶಾಸ್ತ್ರ ಪರಿಶೋಧನೆಗಾಗಿ ತಂದೆಯವರು ಇಟ್ಟಿದ್ದ ಸಲಕರಣೆಗಳನ್ನು ಕೆಳಗೆಳೆದರು. ಅವು ಬಹುಶಃ ನಮ್ಮ ತಂದೆಯ ಬಹು ಅಮೂಲ್ಯ ಆಸ್ತಿಗಳು. ಮೇಜು, ಕುರ್ಚಿ, ಸೋಫಾಗಳನ್ನು ತೆಗೆದು ಒಂದು ಕಡೆ ಗುಡ್ಡೆ ಹಾಕಿದರು. ಸುಂದರವಾದ ಪರ್ಷಿಯನ್ ಜಮಖಾನಗಳನ್ನೂ ಸುತ್ತಿ ಹಾಕಿದರು. ಅನೇಕ ವರ್ಷಗಳಕಾಲ ಜಮಖಾನಗಳಿಂದ ಮುಚ್ಚಲ್ಪಟ್ಟಿದ್ದ ನೆಲ ಈಗ ಬರಿದಾಗಿ ಕಂಡಿತು. ಆ ದೃಶ್ಯ ವಿಧಿಯ ಲಿಖಿತದ ದೊಡ್ಡ ಸುರುಳಿಯನ್ನು ಸುತ್ತಿ ಬರೀ ನೆಲವನ್ನು ಪ್ರದರ್ಶಿಸಿದಂತಿತ್ತು. ತನ್ನ ನಗ್ನತೆಯನ್ನು ತೋರಿಸಿದರಲ್ಲಾ ಎಂದು ನೆಲವೂ ನಾಚಿದಂತಿತ್ತು. ಒಂದಾದ ಮೇಲೊಂದರಂತೆ ನಮ್ಮ ನೆಚ್ಚಿನ ಗೆಳೆಯರಾದ ಕುರ್ಚಿ, ಮೇಜು,

ಪುಸ್ತಕ ಕಪಾಟು, ಪುಸ್ತಕ, ಕನ್ನಡಿ, ಸಿಹಿತಿಂಡಿ ಡಬ್ಬಿ, ಅಲಂಕಾರದಕುಂಡ ಇತ್ಯಾದಿ ಬೆಲೆಯಾದ ವಸ್ತುಗಳು ನಮಗೆ ನಮಸ್ಕಾರ ಹೇಳಿ ಹೋಗುತ್ತಿರುವಂತೆ ಭಾಸವಾಯಿತು.

"ತಾಯಿಯ ದುಃಖ ಹೇಳತೀರದು. ಅತ್ತೂ ಅತ್ತೂ ಕಣ್ಣಲ್ಲಿ ನೀರೇ ಇಲ್ಲದಂತಾಯಿತು. ಆದರೆ ತಂದೆ ಮಾತ್ರ ಜಪ್ತಿ ಮಾಡಲು ಬಂದವರೊಡನೆ ಲೀಲಾಜಾಲವಾಗಿ ಮಾತನಾಡುತ್ತ ತಮ್ಮ ಹುಕ್ಕ ಸೇದುತ್ತ ಕುಳಿತರು. 'ಪಾಪ, ಅವರು ತಮ್ಮ ಕರ್ತವ್ಯ ಮಾಡುತ್ತಿದ್ದಾರೆ' ಎಂಬುದೇ ಅವರ ಸಮಾಧಾನ.

"ಆದರೆ ಒಂದು ಪವಾಡ ನಡೆಯಿತು: ಶವಸಂಸ್ಕಾರಕ್ಕೆ ಸಿದ್ಧವಾಗಿದ್ದ ಮನೆಯಲ್ಲಿ ಮದುವೆಯ ಉತ್ಸವದ ಆನಂದ ಮೂಡಿದಂತಾಯಿತು. ಹೈದರಾಬಾದು ನಗರದಲ್ಲಿ ಮಿಠಾಯಿಮಾರುವವನೊಬ್ಬನಿದ್ದ. ಅವನ ಹೆಸರು ರಾಮನಾಥನೆಂದು. ಮೇಲೆ ಹೇಳಿದ ದಿನಕ್ಕೆ ಸ್ವಲ್ಪ ಕಾಲದ ಕೆಳಗೆ ಅವನನ್ನು ತಂದೆ ಬ್ರಹ್ಮಸಮಾಜಕ್ಕೆ ಸೇರಿಸಿದ್ದರು. ಅವನು ತಂದೆಯವರನ್ನು ದೇವರಂತೆ ಭಾವಿಸುತ್ತಿದ್ದ. ಅವನೊಬ್ಬನೇ ಅಲ್ಲ ತಂದೆಯವರನ್ನು ಆ ಭಾವನೆಯಿಂದ ಕಾಣುತ್ತಿದ್ದವನು. ಅನೇಕರು ಆ ರೀತಿ ಭಾವಿಸಿದ್ದರು. ರಾಮನಾಥ ಪ್ರತಿವಾರ ನಮಗೆಲ್ಲ ರುಚಿರುಚಿಯಾದ ಸಿಹಿ ತಿಂಡಿ ತಂದು ಕೊಡುತ್ತಿದ್ದ. ಅವನನ್ನು ನೆನೆದುಕೊಂಡರು ತಂದೆ ತಮ್ಮ ಕಷ್ಟಕಾಲದಲ್ಲಿ. ಕೂಡಲೇ ಬಂದ ರಾಮನಾಥ 'ಏನಿದು!' ಎಂದು ಕೇಳಿದ. 'ಇದೇನು ತಮಾಷೆ!' ಎಂದು ಆಶ್ಚರ್ಯಪಟ್ಟ. ನಿಜವಾದ ಸ್ಥಿತಿಯನ್ನು ಕಂಡು ಜಪ್ತಿಮಾಡಲು ಬಂದವರ ಕಡೆ ಧಾವಿಸಿ 'ಏನು! ಡಾ॰ ಅಘೋರನಾಥರ ಆಸ್ತಿಯನ್ನು ಜಪ್ತಿಮಾಡಲು ಬಂದಿರುವಿರಾ ನೀವು!' ಎಂದು ಕಿರಿಚಿದ. ತಂದೆ ಅವನನ್ನು ಅಪ್ಪಿಕೊಂಡು ಸಿಟ್ಟಾಗಬೇಡವೆಂದರು. 'ನಿಮ್ಮ ಸಾಲವೆಷ್ಟು?' ಎಂದು ಕೇಳಿದ ರಾಮನಾಥ ಸಾಲಗಾರರನ್ನು ಕುರಿತು. ಅದು ಐದು ಅಂಕಿಗಳನ್ನು ಮೀರಿತ್ತು. 'ನಿಧಾನಮಾಡಿ, ನಾನು ಊರೊಳಗೆ ಹೋಗಿ ಬರುವವರೆಗೆ' ಎಂದು ಹೇಳಿ ಎಲ್ಲಿಯೋ ಹೋದವನು ಒಂದರಗಳಿಗೆಯಲ್ಲಿ ಹಿಂದಿರುಗಿ ಬಂದ. 'ತೆಗೆದುಕೊಳ್ಳಿ ಇದನ್ನು. ಹೊರಟುಹೋಗಿ. ನಿಮಗೆ ಗೊತ್ತಿಲ್ಲ ನೀವು ಇಂದು ಯಾರ ಮರ್ಯಾದೆ ಕಳೆದಿರುವಿರೆಂದು. ಇದಕ್ಕೆ ನೀವು ಅಳಬೇಕಾಗುವುದು' ಎಂದು ಹೇಳಿ ದುಡ್ಡನ್ನು ಪೂರ್ತಿಯಾಗಿ

ಕೊಟ್ಟುಬಿಟ್ಟ. ಸಾಲಗಾರರು ಹೊರಟುಹೋದರು. ರಾಮನಾಥ ತಂದೆಗೆ ಅಡ್ಡಬಿದ್ದು ಕೇಳಿಕೊಂಡ ತನ್ನನ್ನು ಆಶೀರ್ವದಿಸಿ ಎಂದು. ನಾವೆಲ್ಲ ಸಿಡಿಲು ಬಡಿದಷ್ಟು ಅಚ್ಚರಿಗೊಂಡೆವು. ಆನಂದಕ್ಕೆ ಮೇರೆ ಇಲ್ಲವಾಯಿತು. ತಾಯಿ ಬಿಕ್ಕಿ ಬಿಕ್ಕಿ ಅತ್ತಳು—ಆನಂದದಲ್ಲಿ. ಆಕೆಗೆ ಆದ ಆನಂದವನ್ನು ತಡೆಯಲಾಗಲಿಲ್ಲ. ಹೀಗೆ ದುಃಖದಿಂದ ಪ್ರಾರಂಭವಾದ ಪ್ರಸಂಗ ಕೃತಜ್ಞತೆಯ ಕಣ್ಣೀರಿನಲ್ಲಿ ಮುಗಿಯಿತು."

ಸುಮಾರು ಮೂವತ್ತು ವರ್ಷಗಳ ಕಾಲ ಹೈದರಾಬಾದಿಗೆ ಹೆಸರಾದ ಅಘೋರನಾಥರ ಮನೆ ಮುರಿಯಿತು. ಅಘೋರನಾಥರು ತಮ್ಮ ಪತ್ನಿ ಸಮೇತ ಕಲ್ಕತ್ತೆಗೆ ಹೋದರು. ಅಲ್ಲಿಗೆ ಹೋದವರು ಸಿಟಿ ಕಾಲೇಜಿನಲ್ಲಿ ರಸಾಯನ ಶಾಸ್ತ್ರದ ಅಧ್ಯಾಪಕರಾದರು. ಅವರು ೧೯೧೫ರಲ್ಲಿ ತೀರಿಕೊಳ್ಳುವವರೆಗೂ ಅದೇ ವೃತ್ತಿಯಲ್ಲಿದ್ದರು. ಅವರು ಹೈದರಾಬಾದಿಗೆ ಹೋಗುವ ಬದಲು ಮೊದಲಿನಿಂದ ಬಂಗಾಳದಲ್ಲಿಯೇ ಇದ್ದಿದ್ದರೆ ಅವರಿಗೆ ಯಾವ ಗೌರವ ಸಲ್ಲುತ್ತಿತ್ತೋ ಹೇಳಲು ಸಾಧ್ಯವಿಲ್ಲ. ಆದರೆ ಅವರ ಮಹತ್ವವೇನು ಎಂಬುದನ್ನು ಅವರ ಸಮಕಾಲೀನರೂ ಬಂಗಾಳದ ಸುಪ್ರಸಿದ್ಧ ವಿಜ್ಞಾನಿಯೂ ಆದ ಪಿ. ಸಿ. ರೇ ಅವರು ಒಮ್ಮೆ ಅಂದರೆ ಅಘೋರನಾಥರು ಇನ್ನೂ ಹೈದರಾಬಾದಿನಲ್ಲಿಯೇ ಇದ್ದಾಗ ಮಗ ಹರೀಂದ್ರನಾಥ ಚಟ್ಟೋಪಾಧ್ಯಾಯರೊಡನೆ ಹೇಳಿದರಂತೆ: "ಅಘೋರನಾಥರು ನಮ್ಮ ಅತ್ಯಂತ ಪ್ರತಿಭಾನ್ವಿತ ವ್ಯಕ್ತಿಗಳಲ್ಲೊಬ್ಬರು ಬಂಗಾಳ ಪ್ರಪಂಚಕ್ಕೆ ಇತ್ತ ಉನ್ನತೋನ್ನತ ವ್ಯಕ್ತಿಗಳಲ್ಲೊಬ್ಬರು. ಆದರೆ ಅವರು ಯೂರೋಪಿನಿಂದ ಹಿಂದಿರುಗಿದವರು ನೇರವಾಗಿ ಬಂಗಾಳಕ್ಕೆ ಬರಬೇಕಾಗಿತ್ತು. ಅದರ ಬದಲು ಅವರು ನೈಜಾಮರ ರಾಜ್ಯದಲ್ಲಿ ನೆಲಸಿದರು. ಆದರೆ ಅಲ್ಲಿ ಅವರಿಗೆ ಬಂಗಾಳದಲ್ಲಿ ದೊರೆಯಬಹುದಾಗಿದ್ದ ಗೌರವ ದೊರೆಯಲಿಲ್ಲ. ಅಂತೂ ಅವರು ಮಹಾ ವಿಜ್ಞಾನಿ; ನಮ್ಮ ಮಹೋನ್ನತ ವಿಜ್ಞಾನಿಗಳಲ್ಲೊಬ್ಬರು."

೧೯೩೯ ರಲ್ಲಿ ರವೀಂದ್ರನಾಥ ಠಾಕೂರರು ಹರೀಂದ್ರನಾಥರನ್ನು ಕುರಿತು "ನಾನು ಬರೆದಿರುವ 'ಹಸಿದ ಕಲ್ಲುಗಳು' (Hungry Stones) ಎಂಬ ಕಥೆಯಲ್ಲಿ ನಿಮ್ಮ ತಂದೆಯನ್ನು ವರ್ಣಿಸಿರುವುದು ಗೊತ್ತೇ?" ಎಂದು ಕೇಳಿದರಂತೆ.

ಇಂತಹ ಮಹಾ ವ್ಯಕ್ತಿ ಅಘೋರನಾಥರು. ಅವರು ತಮ್ಮ ಇಚ್ಛೆ

ಯಂತೆ ಸತ್ತರೆಂದು ಹರೀಂದ್ರನಾಥರು ಹೇಳಿದ್ದಾರೆ. ಒಂದು ದಿನ ಅವರು ಹೈದರಾಬಾದಿನಲ್ಲಿ ಮೊದಲಿಗೆ ಅಕೌಂಟೆಂಟ್ ಜನರಲ್ ಆಗಿದ್ದ ನಂದಲಾಲ್ ಸೀಲರೊಡನೆ ಮಾತನಾಡುತ್ತಿದ್ದರು. ಆಗ ಇನ್ನೂ ಅನೇಕ ಜನ ರಿದ್ದರು. ಮಾತು ಜನನ ಮರಣದ ಕಡೆಗೆ ಹೊರಳಿತು. ಅವೆರಡೂ ಒಂದೇ ಎಂದರು ಅಘೋರನಾಥರು. 'ಹಾಗಿದ್ದರೆ ಸಾಯಬಾರದೇಕೆ?' ಎಂದು ಕೇಳಿದರು ಸೀಲರು. ಅದಕ್ಕೆ ಅಘೋರನಾಥರು 'ಓಹೋ, ನಾನು ಬೇಕೆಂದರೆ ಈಗಲೇ ಸಾಯಬಲ್ಲೆ' ಎಂದರು. ಎಲ್ಲರೂ ನಕ್ಕು ಮನೆಗೆ ಹೊರಟು ಹೋದರು. ಇಪ್ಪತ್ತು ನಿಮಿಷಗಳ ನಂತರ ಹೋಗಿ ನೋಡಿದರೆ ಅಘೋರನಾಥರು ತಮ್ಮ ಕೋಣೆಯಲ್ಲಿ ಸತ್ತು ಮಲಗಿದ್ದರು! ತಮ್ಮ ಮೆಚ್ಚಿನ ಗಂಡ ಸತ್ತ ಯೋಚನೆಯಲ್ಲಿ ಒಂದೇ ರಾತ್ರಿಗೆ ಅಲ್ಲಿಯವರೆಗೂ ಕಪ್ಪಗಿದ್ದ ವರದಸುಂದರಿದೇವಿಯ ಕೂದಲು ಬೆಳ್ಳಗಾಗಿತ್ತಂತೆ. ಇದನ್ನು ಹರೀಂದ್ರನಾಥ ಚಟ್ಟೋಪಾಧ್ಯಾಯ ತಮ್ಮ ಆತ್ಮ ಕಥೆಯಲ್ಲಿ ಹೇಳಿದ್ದಾರೆ.

ತಂದೆಯನ್ನು ಕಳೆದುಕೊಂಡ ಸರೋಜಿನಿ ಕವನರೂಪದಲ್ಲಿ ತಮ್ಮ ಅಂತ್ಯ ಪ್ರಣಾಮಗಳನ್ನು ಅರ್ಪಿಸಿದರು:

'ಹೋಗಿ ಬಾ! ಹೋಗಿ ಬಾ! ಓ ಕೆಚ್ಚೆದೆಯ ಕನಿಕರದ ಋಷಿಯೇ! ಹೋಗಿ ಬಾ ಓ ರಹಸ್ಯ ವಿದೂಷಕ, ಹೇಮ-ಹೃದಯ ಬಾಲಕ! ದುಃಖ, ದುರಾಶೆ, ರೋಷಗಳ ಕ್ಷುದ್ರಪಾಶಗಳಿಂದ ಮುಕ್ತ ನೀನು. ಸ್ವಾರ್ಥ, ಉದ್ವೇಗ, ಕ್ಷುಬ್ಧ, ಭ್ರಮಗಳಿಂದ ರಿಕ್ತ ನೀನು.. ಕನಸು ಕಾಣದ ಯುಗದಲ್ಲಿ ಹೊಂಗನಸು ಕಂಡ ಶಕ್ತಿ ನೀನು. ಕಾಲದ ಚಂಚಲ ಸಂದೇಶದೊಡನೆ ಬೆರಸಿ ನಿನ್ನ ವೈದಿಕಶ್ರೀಯ ಸ್ವಚ್ಛ ಶಾಂತ ವಿವೇಕವನು ಹರ್ಷಿಸಿದ ರಸತಂತ್ರ ದರ್ಶಿ ನೀನು.

'ಹೋಗಿ ಬಾ ಮಹಾತ್ಮಾ, ದಿಗಿಲು ದೋಷಗಳಿಲ್ಲದೆ. ಪ್ರೇಮವೇ ನಿನ್ನ ಜೀವನ, ಸ್ವಾತಂತ್ರ್ಯವೇ ನಿನ್ನ ಧರ್ಮ, ಸತ್ಯವೇ ನಿನ್ನ ಶುದ್ಧ ಶಾಶ್ವತ ಗುರಿ. ಸಕಲ ಜಯಮಕ್ಕೆ ನೆಚ್ಚಿಕೆಯಿಂ ನೆಚ್ಚಿಕೆಗೇರುವಿಕೆಗೆ, ಶಿಖರದಿಂ ಸ್ವರ್ಗಶಿಖರಕ್ಕೇರುವ ವಿಶ್ವಾತೀತ ಆರೋಹಣಕ್ಕೆ, ವಿಶ್ವಾತ್ಮದಾನಂದದಲಿ ವಿಹರಿಸುವ ಶಾಶ್ವತ ಸುಖಕ್ಕೆ!

ಹೆತ್ತ ತಂದೆ ಅಘೋರನಾಥರು ತೀರಿಕೊಂಡಮೇಲೆ ಹೊತ್ತ ತಂದೆ ಗೋಖಲೆಯವರೂ ತೀರಿಕೊಂಡರು. ಸರೋಜಿನಿದೇವಿ ನಿಜವಾಗಿಯೂ

ಅನಾಥೆಯಾದರು. ಅವರ ದುಃಖ ನಿರ್ಭರವಾಯಿತು. ಆದರೆ ಎಂತಹ ದುಃಖವನ್ನಾದರೂ ಸೈರಿಸಿಕೊಳ್ಳುವ ಹೃದಯ ಅವರದು. ಅಷ್ಟು ಸ್ಥೈರ್ಯ ಅವರಿಗೆ. ಸೈರಿಸಿಕೊಂಡರು. ಆ ಕಷ್ಟಕಾಲದಲ್ಲಿ ಗಾಂಧೀಜಿ ಹೆತ್ತತಂದೆ ಹೊತ್ತತಂದೆಗಿಂತಲೂ ಹೆಚ್ಚಾದರು. ಅಂದಿನಿಂದ ಸರೋಜಿನಿಯ ಊರು ಹೈದರಾಬಾದಷ್ಟೇ ಅಲ್ಲ, ಇಡೀ ಭಾರತವೇ ಅವರ ಊರಾಯಿತು. ಗಂಡನ ಸೇವೆ, ಮಕ್ಕಳ ಲಾಲನೆ ಪಾಲನೆಯಷ್ಟೇ ಅಲ್ಲ ಅವರ ಗುರಿ, ಇಡೀ ದೇಶದ ಜನತೆಯ ಸೇವೆಯೇ ಅವರ ಗುರಿಯಾಯಿತು. ತಮ್ಮ ಹೆಂಡತಿಯು ಕೇವಲ ಪ್ರತಿಭಾನ್ವಿತಳಷ್ಟೇ ಅಲ್ಲ, ಹುಚ್ಚೆದ್ದ ಪ್ರತಿಭಾನ್ವಿತಳೆಂದು (erratic genius) ಗೊತ್ತಾದಾಗ ಡಾ. ಗೋವಿಂದರಾಜುಲುನಾಯುಡು ಪತ್ನಿಯ ಆಸೆಗೆ, ಆ ಪ್ರತಿಭಾ ಪ್ರದರ್ಶನಕ್ಕೆ ಅಡ್ಡಿ ಬರಲಿಲ್ಲ. ಅವರು ಕೇವಲ ತಮ್ಮ ಪತ್ನಿಯಾದ ಸ್ತ್ರೀಯಲ್ಲ, ಭಾರತದ ಬಂಧವಿಮೋಚನೆಗೆ ಸೃಷ್ಟಿಸಲ್ಪಟ್ಟ ಸಿಂಹಿಣಿ ಎಂಬುದರ ಅರಿವಾಯಿತು. ಪತ್ನಿಯನ್ನು ಹರಸಿ ಕಳುಹಿಸಿದರು. ಆದರೆ ಕೊನೆಯವರೆಗೂ ಅವರು ಪತಿಯನ್ನಾಗಲೀ ಪತಿಯ ಮನೆಯನ್ನಾಗಲೀ ಮರೆಯಲಿಲ್ಲ. ಮನೆಯೆಂದರೆ ಆಕೆಗೆ ಪಂಚಪ್ರಾಣ. ಪತಿಯೆಂದರೂ ಅಷ್ಟೆ. ಭಾರತದ ಸ್ವಾತಂತ್ರ್ಯ ಹೋರಾಟದಲ್ಲಿ ಸತ್ತುಸುಣ್ಣವಾದಾಗ ಅವರು ಓಡಿ ಬಂದು 'ಚಿನ್ನದ ಹೊಸ್ತಿಲ'ನ್ನು ದಾಟಿ ಪತಿಯ ಸಾನಿಧ್ಯದಲ್ಲಿ ಶಾಂತಿಯನ್ನು ಪಡೆಯುತ್ತಿದ್ದರು. ೧೯೩೭ ರಲ್ಲಿ ಜವಾಹರ್‌ಲಾಲ್ ನೆಹರೂ ಅವರಿಗೆ ಬರೆದ ಪತ್ರವೊಂದರಲ್ಲಿ ತಮ್ಮ ಮನಸ್ಸನ್ನು ಈ ರೀತಿ ಹೊರಪಡಿಸಿದರು :

"ನನ್ನ ಪ್ರೀತಿಯ ಜವಾಹರ್,

ನಾನು ಚಿನ್ನದ ಹೊಸ್ತಿಲಿನಿಂದ ಬರೆಯುತ್ತಿದ್ದೇನೆ. ನನ್ನದೇ ಆದ ಕರೀಮರದ ಆರಾಮ ಸೋಫಾದಲ್ಲಿ ಕುಳಿತಿದ್ದೇನೆ. ನನ್ನ ಸುತ್ತ ರಸ್ ತಫಾರಿ, ಪ್ರೋವೋ ನೌರ್ಮ್ಕಿ, ನಿಕೊಲೋ ಪಿಸ್ಸಾನೋ ಮತ್ತು ಡಿಕ್ ಡಿಕ್ ಮಹ್‌ಜಾಂಸ್ ಎಂಬ ಹೆಸರಿನ ನನ್ನ ಮನೆಯ ಚತುಷ್ಪಾದಿ ದೊರೆಗಳು ವೈಭವದಿಂದ ಮೆರೆಯುತ್ತಿದ್ದಾರೆ ಉಜ್ವಲ ವರ್ಣದ ಗುಲ್‌ಮೊಹರ್ ಮತ್ತು ಕೆಂಪುಗುಳುವ ಗುಲಾಬಿ ಹೂಗಳ ಮಧ್ಯೆ ಹಕ್ಕಿಗಳು ಉಲಿಯುತ್ತಿವೆ. ಪದ್ಮಜಳು ಬೊಂಬಾಯಿನಿಂದ ಈಗ ತಾನೆ ಬಂದ ಫಿಯಟ್ ಕಾರಿನಲ್ಲಿ ತಲ್ಲೀನಳಾಗಿದ್ದಾಳೆ. ಮಧ್ಯಾ

ಹ್ನದ ಊಟ ಮಾಡುತ್ತ ಗೋವಿಂದನು ನಾವು ಯೋಚಿಸಿರುವ ವಿಹಾರಕ್ಕೆ ನೈಜಾಮರಿಂದ ಅಡ್ಡಿ ಬರದಿದ್ದರೆ ಸಾಕೆಂದು ದೇವರನ್ನು ಪ್ರಾರ್ಥಿಸುತ್ತಿದ್ದಾನೆ.

"ಒಂದು ಮಾತಿನಲ್ಲಿ ಹೇಳುವುದಾದರೆ, ನಾನು ೧೯೨೧ ರಿಂದ ಈಚೆಗೆ ಇದೇ ಮೊದಲನೆಯ ಸಲ ನನ್ನ ಮನೆಯಲ್ಲಿ ಆರಾಮವಾಗಿ ರುವುದು. ನನಗೆ ನಿಜವಾಗಿಯೂ ಬಿಡುವು ಸಿಕ್ಕಿದೆ. ಹೊರಗಿನ ಯೋಚನೆಗಳ ಸರ್ಪಗಳಿಂದ ನಾನು ನಿಜವಾಗಿಯೂ ದೂರವಾಗಿ ದ್ದೇನೆ. ನನ್ನ ಕರ್ತವ್ಯವನ್ನು ತೊರೆದು ಕೆಲವು ವಾರಗಳ ಕಾಲ ಇಲ್ಲಿಗೆ 'ಬಂದಿದ್ದೇನೆ ನಿಜ. ಇದು ತುಚ್ಛವಾದ ವರ್ತನೆಯಾದರೂ ಧೈರ್ಯಮಾಡಿ ಬಂದಿದ್ದೇನೆ. ಏಕೆಂದರೆ ನನ್ನಾತ್ಮ ಇಲ್ಲಿಯ ಸುತ್ತ ಮುತ್ತಣ ಸೌಂದರ್ಯಕ್ಕೆ, ಚಿಗುರುವ ಮರಗಳಿಗೆ, ಗೂಡು ಕಟ್ಟುವ ಹಕ್ಕಿಗಳಿಗೆ, ಭಾವಗೀತೆಯ ಕವಿಗಳಿಗೆ, ಮಕ್ಕಳಿಗೆ, ನಾಯಿಗಳಿಗೆ, ಹಳೆಯ ಗೆಳೆಯರಿಗೆ ಬೇಡುತ್ತಿತ್ತು. ರಚನಾತ್ಮಕ ಕಾರ್ಯಕ್ರಮ ದಿಂದ, ರಾಜಕೀಯ ಎಂದು ಕರೆಯಲ್ಪಡುತ್ತಿರುವ ಆತ್ಮವಿನಾಶಕ ಕಾರ್ಯಕ್ರಮದಿಂದ ನನಗೆ ಸ್ವಲ್ಪ ಬಿಡುವು ಬೇಕಿತ್ತು. ಮರೆತ ಕರ್ತವ್ಯಕ್ಕೆ ಮತ್ತು ಹೊಣೆಗೆ ನಾನು ಸಕಾಲದಲ್ಲಿ ಹಿಂದಿರುಗುವೆನು. ಆದರೆ ಈ ಮಧ್ಯೆ ನೀನೇಕೆ ಇಲ್ಲಿಗೆ ಬಂದು ಈ ಆನಂದವನ್ನು ಅನು ಭವಿಸಬಾರದು? ಹೈದರಾಬಾದಿನಲ್ಲಿರುವ ಮೀರ್ ಆಲಮ್ ಸರೋವ ರದಮೇಲೆ ದೋಣಿಯ ವಿಹಾರ, ಅದರ ಸುತ್ತಮುತ್ತ ಅಲೆದಾಟ, ಭಾರತದಲ್ಲಿಯೇ ಸಿಕ್ಕಲಾರದ ನಿಜವಾದ ವಿಶ್ವಭ್ರಾತೃಭಾವನೆಯ ಸಮಾಜದೊಡನೆ ಸಮ್ಮಿಳನ—ಇವುಗಳನ್ನು ನೀನು ನಿಜವಾಗಿಯೂ ಆನಂದಿಸುವೆ. ಈ ಚಿನ್ನದ ಹೊಸ್ತಿಲನ್ನು ಸಮಾಜದ ಸರ್ವಶ್ರೇಷ್ಠ ವ್ಯಕ್ತಿಗಳು ನಾಲ್ಕು ತಲೆಮಾರಿನಿಂದಲೂ ದಾಟಿದ್ದಾರೆ. ನನ್ನ ತಂದೆ ತಾಯಿಗಳಿಂದ ಪ್ರಾರಂಭವಾದ ಆ ತಲೆಮಾರು ಈಗ ಇಲ್ಲಿ ಕುಳಿತು ತಾಯಿಬೆಕ್ಕಿನೊಡನೆ ಚಕ್ಕಂದವಾಡುತ್ತಿರುವ ಬೆಕ್ಕಿನ ಮರಿಯ ವರೆಗೆ ನಡೆದುಕೊಂಡು ಬಂದಿದೆ. ನೀನೂ ಮುಷ್ಕರ ಹೂಡಿ ಇಲ್ಲಿಗೆ ಬಂದು ಏಕೆ ಮರೆಯಾಗಬಾರದು?

ನಿನ್ನ ಪ್ರೀತಿಯ ಸಹೋದರಿ,

ಸರೋಜಿನಿ."

## ೧೦. ಸರೋಜಿನಿಯಲ್ಲ, ಭಾರತದ ವೀರ ನಾರಿ

೧೯೧೪ ರಲ್ಲಿ ಪ್ರಾರಂಭವಾದ ಮೊದಲನೇ ಮಹಾ ಯುದ್ಧ ನಡೆಯುತ್ತಲೇ ಇತ್ತು. ಬ್ರಿಟಿಷರು ಭಾರತದಿಂದ ಹೇರಳವಾಗಿ ಹಣವನ್ನೂ ದವಸ ದಾನ್ಯಗಳನ್ನೂ ತೆಗೆದುಕೊಂಡು ಹೋದರು. ಸರೋಜಿನಿದೇವಿಯಂತಹ ದೇಶದ ಮುಖಂಡರು ಯುದ್ಧಕ್ಕೆ ಸಹಾಯ ಮಾಡುವುದರಲ್ಲಿ ಮುಂದಾದರು. ಕಷ್ಟದಲ್ಲಿ ಸಿಲುಕಿರುವವರಿಗೆ ಸಹಾಯ ಮಾಡಬೇಕೆಂಬ ಕರ್ತವ್ಯ ಭಾವನೆ ಅವರಲ್ಲಿ ಬಂದಿತ್ತು. ಅಲ್ಲದೆ ಅನಂತರ ಅವರಲ್ಲಿ ಮೂಡಿದ ಬ್ರಿಟಿಷರ ಮೇಲಿನ ವಿರೋಧ ಭಾವನೆ ಆಗ್ಗೆ ಬಂದಿರಲಿಲ್ಲ. ಬ್ರಿಟಿಷರು ಪರಕೀಯರಲ್ಲ, ನಮ್ಮವರೇ ಎಂಬ ಭಾವನೆಯೇ ಅವರಲ್ಲಿ ಇದ್ದದ್ದು.

ಲಂಡನ್ನಿನಿಂದ ಭಾರತಕ್ಕೆ ಬಂದ ಗಾಂಧೀಜಿಯವರು ಗೋಖಲೆಯವರು ಕಾಲವಾದನಂತರ ಸಬರ್ಮತಿ ಎಂಬ ಊರಿನಲ್ಲಿ ಆಶ್ರಮವನ್ನು ಸ್ಥಾಪಿಸಿ ಅಲ್ಲಿಂದ ತಮ್ಮ ಕಾರ್ಯಕ್ಷೇತ್ರವನ್ನು ವಿಸ್ತರಿಸಿದರು. ಮೊದ ಮೊದಲು ಅವರು ಭಾರತದ ಸಮಸ್ಯೆಗಳಲ್ಲಿ ಹೆಚ್ಚು ಕೈಹಾಕುತ್ತಿರಲಿಲ್ಲ. ದಕ್ಷಿಣ ಆಫ್ರಿಕಾದ ಪ್ರಶ್ನೆಯಲ್ಲಿಯೇ ಅವರು ತಲ್ಲೀನರಾಗಿದ್ದರು. ಆದರೆ ಭಾರತದ ಸಮಸ್ಯೆಗಳಿಂದ ದೂರವಿರುವುದು ಸಾಧ್ಯವಾಗಲಿಲ್ಲ. ಗೋಖಲೆಯವರಂತಹ ಮುಂದಾಳು ತೀರಿಕೊಂಡ ಮೇಲೆ ದೇಶಕ್ಕೆ ಒಬ್ಬ ಮುಖಂಡ ಬೇಕಾಗಿತ್ತು. ಗಾಂಧೀಜಿಯಲ್ಲಿ ಅಂತಹ ಮುಖಂಡತ್ವ ವಹಿಸುವ ಅರ್ಹತೆಯಿತ್ತು. ಆ ವ್ಯಕ್ತಿಗೆ ಮಾರು ಹೋಗಿದ್ದ ಸರೋಜಿನಿ ಗಂಡನೊಡನೆ ಹೈದರಾಬಾದಿನಲ್ಲಿದ್ದರೂ ಆಗಾಗ್ಗೆ ಗಾಂಧೀಜಿಯನ್ನು ಕಂಡು ಅವರ ಕೆಲಸಕ್ಕೆ ಧನ ಸಹಾಯಗಳನ್ನು ಒದಗಿಸುತ್ತಿದ್ದರು. ಗಾಂಧೀಜಿ ಮಾಡುತ್ತಿದ್ದ ಕೆಲಸಗಳ ಬಗ್ಗೆ ತಮ್ಮ ಸ್ನೇಹಿತರಲ್ಲಿ, ಸಣ್ಣ ಪುಟ್ಟ ಮುಖಂಡರುಗಳಲ್ಲಿ ಪ್ರಚಾರ ಮಾಡುತ್ತಿದ್ದರು. ಕವಿಯಾದರೂ ಸರೋಜಿನಿ ದೇಶದಲ್ಲಿ ಏನಾದರೂ ಅನ್ಯಾಯವಾದರೆ ನೋಡಿಕೊಂಡು ಸುಮ್ಮನೆ ಕುಳಿತುಕೊಳ್ಳುವ ವ್ಯಕ್ತಿಯಾಗಿರಲಿಲ್ಲ. ೧೯೧೯ ರಲ್ಲಿ ಬ್ರಿಟಿಷರು ಆರ್ಮ್ಸ್ ಆಕ್ಟ್ (Arms Act) ಎಂಬ ಕಾನೂನನ್ನು ಜಾರಿಗೆ ತಂದರು. ಈ ಕಾನೂನಿನ ಪ್ರಕಾರ ಯಾವ ಭಾರತೀಯನೂ ಬಂದೂಕ ಮುಂತಾದ ಆಯುಧಗಳನ್ನು ಹೊಂದುವಂತಿರಲಿಲ್ಲ.

ಕಾನೂನನ್ನು ಸರೋಜಿನಿ ತೀವ್ರವಾಗಿ ವಿರೋಧಿಸಿದರು. ಅದೇ ವರ್ಷ ಲಕ್ನೌ ನಗರದಲ್ಲಿ ಕಾಂಗ್ರೆಸ್ ಅಧಿವೇಶನ ನಡೆಯಿತು. ಆಗಿನ ಕಾಂಗ್ರೆಸ್ ಅಧಿವೇಶನವೆಂದರೆ ಅರ್ಜಿದಾರರ ಕೂಟವಾಗಿತ್ತು. ಅಲ್ಲಿ ಸರ್ಕಾರವನ್ನು ಪ್ರಾರ್ಥಿಸುವ, ಬೇಡಿಕೊಳ್ಳುವ ಠರಾವುಗಳಾಗುತ್ತಿದ್ದುವು. ಗೌರ್ನರುಗಳಾದಿಯಾಗಿ ಸಭೆಗೆ ಬರುತ್ತಿದ್ದರು. ಈ ಅಧಿವೇಶನದಲ್ಲಿ ಆರ್ಮ್ಸ್ ಆಕ್ಟಿನ ಮೇಲೆ ಒಂದು ಠರಾವನ್ನು ಮಂಡಿಸಬೇಕೆಂಬ ತೀರ್ಮಾನವಾಗಿತ್ತು. ವೇದಿಕೆಯ ಮೇಲೆ ಹಲವಾರು ಜನ ಭಾಷಣಕಾರರು ಮಂಡಿಸಿದ್ದರು. ಅವರಲ್ಲಿ ಒಬ್ಬರೇ ಒಬ್ಬರು ಮಹಿಳೆ ಇದ್ದರು. ಅವರೇ ಸರೋಜಿನಿ. ಠರಾವನ್ನು ಸಭೆಯ ಮುಂದೆ ಅವರೇ ಮಂಡಿಸಬೇಕೆಂದು ಅಧ್ಯಕ್ಷರು ಹೇಳಿದ್ದರು, ಏಕೆಂದರೆ ಆ ಕೆಲಸಮಾಡಲು ಅವರಿಗಿಂತ ಹೆಚ್ಚು ಶಕ್ತರು ಬೇರೆ ಇಲ್ಲವೆಂದು ಎಲ್ಲರ ಅಭಿಪ್ರಾಯವಾಗಿತ್ತು. ಠರಾವನ್ನು ಮಂಡಿಸುವುದಕ್ಕೆ ಇನ್ನೂ ಎಷ್ಟೋ ಹೊತ್ತಿತ್ತು. ಆಗ ಸಂಯುಕ್ತ ಪ್ರಾಂತಗಳ (ಈಗಿನ ಉತ್ತರ ಪ್ರದೇಶದ) ಗೌರ್ನರ್ ಮತ್ತು ಅವರ ಪತ್ನಿ ಸಭೆಗೆ ಬಂದರು. ಅವರು ಬಂದುದನ್ನು ನೋಡಿ ಅಧ್ಯಕ್ಷರು ಠರಾವನ್ನು ಮಂಡಿಸಬೇಕೆಂದು ಸರೋಜಿನಿಯನ್ನು ಕೇಳಿಕೊಂಡರು. ಅಧ್ಯಕ್ಷರ ಅಪ್ಪಣೆಯಂತೆ ಸರೋಜಿನಿ ಎದ್ದು ನಿಂತು ಸಭೆಯನ್ನು ಒಮ್ಮೆ ಅವಲೋಕಿಸಿ ತಮ್ಮ ಭಾಷಣವನ್ನು ಹೀಗೆ ಪ್ರಾರಂಭಿಸಿದರು: "ಅಧ್ಯಕ್ಷರೆ, ಸಭಾಸದಸ್ಯರೆ, ಪುರುಷರೇ ತುಂಬಿರುವ ಈ ಸಭೆಯಲ್ಲಿ ಆರ್ಮ್ಸ್ ಆಕ್ಟನ್ನು ವಿರೋಧಿಸುವ ಕೆಲಸ ಭಾರತದ ಸ್ತ್ರೀಯ ಪಾಲಿಗೆ ಬೀಳಬೇಕೆ?" ಹೀಗೆ ಪ್ರಾರಂಭವಾದ ಭಾಷಣ ಅರ್ಧ ಗಂಟೆ ನಡೆಯಿತು. ಗೌರ್ನರ್ ಮತ್ತು ಅವರ ಪತ್ನಿ ಸಭೆಯಲ್ಲಿದ್ದುದು ಅವರ ಭಾಷಣಕ್ಕೆ ಪುಟ ಹಾಕಿದಂತಾಯಿತು. ಆರ್ಮ್ಸ್ ಆಕ್ಟನ್ನು ತೀವ್ರವಾಗಿ ವಿರೋಧಿಸಿ ಭಾಷಣ ಮಾಡಿದರು. ಇಡೀ ಸಭೆ ಏಕ ಕಂಠದಿಂದ ಸರೋಜಿನಿಯ ವಾದವನ್ನು ಪುಷ್ಟೀಕರಿಸಿತು. ಭಾಷಣವನ್ನು ಕೇಳಿದ ಗೌರ್ನರೂ ಅವರ ಪತ್ನಿಯವರೂ ಬೆಚ್ಚಿಬೆರಗಾದರು. ಅಂತಹ ಭಾಷಣವನ್ನು ಅವರೆಂದೂ ಕೇಳಿರಲಿಲ್ಲ. ಸಭೆಯನ್ನು ಬಿಟ್ಟು ಹೊರಡುವಾಗ ಸರೋಜಿನಿಯ ಬಳಿಗೆ ಬಂದು ತಮ್ಮ ಮನೆಗೆ ಭೋಜನಕ್ಕೆ ಬರಬೇಕೆಂದು ಆಹ್ವಾನವಿತ್ತು ಹೋದರು.

ಇದೇ ಕಾಲದಲ್ಲಿ ಸರೋಜಿನಿದೇವಿ ಅಲಹಾಬಾದಿನಲ್ಲಿ ಭಾಷಣ ಮಾಡಿದರು. ಮೊಟ್ಟಮೊದಲಿಗೆ ಜವಾಹರ್‌ಲಾಲ್ ನೆಹರೂ ಸರೋಜಿನಿಯ

ಭಾಷಣ ಕೇಳಿದರು. ಅದು ತಮ್ಮ ಮೇಲೆ ಯಾವ ಪರಿಣಾಮವನ್ನುಂಟು ಮಾಡಿತೆಂಬುದನ್ನು ಅವರು ತಮ್ಮ ಆತ್ಮ ಚರಿತ್ರೆಯಲ್ಲಿ ಹೇಳಿಕೊಂಡಿದ್ದಾರೆ: 'ರ್೧೯ ರಲ್ಲಿ ನಡೆದ ಲಕ್ನೌ ಕಾಂಗ್ರೆಸ್ ಅಧಿವೇಶನದನಂತರ ಅಲಹಾಬಾದಿನಲ್ಲಿ ಸರೋಜಿನಿ ನಾಯಿಡು ಅನೇಕ ಭಾಷಣಗಳನ್ನು ಮಾಡಿದರು. ವಾಗ್ವೈಖರಿಯಿಂದ ಕೂಡಿದ ಆ ಭಾಷಣಗಳು ನನ್ನ ಮೇಲೆ ಮಹತ್ಪರಿಣಾಮವನ್ನುಂಟು ಮಾಡಿದುದು ಈಗಲೂ ನನಗೆ ಚೆನ್ನಾಗಿ ಜ್ಞಾಪಕವಿದೆ. ಆ ಭಾಷಣಗಳಲ್ಲಿ ರಾಷ್ಟ್ರೀಯತೆ ಹಾಗೂ ದೇಶಭಕ್ತಿ ತುಂಬಿತುಳುಕುತ್ತಿದ್ದವು.'

ಬಹುಶಃ ೧೯೧೬ ರಲ್ಲಿಯೇ ನೆಹರೂ ಮತ್ತು ಸರೋಜಿನಿಯ ಪ್ರಥಮ ಭೇಟಿಯಾಗಿರಬೇಕು. ಆದರೆ ನೆಹರೂ ಆಗಿನ್ನೂ ಚಿಕ್ಕವರು. ವಯಸ್ಸಿನಲ್ಲಿಯೂ ದೇಶದಲ್ಲಿದ್ದ ಅವರಿಗಿದ್ದ ಸ್ಥಾನಮಾನದಲ್ಲಿಯೂ ಅವರು ಸರೋಜಿನಿಗಿಂತ ಎಷ್ಟೋ ಚಿಕ್ಕವರು. ನೆಹರೂ ಗಾಂಧೀಜಿಯನ್ನು ಮೊದಲು ಕಂಡಿದ್ದೂ ಲಕ್ನೌ ಕಾಂಗ್ರೆಸ್ ಅಧಿವೇಶನದಲ್ಲಿಯೇ. ಅವರು ಆಗಿನ್ನೂ ಯುವಕ ಲಾಯರು. ಆದರೆ ಸರೋಜಿನಿ ಭಾರತದಲ್ಲೇ ಏಕೆ ಇಂಗ್ಲೆಂಡ್ ಮುಂತಾದ ಪಾಶ್ಚಾತ್ಯ ದೇಶಗಳಲ್ಲಿಯೂ ಹೆಸರಾಗಿದ್ದ ವ್ಯಕ್ತಿ. ಸರೋಜಿನಿ ನೆಹರೂಗೆ ಅಕ್ಕನಂತಿದ್ದರು. ಅದೇ ಭಾವನೆ ಮತ್ತು ಗೌರವವನ್ನು ನೆಹರೂ ಸರೋಜಿನಿಗೆ ತೋರಿಸುತ್ತಿದ್ದರು. ಸರೋಜಿನಿ ನೆಹರೂಗೆ ಕಾಗದ ಬರೆದರೆ ತಮ್ಮನಿಗೆ ಬರೆದಂತೆ ಬರೆಯುತ್ತಿದ್ದರು. ಕಾಗದದಲ್ಲಿ ಆತ್ಮೀಯತೆ ಎದ್ದು ಕಾಣುತ್ತಿತ್ತು. ೧೯೧೭ ರಲ್ಲಿ ಸರೋಜಿನಿ ಬರೆದ ಒಂದು ಕಾಗದ ಅದನ್ನು ಎತ್ತಿ ತೋರಿಸುತ್ತದೆ. ಕಾಗದದ ಕೊನೆಯಲ್ಲಿ ಸರೋಜಿನಿ ಆಗ ಹುಟ್ಟಿದ್ದ ನೆಹರೂರವರ ಪುತ್ರಿ ಇಂದಿರಾಗಾಂಧಿಯನ್ನು ಭಾರತದ ಹೊಸ ಹಾಡೆಂದು ಕರೆದು ಆಶೀರ್ವದಿಸಿದ್ದಾರೆ. ಕಾಗದದ ಮೂಲ ಪ್ರತಿಯನ್ನು ಎದುರು ಪುಟದಲ್ಲಿ ಓದಬಹುದು.

೧೯೧೭ ರಲ್ಲಿ ನಡೆದ ಕಾಂಗ್ರೆಸ್ ಅಧಿವೇಶನಕ್ಕೆ ಅನಿಬೆಸೆಂಟರು ಅಧ್ಯಕ್ಷರಾದರು. ಅದೇ ಮೊದಲನೆಯ ಸಲ ಸ್ತ್ರೀಯೊಬ್ಬಳು ಕಾಂಗ್ರೆಸ್ಸಿನ ಅಧ್ಯಕ್ಷಪೀಠವನ್ನು ಅಲಂಕರಿಸಿದ್ದು. ಈ ಅಧಿವೇಶನಕ್ಕೆ ಹೋಗಿದ್ದ ಸರೋಜಿನಿ ಸ್ತ್ರೀಯರ ಪಾತ್ರವನ್ನು ಕುರಿತು ಹಾಗೂ ತಮ್ಮ ಧೋರಣೆಯನ್ನು ಕುರಿತು ಮಾಡಿದ ಭಾಷಣ ಅಪೂರ್ವವಾಗಿತ್ತು. " ನಾನು ಕೇವಲ ಹೆಂಗಸು.

ಆದರೂ ಇಷ್ಟು ಹೇಳಬಯಸುತ್ತೇನೆ: ಕೊನೆಯ ಕಾಲ ಬಂದಾಗ, ಕತ್ತಲೆಯಲ್ಲಿ ಪತ್ತು ಹಿಡಿಯುವವರು ಬೇಕಾದಾಗ, ನಿಮ್ಮ ಧ್ವಜಪತಾಕೆಗಳನ್ನು ಹಿಡಿಯಲು ಜನರು ಇಲ್ಲದಿದ್ದಾಗ, ನೀವು ನಂಬಿಕೆಯನ್ನು ನೀಗಿಕೊಂಡು ಸತ್ತಾಗ ಭಾರತದ ಸ್ತ್ರೀ ಧ್ವಜಪತಾಕೆಗಳನ್ನು ಹೊತ್ತು ನಿಮಗೆ ಚೇತನವನ್ನು ನೀಡುತ್ತ ನಿಮ್ಮ ಸಂಗಡ ಇರುವರೆಂದು ತಿಳಿಯಿರಿ. ನೀವು ಸತ್ತುಹೋದಲ್ಲಿ ಚಿತ್ತೂರಿನ ಪದ್ಮಿನಿಯ ಆತ್ಮ ಭಾರತದ ಪೌರುಷತ್ವದ ಗುಡಿಯಲ್ಲಿ ಸಂಸ್ಥಾಪಿತವಾಗಿದೆಯೆಂದು ಜ್ಞಾಪಕದಲ್ಲಿಡಿ." ಎಂತಹ ಕೆಚ್ಚೆದೆಯ ಮಾತುಗಳು! 'ಕೆಚ್ಚಿಲ್ಲದ ಪೆಚ್ಚೆದೆಗಳಲ್ಲಿ ಕಿಚ್ಚಿಡುವ' ಮಾತುಗಳು!! ಇವು ಕೇವಲ ಆವೇಶದ ಮಾತುಗಳಾಗಿರಲಿಲ್ಲ. ಈ ಮಾತುಗಳನ್ನು ಸರೋಜಿನಿ ಅನಂತರ ನಡೆದ ಸ್ವಾತಂತ್ರ್ಯ ಸಮರದಲ್ಲಿ ಸಾರ್ಥಕಮಾಡಿಕೊಟ್ಟರು.

ಮೇಲೆ ಹೇಳಿದ ಕಾಂಗ್ರೆಸ್ ಅಧಿವೇಶನ ನಡೆದ ಸ್ಥಳದಲ್ಲಿಯೇ ಮುಸ್ಲಿಂ ಲೀಗ್ ಅಧಿವೇಶನವೂ ನಡೆಯಿತು. ಹಿಂದೂಮುಸ್ಲಿಮರ ಬಂಧುವಂತಿದ್ದ ಸರೋಜಿನಿ ಅಲ್ಲಿಯೂ ಭಾಷಣಮಾಡಿದರು. ಮುಹಮ್ಮದ್‌ಆಲಿ ಮತ್ತು ಶೌಕತ್‌ಆಲಿ ಸಹೋದರರುಗಳ ಬಿಡುಗಡೆಯ ಬಗ್ಗೆ ಹುರುಪಿನಿಂದ ಮಾತನಾಡಿದರು. ಹಿಂದೂ ಮುಸಲ್ಮಾನರ ಐಕ್ಯತೆಯ ಬಗ್ಗೆ ಸರೋಜಿನಿ ದೇವಿಗಿಂತ ಹೆಚ್ಚಾಗಿ ಯಾರೂ ದುಡಿದಿರಲಾರರು. ದೇಶದ ಎಲ್ಲ ನಾಯಕರು ಅದನ್ನು ಒಪ್ಪಿದ್ದಾರೆ. ಅವರಲ್ಲಿ ಮುಸಲ್ಮಾನರು ಬೇರೆ ಹಿಂದೂಗಳು ಬೇರೆ ಎಂಬ ಭಾವನೆ ಬರಲೇ ಇಲ್ಲ. ಬಾಲ್ಯತನದಿಂದಲೂ ಅವರಲ್ಲಿ ಆ ಭಾವನೆ ಬೆಳೆದು ಬಂದಿತು. ಅದಕ್ಕೆ ಅವರು ಹುಟ್ಟಿ ಬೆಳೆದ ಸನ್ನಿವೇಶವೇ ಕಾರಣವಾಗಿತ್ತು. ಆದಕಾರಣ ಎಡೆಬಿಡದೆ ಹಿಂದೂ ಮುಸ್ಲಿಂ ಐಕ್ಯತೆಗೆ ದುಡಿದರು. " ಈ ವಿಶಾಲ ಭಾರತದಲ್ಲಿ ಮುಸಲ್ಮಾನರು ಮನೆ ಮಾಡಿಕೊಂಡು ವಾಸಿಸಲು ಬಂದಿದ್ದಾರೆಯೇ ವಿನಃ ಈ ದೇಶವನ್ನು ಲೂಟಿಮಾಡಿಕೊಂಡು ತಮ್ಮ ದೇಶಕ್ಕೆ ಹಿಂದಿರಗಲು ಬಂದಿಲ್ಲ" ಎಂದು ಹೇಳುತ್ತಿದ್ದರು.

ಸರೋಜಿನಿಯ ಕೀರ್ತಿ ದೇಶದಲ್ಲೆಲ್ಲಾ ದಿನೇ ದಿನೇ ಹಬ್ಬುತ್ತಿತ್ತು. ೧೯೧೮ ರಲ್ಲಿ ಮದ್ರಾಸು ಪ್ರಾಂತ ಸಮ್ಮೇಳನ ನಡೆಯಿತು. ಸರೋಜಿನಿಗೆ ಈ ಸಮ್ಮೇಳನದ ಅಧ್ಯಕ್ಷತೆ ವಹಿಸಬೇಕಾದ ಜವಾಬ್ದಾರಿ ಒದಗಿತು. ಕಾಂಗ್ರೆಸ್ ಇತಿಹಾಸದಲ್ಲಿಯೇ ಇಂತಹ ಕೋಲಾಹಲ ಸಮ್ಮೇಳನ ನಡೆದಿರಲಿಲ್ಲವೆಂದು ಹೇಳುತ್ತಾರೆ. ಆದರೂ ಸರೋಜಿನಿ ಈ ಸಮ್ಮೇಳನವನ್ನು ನಡೆ

ಸಿದ ರೀತಿ ಯಾರಾದರು ಮೆಚ್ಚುವಂತಹುದಾಗಿತ್ತು. ಬರೆದ ಭಾಷಣ ಓದುವುದು ಅನೇಕರ ಸಾಮಾನ್ಯ ಪದ್ಧತಿ. ಆದರೆ ಸರೋಜಿನಿ ನಿಂತ ಹಾಗೆಯೇ ಹೊರಸೂಸಿಬಿಟ್ಟರು. ಇದೇ ಭಾಷಣದಲ್ಲಿಯೇ ಅವರು ಕವಿತಾಪ್ರಪಂಚದಿಂದ ರಾಜಕೀಯ ಪ್ರಪಂಚಕ್ಕೇಕೆ ಇಳಿದರೆಂಬುದನ್ನು ವಿವರಿಸಿದ್ದು.

೧೯೧೮ ರಲ್ಲಿ ಮೊದಲನೇ ಮಹಾಯುದ್ಧ ಮುಗಿಯಿತು. ಜರ್ಮನಿ ಶರಣಾಗತವಾಯಿತು. ಬ್ರಿಟಿಷರು ಗೆದ್ದರು. ಭಾರತ ಬ್ರಿಟಿಷರಿಗೆ ಅಪಾರ ವಾಗಿ ಸಹಾಯಮಾಡಿತ್ತು. ಇದರ ಪ್ರತಿಫಲವಾಗಿ ಭಾರತಕ್ಕೆ ಡೊಮಿನಿ ಯನ್ ಸ್ಟೇಟಸ್ ಅಂದರೆ ಬ್ರಿಟಿಷ್ ಚಕ್ರಾಧಿಪತ್ಯದಲ್ಲಿದ್ದುಕೊಂಡು ಸ್ವತಂತ್ರವಾಗಿ ಆಡಳಿತ ನಡಸಿಕೊಳ್ಳುವ ಹಕ್ಕನ್ನು ಕೊಡುವುದಾಗಿ ಬ್ರಿಟಿ ಷರು ವಾಗ್ದಾನ ಮಾಡಿದ್ದರು. ಆದರೆ ಯುದ್ಧ ಮುಗಿದ ಮೇಲೆ ಈ ವಾಗ್ದಾನವೆಲ್ಲ ಗಾಳಿಗೆ ಹಾರಿಹೋಯಿತು. ಅವರ ಮಾತು ನೀರಮೇಲಣ ಗುಳ್ಳೆಯಾಯಿತು. ಇದನ್ನು ನೋಡಿ ನಿರಾಶೆಗೊಂಡ ಭಾರತ ಬೊಬ್ಬೆ ಹಾಕಲಾರಂಭಿಸಿತು. ದೇಶದ ಬಾಯಿ ಮುಚ್ಚಲು ರೌಲಟ್ ಆಕ್ಟ್ ಎಂಬ ದಬ್ಬಾಳಿಕೆಯ ಶಾಸನವನ್ನು ೧೯೧೯ ರಲ್ಲಿ ಜಾರಿಗೆ ತಂದರು. ಸರೋಜಿನಿ ದೇವಿ, ಸರ್ದಾರ್ ವಲ್ಲಭಭಾಯಿ ಪಟೇಲ್ ಮುಂತಾದ ಮುಖಂಡರು ಗಾಂಧೀಜಿಯವರೊಡನೆ ಕಲೆತು ಮಾತನಾಡಿ ಶಾಸನವನ್ನು ವಿರೋಧಿಸಲು ಸತ್ಯಾಗ್ರಹ ಹೂಡಬೇಕೆಂಬ ತೀರ್ಮಾನ ಕೈಕೊಂಡರು. ಗಾಂಧೀಜಿಯವ ರೊಡನೆ ಸರೋಜಿನಿಯವರೂ ಇಡೀ ಭಾರತದಲ್ಲಿ ಪ್ರವಾಸ ಕೈಕೊಂಡರು. ಜನರನ್ನು ಕುರಿತು "ಬ್ರಿಟಿಷರ ಒಂದೂವರೆ ಶತಮಾನದ ಆಳ್ವಿಕೆಯಿಂದ ಭಾರತ ಕಂಗಾಲಾಗಿದೆ. ಎಲ್ಲೆಲ್ಲೂ ಬಡತನ. ಬಹು ಜನರಿಗೆ ತಿನ್ನಲು ಅನ್ನವಿಲ್ಲ. ಉಡಲು ಬಟ್ಟೆಯಿಲ್ಲ. ನೂರಕ್ಕೆ ತೊಂಬತ್ತೈದು ಜನಕ್ಕೆ ಓದು ಬರಹ ಬರುವುದಿಲ್ಲ. ಇದನ್ನು ನೋಡಿಯೂ ನೀವು ಸುಮ್ಮನಿರುವುದೇಕೆ?" ಎಂದು ಹುರಿದುಂಬಿಸಿದರು. ಅವರಿಗೆ ಬ್ರಿಟಿಷರಲ್ಲಿ ಮೊದಲಿದ್ದ ನಂಬಿಕೆ ಕಳೆದುಹೋಗಿತ್ತು. ಅದರಿಂದಲೇ ಅವರ ಮಾತಿನಲ್ಲಿ ಹೊಸ ಧಾಟಿ ಕಾಣುತ್ತಿತ್ತು. ಈ ರೀತಿ ಜನಗಳನ್ನು ಹುರಿದುಂಬಿಸುತ್ತಿದ್ದ ಸರೋಜಿನಿ ಯನ್ನು ಕಂಡು ಸರ್ಕಾರಕ್ಕೆ ಹೆದರಿಕೆಯಾಯಿತು. ಹೇಗಾದರೂ ಮಾಡಿ ಅವರನ್ನು ತಮ್ಮ ಕಡೆಗೆ ಒಲಿಸಿಕೊಳ್ಳಬೇಕೆಂದು ಪ್ರಯತ್ನ ಮಾಡಿತು.

ಬಹು ದೊಡ್ಡ ಬಿರುದುಗಳನ್ನೂ ದೊಡ್ಡ ಹುದ್ದೆಯನ್ನೂ ಕೊಡುವುದಾಗಿ ಆಸೆ ತೋರಿಸಿತು. ಆದರೆ ಸರೋಜಿನಿ ಆ ಆಸೆಗೆ ಬಲಿಯಾಗುವ ವ್ಯಕ್ತಿಯಾಗಿರ ಲಿಲ್ಲ. ಇಂಥದೇ ಆಸೆಯನ್ನು ಸರ್ಕಾರದವರು ಅನಂತರ ನೆಹರು ಅವರಿಗೂ ತೋರಿಸಿದ್ದರು. ಅಲಹಾಬಾದಿನ ಹೈಕೋರ್ಟು ನ್ಯಾಯಾಧೀಶರೊಬ್ಬರು ನೆಹರು ಅವರು ರಾಜಕೀಯ ಬಿಡುವುದಾದರೆ ದೊಡ್ಡ ಹುದ್ದೆ ಕೊಡುವು ದಾಗಿ ಹೇಳಿಕಳುಹಿಸಿದ್ದರಂತೆ. ಹಾಗೇನಾದರೂ ನೆಹರು ಒಪ್ಪಿದ್ದರೆ ಭಾರತದ ಇತಿಹಾಸ ಯಾವ ರೀತಿಯಾಗುತ್ತಿತ್ತೊ!

ರೌಲಟ್ ಕಾಯದೆಯನ್ನು ವಿರೋಧಿಸುವ ಚಳುವಳಿ ಜೋರಾಯಿತು. ಸರೋಜಿನಿ ಸ್ತ್ರೀಯರನ್ನು ಹುರಿದುಂಬಿಸಿದರು. ಇಡೀ ಮುಂಬೈ ಪಟ್ಟಣ ಹರತಾಳವನ್ನಾಚರಿಸಿತು. ಅದನ್ನು ಗಾಂಧೀಜಿಯವರು ಹೀಗೆ ವರ್ಣಿಸಿ ದ್ದಾರೆ: "ಆರನೆಯ ತಾರೀಕು ಬೆಳಗ್ಗೆ ಮುಂಬಯಿಯ ಸಾವಿರಾರು ಪುರ ಜನರು ಚೌಪಾತಿಯಲ್ಲಿ ಸಮುದ್ರಸ್ನಾನಕ್ಕಾಗಿ ನೆರೆದರು. ಸಮುದ್ರದಲ್ಲಿ ಮಿಂದ ಬಳಿಕ ಅವರು ಒಟ್ಟುಗೂಡಿ ಠಾಕುರ ದ್ವಾರದ ಕಡೆಗೆ ಮೆರವಣಿಗೆ ಹೊರಟರು. ಮೆರವಣಿಗೆಯಲ್ಲಿ ಹೆಂಗಸರೂ ಮಕ್ಕಳೂ ಇದ್ದರು. ಅನೇಕ ಮುಸಲ್ಮಾನರೂ ಸೇರಿದ್ದರು. ಮುಸಲ್ಮಾನ ಮಿತ್ರರು ಮೆರವಣಿಗೆಯಲ್ಲಿದ್ದ ಕೆಲವರನ್ನು ಠಾಕುರದ್ವಾರದಿಂದ ಹತ್ತಿರದಲ್ಲಿಯೇ ಇದ್ದ ಮಸೀದಿಗೆ ಕರೆದು ಕೊಂಡು ಹೋದರು. ಅಲ್ಲಿ ಶ್ರೀಮತಿ ಸರೋಜಿನಿ ದೇವಿಯಿಂದಲೂ ನನ್ನಿಂದಲೂ ಭಾಷಣ ಕೊಡಿಸಿದರು."

ದೇಶದಲ್ಲೆಲ್ಲಾ ಕಾಳ್ಗಿಚ್ಚು ಹಬ್ಬಿದಂತೆ ಸತ್ಯಾಗ್ರಹ ಹಬ್ಬುವುದೆಂದು ಅರಿತ ಸರ್ಕಾರ ಗಾಂಧೀಜಿಯವರನ್ನು ದಸ್ತಗಿರಿ ಮಾಡಿತು. ಅಮೃತಸರ ದಲ್ಲಿ ಜನರಲ್ ಡೈಯರ್ ಎಂಬ ಅಧಿಕಾರಿ ತೋಟದಲ್ಲಿ ನೆರೆದಿದ್ದ ಇಪ್ಪತ್ತು ಸಹಸ್ರ ಜನರ ಗುಂಪಿನ ಮೇಲೆ ಸೈನ್ಯವನ್ನು ನುಗ್ಗಿಸಿದನು. ಅಶಕ್ತ ಜನ ದಿಕ್ಕೆಟ್ಟು ಓಡಲು ಯತ್ನಿಸಿದರು. ಆದರೆ ಹೊರಗೆ ಹೋಗಲು ಇದ್ದದ್ದು ಒಂದೇ ಒಂದು ಕಿರುದಾರಿ. ಡೈಯರ್ ತನ್ನ ಸೇಡು ತೀರಿಸಿಕೊಂಡ. ಮುನ್ನೂರೆ ಪ್ಪತ್ತು ಜನರನ್ನು ಸಾಯಿಸಿದ. ಸಾವಿರಾರು ಜನರನ್ನು ಗಾಯಗೊಳಿಸಿದ. ಈ ಅತ್ಯಾಚಾರವನ್ನು ಕಂಡ ಆನಿಬೆಸೆಂಟರಂತಹ ಮುಖಂಡರೂ ಬ್ರಿಟಿಷರ ಬಗ್ಗೆ ರೋಸೆದ್ದರು. ಗಾಂಧೀಜಿಯನ್ನು ವಿರೋಧಿಸುತ್ತಿದ್ದ ಅವರು ಆಗ 'ಗಾಂಧಿಯನ್ನು ವಿರೋಧಿಸಿ ನಾನು ಜನರ ಪ್ರೀತಿಯನ್ನು ಕಳೆದುಕೊಂಡೆ ಎಂದು ಉದ್ಗಾರ ತೆಗೆದರು.

ಸರೋಜಿನಿಯ ಆರೋಗ್ಯ ಕೆಟ್ಟಿತು. ಆರೋಗ್ಯ ಸುಧಾರಣೆಗಾಗಿ ಅವರು ಲಂಡನ್ನಿಗೆ ಹೋದರು. ಆದರೂ ಬ್ರಿಟಿಷರು ಭಾರತದಲ್ಲಿ ಎಸಗಿದ ಅತ್ಯಾಚಾರವನ್ನು ಅವರ ಮುಂದೆ ಇಡುವ ಕೆಲಸವನ್ನು ಕೈಗೆ ಹಚ್ಚಿಕೊಂಡರು. ಆಲ್ಬರ್ಟ್ ಹಾಲಿನಲ್ಲಿ ನಡೆದ ಒಂದು ಸಾರ್ವಜನಿಕ ಸಭೆಯನ್ನುದ್ದೇಶಿಸಿ ಭಾಷಣಮಾಡಿ ಅಮೃತಸರದಲ್ಲಾದ ಅನೀತಿಯನ್ನು ವರ್ಣಿಸಿದರು. ಆಗಲೇ ಹೆಸರಾಗಿದ್ದ ಸರೋಜಿನಿಯನ್ನು ಕೇಳಲು ಜನ ಕಿಕ್ಕಿರಿದು ನೆರೆದಿದ್ದರು. ಅಂದು ಅವರು ಮಾತನಾಡಿದ್ದು ಸರೋಜಿನಿಯಾಗಿ ಅಲ್ಲ, ಭಾರತದ ವೀರ ನಾರಿಯಾಗಿ. ಅವರು ಆ ಅಮೃತಸರದ ದುರಂತವನ್ನು ವರ್ಣಿಸುತ್ತಾ "ನನ್ನ ಸಹೋದರಿಯನ್ನು ಬೆತ್ತಲೆ ಮಾಡಿ ಬೆತ್ತದಿಂದ ಬಾರಿಸಿದರು ; ಅವರ ಮಾನ ಹಾನಿ ಮಾಡಿದರು " ಎಂದು ಹೇಳಿದರು. ಅವರ ಭಾಷಣಕ್ಕೆ ಅಡ್ಡಿಯನ್ನು ಮಾಡಲು ಕೆಲವರು ಸಿದ್ಧರಾಗಿ ಬಂದಿದ್ದರು. ಆಕೆಯ ಭಾಷಣವನ್ನು ಕೇಳಿ ಅನೇಕರು ಕಣ್ಣಲ್ಲಿ ನೀರು ತಂದರು. ಆದರೆ ದೂರದಲ್ಲಿ ಕುಳಿತಿದ್ದ ಆ ಪುಂಡರು ಕೂಗಲಾರಂಭಿಸಿದರು. ಇದನ್ನು ಕಂಡು ಸರೋಜಿನಿಯ ಕಣ್ಣುಗಳು ನಿಜವಾಗಿಯೂ ಕೆಂಗಿಡಿಗಳನ್ನು ಕಾರಿದುವು. ಅಮೃತಸರದ ಕೊಲೆಯಲ್ಲಿ ಸತ್ತವರ ಚಿತೆಯ ಜ್ವಾಲೆ ಆಕೆಯ ಎರಡು ಕಣ್ಣುಗಳಲ್ಲಿ ಮೂಡಿ ಬಂದಂತೆ ಅವು ಜ್ವಾಲೆಯನ್ನು ಉಗುಳಿದುವು. ಆಟಂ ಬಾಂಬೊಂದು ಸಿಡಿದಂತೆ 'Shut up' (ಮುಚ್ಚು ಬಾಯಿ) ಎಂದು ಗರ್ಜಿಸಿದರು. ಆ ಗರ್ಜನೆಯನ್ನು ಕೇಳಿ ಒಂದು ಪಿಳ್ಳೆಯೂ ತುಟಿಪಿಟಕ್ಕೆನ್ನಲಿಲ್ಲ. ಇದು ಸರೋಜಿನಿಯವರ ಹೆಸರಾಂತ ಭಾಷಣ. ಈ ಭಾಷಣದಲ್ಲಿ ಸರೋಜಿನಿ ತಾವು ಹಕ್ಕಿಗಳಂತೆ ಹಾಡುವ ಕವಿಯಷ್ಟೇ ಅಲ್ಲ, ಕಲಿಯಂತೆ ಕಾದುವ ವೀರ ರಮಣಿ ಎಂಬುದನ್ನು ತೋರಿಸಿಕೊಟ್ಟರು.

ಸರೋಜಿನಿಯ ಬಾಯಿಂದ ಬ್ರಿಟಿಷರ ಅಮಾನುಷ ವರ್ತನೆಯನ್ನು ಕೇಳಿದ ವೃತ್ತಪತ್ರಿಕೆಗಳು ' ಇದು ನಿಜವೇ?' ಎಂದು ಕೇಳಿದುವು. ' ನಿಜವಲ್ಲ' ಎಂಬ ಸರ್ಕಾರದ ಉತ್ತರ ಸಿದ್ಧವಾಗಿತ್ತು. ಸೆಕ್ರೆಟರಿ ಆಫ್ ಸ್ಟೇಟ್ ಮಾಂಟೆಗು ಅವರು ಈ ಹೇಳಿಕೆಗೆ ಸಾಕ್ಷ್ಯವೇನೆಂದು ಸರೋಜಿನಿಯನ್ನು ಕೇಳಿದರು. ಆಗ ಸರೋಜಿನಿ ಕಾಂಗ್ರೆಸ್ಸಿನ ವರದಿಯನ್ನೇ ಅವರ ಮುಂದಿಟ್ಟು ಮತ್ತೊಮ್ಮೆ ಮಾತೆತ್ತದಂತೆ ಮಾಡಿಬಿಟ್ಟರು. ಆದರೆ ಬ್ರಿಟಿಷರು ತಮ್ಮ ತಪ್ಪನ್ನು ಒಪ್ಪದೆ ಹಠ ಸಾಧಿಸಿದರು.

ಹೌಸ್ ಆಫ್ ಕಾಮನ್ಸಿನಲ್ಲಿ ಭಾರತದ ಬಗ್ಗೆ ಆಗುವ ಚರ್ಚೆಗಳಲ್ಲಿ ಯಾವ ಅಭಿಪ್ರಾಯ ಬರುವುದೆಂದು ತಿಳಿಯಲು ಅವರು ಹಲವಾರು ತಿಂಗಳು ಗಳು ಲಂಡನ್ನಿನಲ್ಲಿಯೇ ಇದ್ದು ಆ ಸಭೆಯ ಚರ್ಚೆಗಳನ್ನು ವೀಕ್ಷಿಸಿದರು. ಕೊನೆಗೆ ಅವರಿಗೆ ದೃಢವಾಯಿತು ಬ್ರಿಟಿಷರು ಒಳಗೊಂದು ಹೊರಗೊಂದು ಎಂದು. ೧೯೨೦ ರಲ್ಲಿ ಅವರು ಗಾಂಧೀಜಿಯವರಿಗೆ ಈ ರೀತಿ ಪತ್ರ ಬರೆದರು : "ಅಧಿಕಾರ ಮದದಿಂದ ಕಣ್ಣೇ ಕಾಣದ, ಉನ್ಮತ್ತತೆಯಿಂದ ಮೆರೆಯುತ್ತಿರುವ ಈ ಜನಾಂಗದಿಂದ ನಾವು ನ್ಯಾಯವನ್ನು ನಿರೀಕ್ಷಿಸುವುದು ನಿರರ್ಥಕ. ಕಳೆದವಾರ ಹೌಸ್ ಆಫ್ ಕಾಮನ್ಸಿನಲ್ಲಿ ನಡೆದ ಚರ್ಚೆಯನ್ನು ನೋಡಿ ಬ್ರಿಟಿಷರ ನ್ಯಾಯನೀತಿಯ ಬಗ್ಗೆ ನನ್ನಲ್ಲಿದ್ದ ಅಲ್ಪಸ್ವಲ್ಪ ನಂಬಿಕೆ ನುಚ್ಚುನೂರಾಗಿದೆ. ಭಾರತದ ಹೊಸ ದೃಷ್ಟಿಯನ್ನು ಈ ಜನ ನೋಡಲೊಲ್ಲರು. ಸಭೆಯಲ್ಲಿ ನಡೆದ ಚರ್ಚೆ ಬಹು ದುರಂತವಾಗಿತ್ತು. ಬಣ್ಣದ ಜನ ಮಾತ್ರ ತಮ್ಮನ್ನು ತಾವು ಆಳಿಕೊಳ್ಳಲು ಅಸಮರ್ಥರೆಂದು ಈ ಬಿಳಿಯ ಜನ ಭಾವಿಸುತ್ತಾರೆ."

ಬ್ರಿಟಿಷರ ವಿಚಾರ ಇಷ್ಟು ಮನದಟ್ಟಾದಾಗ ಸರೋಜಿನಿ ತಮ್ಮ 'ಮಂದಗಾಮಿ' ನೀತಿಯನ್ನು ಸಂಪೂರ್ಣ ಬದಲಾಯಿಸಿಬಿಟ್ಟರು. ಕಾವ್ಯ ಸಾಮ್ರಾಜ್ಯದಲ್ಲಿ ವಿಹರಿಸುವ ಬ್ರಿಟಿಷರೇ ಬೇರೆ ರಾಜ್ಯಸಾಮ್ರಾಜ್ಯದಲ್ಲಿ ವಿಹರಿಸುವ ಬ್ರಿಟಿಷರೇ ಬೇರೆ ಎಂಬುದು ಸ್ಪಷ್ಟವಾಯಿತು. ಸರೋಜಿನಿ ಭಾರತಕ್ಕೆ ಹಿಂದಿರುಗಿದರು. ಇಲ್ಲಿಗೆ ಬಂದಮೇಲೆ ಅವರ ಮಾತಿನಲ್ಲಿ ಹೊಸತರವಿತ್ತು. ಮೊದಲಿನ ಅಂಜಿಕೆಯಿರಲಿಲ್ಲ ಕೆಚ್ಚು ತುಂಬಿದ ನೆಚ್ಚಿನ ಧ್ವನಿಯಿತ್ತು.

ಇದಕ್ಕೆ ಮುನ್ನ ಭಾರತದ ಸ್ತ್ರೀಯರಿಗೆ ಮತದಾನ ಕೊಡುವ ಹಕ್ಕಿನ ಪ್ರಶ್ನೆ ಬಂದಾಗ, ಅದು ರಾಜಕೀಯ ಕ್ಷೇತ್ರದಲ್ಲಿ ಬಹು ಮುಖ್ಯ ಸಮಸ್ಯೆಯಾಗಿ ಎದ್ದು ನಿಂತಾಗ, ಸರೋಜಿನಿ ಭಾರತದ ಸ್ತ್ರೀಯರ ಪರವಾಗಿ ಅವರ ಹಕ್ಕನ್ನು ಬ್ರಿಟಿಷರ ಮುಂದೆ ಪ್ರತಿಪಾದಿಸಿದ್ದರು. ಹದಿನಾಲ್ಕು ಜನ ಸ್ತ್ರೀ ಸದಸ್ಯರನ್ನೊಳಗೊಂಡ ನಿಯೋಗವೊಂದು ಮಾಂಟೆಗು ಮತ್ತು ವೈಸ್‌ರಾಯ್ ಲಾರ್ಡ್ ಚೆಮ್ಸ್‌ಫರ್ಡ್‌ರನ್ನು ಭೇಟಿ ಮಾಡಿತು. ಈ ನಿಯೋಗದ ನಾಯಕತ್ವವನ್ನು ಸರೋಜಿನಿ ವಹಿಸಿದರು. ಆ ದಿವಸದ ದಿನಚರಿಯಲ್ಲಿ ಮಾಂಟೆಗು ಅವರು ಈ ರೀತಿ ಬರೆದರು : "ಈ

ದಿವಸ ಸ್ವಾರಸ್ಯವಾದ ನಿಯೋಗವೊಂದು ನಮ್ಮನ್ನು ಭೇಟಿ ಮಾಡಿತು. ಆ ನಿಯೋಗವು ಹುಡುಗಿಯರಿಗೆ ಓದು ಕಲಿಸಬೇಕು, ಹೆಚ್ಚು ಮೆಡಿಕಲ್ ಕಾಲೇಜುಗಳನ್ನು ತೆರೆಯಬೇಕು ಇತ್ಯಾದಿ ಕೋರಿಕೆಗಳನ್ನು ಮಂಡಿಸಿದರು. ಈ ನಿಯೋಗದ ನಾಯಕತ್ವವನ್ನು ಕವಯಿತ್ರಿ ಶ್ರೀಮತಿ ನಾಯಿಡು ವಹಿಸಿದ್ದರು. ಆಕೆ ಬಹು ಆಕರ್ಷಕ ಹಾಗೂ ಚತುರಳಾದ ಸ್ತ್ರೀ. ಆದರೆ ಹೃದಯದಲ್ಲಿ ಆಕೆ ಕ್ರಾಂತಿಕಾರಳೆಂದು ನನ್ನ ನಂಬಿಕೆ."

ಸರೋಜಿನಿ ಸ್ತ್ರೀಯರ ಹಕ್ಕು ಬಾಧ್ಯತೆಗಳ ಬಗ್ಗೆ ಮುಚ್ಚುಮರೆಯಿಲ್ಲದೆ ಮಾತನಾಡುತ್ತಿದ್ದರು. ಭಾರತದ ಸ್ತ್ರೀಯರ ಬಗ್ಗೆ ಯಾರಾದರೂ ಅವಹೇಳನದ ಮಾತಾಡಿದರೆ ಸಹಿಸುತ್ತಿರಲಿಲ್ಲ. ಒಮ್ಮೆ ಬಂಗಾಳದ ಗೌರ್ನರೊಬ್ಬರು ಸ್ತ್ರೀಯರ ಬಗ್ಗೆ ಒಂದೆರಡು ಅವಮಾನದ ಮಾತುಗಳನ್ನು ಆಡಿದರು. ಇದನ್ನು ಸರೋಜಿನಿ ಎಷ್ಟರ ಮಟ್ಟಿಗೆ ವಿರೋಧಿಸಿದರೆಂದರೆ ಆ ಗೌರ್ನರು ತಪ್ಪಾಯಿತೆಂದು ಕ್ಷಮೆ ಬೇಡಬೇಕಾಯಿತು.

ಅಖಿಲ ಭಾರತ ಹೋಂ ರೂಲು ಲೀಗಿನ ನಿಯೋಗ ಮಂಡಲಿಯ ಸದಸ್ಯರಲ್ಲಿ ಒಬ್ಬರಾಗಿ ಸರೋಜಿನಿ ಇಂಗ್ಲೆಂಡಿಗೆ ಹೋದರು. ಅಲ್ಲಿ ಪಾರ್ಲಿಮೆಂಟಿನ ಮುಂದೆ ಭಾರತಕ್ಕೆ ದೊರೆಯಬೇಕಾದ ನ್ಯಾಯದ ಬಗ್ಗೆಯೂ, ಸ್ತ್ರೀಯರ ಸಮಾನ ಹಕ್ಕು ಬಾಧ್ಯತೆಗಳ ಬಗ್ಗೆಯೂ ಸರೋಜಿನಿ ಸೊಗಸಾಗಿ ವಾದ ಮಾಡಿದರು. ಆ ವಾದವನ್ನು ಕೇಳಿ ಪಾರ್ಲಿಮೆಂಟಿನ ಸದಸ್ಯರು ಮರುಳಾಗಿಬಿಟ್ಟರು. ಜಾಯಿಂಟ್ ಸೆಲೆಕ್ಟ್ ಕಮಿಟಿಗೆ ಅವರು ಬರೆದುಕೊಟ್ಟ ಒಂದು ಬಿನ್ನಹ 'ಸಂಗತಿಗಳ ಗದ್ಯ, ಆದರ್ಶತೆಯ ಪದ್ಯ—ಇವೆರಡರ ಅಸಾಧಾರಣ ಸಮ್ಮಿಳನ' ವಾಗಿತ್ತಂತೆ. ಅದನ್ನು ನೋಡಿ ಮಾರುಹೋದ ಆ ಕಮಿಟಿಯ ಅಧ್ಯಕ್ಷರು ಈ ರೀತಿ ಮುಚ್ಚುಮರೆಯಿಲ್ಲದೆ ಹೇಳಿಬಿಟ್ಟರು: "ಈ ಬಗ್ಗೆ ನಾಲ್ಕು ಮಾತು ಹೇಳಲು ನನಗೆ ಅವಕಾಶ ದೊರೆಯುವುದಾದರೆ, ಈ ಬಿನ್ನಹ ನಮ್ಮ ನೀರಸ ಗದ್ಯ ಸಾಹಿತ್ಯದ ಮೇಲೆ ಕಾವ್ಯಮಯ ಬೆಳಕನ್ನು ಬೀರಿದೆ ಎಂದು ಹೇಳಬಲ್ಲೆ."

ಇಂಗ್ಲೆಂಡಿನಿಂದ ಸರೋಜಿನಿದೇವಿ ಯೂರೋಪಿಗೆ ಹೋದರು. ಸ್ವಿಟ್ಜರ್‌ಲ್ಯಾಂಡಿನ ಜಿನೀವಾ ನಗರದಲ್ಲಿ ನಡೆದ ಪ್ರಪಂಚದ ಸ್ತ್ರೀ ಸಮ್ಮೇಳನದಲ್ಲಿ ಭಾಗವಹಿಸಿದರು. ಅಲ್ಲಿ ಅವರು ಮಾಡಿದ ಭಾಷಣ ಅನನ್ಯಸಾಧಾರಣವಾಗಿತ್ತು.

# ೧೧. ರಾಷ್ಟ್ರದ ಅತ್ಯುನ್ನತ ಗೌರವ

ಅಂತೂ ೧೯೨೦ ರಲ್ಲಿ ಭಾರತಕ್ಕೆ ಹಿಂದಿರುಗಿದ ಸರೋಜಿನಿದೇವಿಯಲ್ಲಿ ಹೊಸ ಭಾವನೆಗಳು ಸಂಚಾರವಾದುವು. ರಾಜಕೀಯ ಗುರುವಿನಲ್ಲಿರಬೇಕಾದ ಗುಣಗಳನ್ನು ಗಾಂಧೀಜಿಯಲ್ಲಿ ಕಂಡರು. ಭಾರತದ ನಾಯಕತ್ವವನ್ನು ಸ್ವೀಕರಿಸಲು ಮತ್ತು ಅದರ ಹೊಣೆಯನ್ನು ಹೊರಲು ಅರ್ಹರಾದವರು ಗಾಂಧೀಜಿ ಒಬ್ಬರೇ ಎಂಬ ಸಿರ್ಧಾರಕ್ಕೆ ಬಂದರು. ಯಾವಾಗ ಈ ನಿರ್ಧಾರಕ್ಕೆ ಬಂದರೋ ಇಲ್ಲವೋ ಆಗ ಅವರು ತಮ್ಮ ಆಗುಹೋಗುಗಳನ್ನು ಗಾಂಧೀಜಿಗೆ ಅರ್ಪಿಸಿಬಿಟ್ಟರು. ಕಿಲಾಫತ್ ಚಳುವಳಿ, ಪಂಜಾಬ್ ಸಮಸ್ಯೆ ಹಾಗೂ ಸ್ವರಾಜ್ಯ ಚಳುವಳಿಗಳಲ್ಲಿ ಗಾಂಧೀಜಿ ಸಹ ನಾಯಕತ್ವಕ್ಕೆ ಸಂಪೂರ್ಣ ಶರಣಾದರು. ಗಾಂಧೀಜಿಯ ತತ್ವ ಪ್ರತಿಪಾದನೆಯನ್ನು ಕಾವ್ಯ ವಾಣಿಯಲ್ಲಿ ಮಾಡಿದರು. ಗಾಂಧೀಜಿಯವರೂ ಸರೋಜಿನಿಯಲ್ಲಿ ತಮ್ಮ ಪ್ರತಿಮೆಯನ್ನು ಕಂಡರು. ಅವರಿಗೆ ಆಕೆ ಕೇವಲ ಸ್ನೇಹಿತಳಷ್ಟೇ ಅಲ್ಲ, ತಂಗಿ ಹಾಗೂ ಮಗಳಾಗಿದ್ದಳು. ಇನ್ನೂ ಒಂದು ಹೆಜ್ಜೆ ಮುಂದೆ ಹೋದರೆ, ಆಕೆ ಅವರ 'ಅಮ್ಮಾಜಾನ್' 'ದೊಡ್ಡಮ್ಮ' ಆಗಿದ್ದರು ಸರೋಜಿನಿ ಮಾತ್ರ ಗಾಂಧೀಜಿಯನ್ನು ಗುರುವಿನಂತೆ ಭಾವಿಸಿದರು. 'ನನ್ನ ಜೀವವಿರುವವರೆಗೂ ನಾನು ಆ ಮಹಾಪುರುಷನ ಪ್ರೇಮದ, ಪ್ರೀತಿಯ, ಭಕ್ತಿಯ ಶಿಷ್ಯೆ' ಎಂದು ಸರೋಜಿನಿ ಹೇಳಿಕೊಂಡರು.

ಗಾಂಧೀಜಿಯವರು ಖಾದಿಯ ಮೂಲಕ ತಮ್ಮ ರಾಜಕೀಯ ಸ್ವಾತಂತ್ರ್ಯಪಡೆಯುವ ತೀರ್ಮಾನ ಮಾಡಿದರು. ದೇಶದಾದ್ಯಂತ ಪ್ರವಾಸ ಹೊರಟರು. ಅವರನ್ನು ನೆರಳಿನಂತೆ ಸರೋಜಿನಿಯೂ ಹಿಂಬಾಲಿಸಿದರು. ಅನೇಕ ಸಭೆಗಳಲ್ಲಿ ಭಾಷಣ ಮಾಡಿದರು. ಬಹು ಸೊಗಸಾಗಿ ಮಾತನಾಡಿದರು. ಪುರಾಣೇತಿಹಾಸಗಳಿಂದ ಉದಾಹರಣೆಗಳನ್ನು ತೆಗೆದುಕೊಂಡು ಅಲಂಕಾರಿಕವಾಗಿ ವರ್ಣಿಸಿದರು. ಸ್ತ್ರೀಯರಿಗೆ ಸ್ತ್ರೀಯಾಗಿ ಮಾತನಾಡಿದರು ತಾವೇ ಒರಟಾದ ಖಾದಿ ಧರಿಸಿ ಅದನ್ನು ಉಡಿರಿ ತೊಡಿರೆಂದು ಕೇಳಿಕೊಂಡರು. ಸ್ತ್ರೀಯರು ಯುದ್ಧ ಸನ್ನದ್ಧರಾಗಬೇಕೆಂದು ಹುರಿದುಂಬಿಸಿದರು. ಹಾಗೆ ಮಾಡದೆ ಭಾರತಕ್ಕೆ ಸ್ವಾತಂತ್ರ್ಯ ದೊರೆಯದೆಂದರು.

ಎಂತಹ ಮಾರ್ಪಾಟಾಯಿತು ಸರೋಜಿನಿಯಲ್ಲಿ! ಸರೋಜಿನಿ ಉಡುವುದು ತೊಡುವುದರ ಕಲಾಪೂರ್ಣತೆಯಲ್ಲಿ ಇಂಗ್ಲೆಂಡಿಗೇ ಹೆಸರಾಗಿದ್ದರು. ಅವರ ಕವಿತೆಗಳು ಬ್ರಿಟನ್ನಿನ ವಿದ್ವತ್ ಸಮಾಜದಲ್ಲಿ ಗಣ್ಯಸ್ಥಾನ ದೊರಕಿಸಿಕೊಟ್ಟಿದ್ದುವು. ಎಲ್ಲಿ ಹೋದರಲ್ಲಿ ಆದರದ ಸ್ವಾಗತ ದೊರೆಯುತ್ತಿತ್ತು. ಅವರ ಕಾವ್ಯದಲ್ಲಿ ವಿಧವಿಧ ರಂಗುಗಳಿದ್ದಂತೆ ಅವರ ನಿತ್ಯ ಜೀವನದಲ್ಲಿಯೂ ವೈವಿಧ್ಯತೆ ಇತ್ತು. ಯಾವ ಸಮಯದಲ್ಲಿ ಯಾವ ಸೀರೆ ಉಟ್ಟರೆ ಸಮಂಜಸವಾಗುವುದೆಂದು ಅವರು ಊಹಿಸಿ ಅಂತಹ ಸೀರೆ ಉಡುತ್ತಿದ್ದರು. ಹೀಗಾಗಿ ಅವರು ಇಂಗ್ಲೆಂಡಿನಿಂದ ಭಾರತಕ್ಕೆ ೧೯೨೦ರಲ್ಲಿ ಹಿಂದಿರುಗಿದಾಗ ಅವರ ಬಳಿ ಲಂಡನ್ ಮತ್ತು ಪ್ಯಾರಿಸ್ಸಿನಲ್ಲಿ ಸಿಕ್ಕಬಹುದಾದ ಸರ್ವೋತ್ತಮ ಸಿಲ್ಕು ಸೀರೆಗಳ ಸಂಗ್ರಹವೇ ಇತ್ತಂತೆ.

ಅಂಥವರು ಈಗ ವಿದೇಶಿ ವಸ್ತುಗಳ ಬಹಿಷ್ಕಾರಕ್ಕೆ ಪ್ರಚಾರ ಹೊರಟರು. ಅದೆಲ್ಲ ಆ ಮಹಾತ್ಮನ ಸಂಪರ್ಕದಿಂದಾಯಿತು. ಗಾಂಧೀಜಿ ಎಂತೆಂಥವರನ್ನೋ ಮಾರ್ಪಾಡು ಮಾಡಿಬಿಟ್ಟರು. ಜವಾಹರ ತಂದೆ ಮೋತಿಲಾಲರು ತಮ್ಮ ಉಡುಪುಗಳನ್ನು ಪ್ಯಾರಿಸ್ಸಿನಿಂದ ಇಸ್ತ್ರಿಮಾಡಿ ತರಿಸುತ್ತಿದ್ದರಂತೆ. ಅಂಥವರು ಒರಟು ಖಾದಿಗೆ ಇಳಿದುಬಿಟ್ಟರು! ಹಾಗಾಗದಿದ್ದರೆ ಅವರ ಪುತ್ರ ಭಾರತ ರತ್ನ, 'ಜವಾಹರ್', ನಮಗೆ ದೊರೆಯುತ್ತಿರಲಿಲ್ಲ.

೧೯೨೧ರಲ್ಲಿ ಪ್ರಿನ್ಸ್ ಆಫ್ ವ್ಹೇಲ್ಸರು ಭಾರತಕ್ಕೆ ಬರುವುದೆಂದು ಗೊತ್ತಾಯಿತು. ಅವರು ಬಂದರೆ ಭಾರತದಲ್ಲಿದ್ದ ಅಶಾಂತಿಯು ಸಮಾಧಾನಗೊಂಡು ಭಾರತಕ್ಕೂ ಬ್ರಿಟನ್ನಿಗೂ ಸಖ್ಯ ಬೆಳೆಯುವುದೆಂಬ ಭಾವನೆಯಾಗಿತ್ತು. ರಾಜಮಹಾರಾಜರು, ಶ್ರೀಮಂತ ಸರದಾರರು ಅವರ ಸ್ವಾಗತಕ್ಕೆ ವೈಭವದ ಸಿದ್ಧತೆಗಳನ್ನು ಮಾಡಲಾರಂಭಿಸಿದರು. ಆದರೆ ಕಾಂಗ್ರೆಸ್ ಆ ಭೇಟಿಯನ್ನು ಬಹಿಷ್ಕರಿಸಬೇಕೆಂದು ತೀರ್ಮಾನಿಸಿತು. ಸರಿ ಪ್ರಾರಂಭವಾಯಿತು ಚಳುವಳಿ. ಲಕ್ಷಾಂತರ ಜನ ನೆರೆದ ಸಭೆಗಳನ್ನುದ್ದೇಶಿಸಿ ಸರೋಜಿನಿ ಭಾಷಣಮಾಡಿದರು: 'ಆಡಳಿತದವರೊಡನೆ ಸಹಕರಿಸಬೇಡಿ. ಸುಮ್ಮನೆ ಮನೆಯೊಳಗಿದ್ದು ಬಿಡಿ. ಅದಕ್ಕಿಂತ ಹೆಚ್ಚಾಗಿ ಮತ್ತೇನೂ ಮಾಡಬೇಡಿ.' ಎಂದು ಬೋಧಿಸಿದರು. ಅವರು ಯಾವುದನ್ನು ಮಾಡಿದರೂ ಬಹು ಪರಿಣಾಮಕಾರಿಯಾಗಿ ಮಾಡುತ್ತಿದ್ದರು. ಒಮ್ಮೆ ಒಂದು ಸಭೆ

ಯನ್ನುದ್ದೇಶಿಸಿ ಭಾಷಣ ಮಾಡಿದನಂತರ ಸರ್ಕಾರದಿಂದ ಬಹಿಷ್ಕರಿಸ ಲ್ಪಟ್ಟಿದ್ದ 'ಹಿಂದ್ ಸ್ವರಾಜ್' ಎಂಬ ಗಾಂಧೀಜಿಯವರ ಪುಸ್ತಕಗಳ ನ್ನಿಟ್ಟಿದ್ದ ಮೇಜಿನ ಕಡೆ ಕೈತೋರಿಸಿ 'ನೀವು ಆ ಪುಸ್ತಕಗಳನ್ನು ಕೊಂಡರೆ ಅಥವಾ ಮಾರಿದರೆ ನಿಮ್ಮ ದಸ್ತಗಿರಿ ಖಂಡಿತ!' ಎಂದರು. ಹಾಗೆ ಹೇಳಿ ದರೊ ಇಲ್ಲವೋ ಮೇಜಿನಮೇಲಿದ್ದ ಪುಸ್ತಕಗಳಲ್ಲಿ ಒಂದೂ ಉಳಿಯಲಿಲ್ಲ.

ನವೆಂಬರ್ ಹನ್ನೊಂದನೇ ತಾರೀಕು ಬ್ರಿಟಿಷ್ ರಾಜಕುಮಾರರು ಬೊಂಬಾಯಿಗೆ ಬಂದಿಳಿದರು. ರಾಜ ಮಹಾರಾಜರುಗಳು ಅವರನ್ನು ಎದುರುಗೊಂಡು ವೈಭವದ ಸ್ವಾಗತ ಬಯಸಿದರು. ಆದರೆ ಬೊಂಬಾಯಿನ ಬೀದಿಗಳು ಬಿಕೋ ಎನ್ನುತ್ತಿದ್ದುವು. ಅವರು ಕಾಲಿಟ್ಟ ದಿನವೇ ಬೊಂಬಾಯಿ ನಲ್ಲಿ ರಕ್ತಪಾತಗಳಾದುವು. ಗಲಭೆಗಳು ಆರಂಭವಾದುವು. ಸರೋಜಿನಿ ದೇವಿಯವರೂ ಗಾಂಧೀಜಿಯವರೂ ಗಲಭೆಗಳ ಮಧ್ಯೆ ನುಗ್ಗಿ ಜನರು ಗಲಭೆ ಮಾಡಬಾರದೆಂದು ಪ್ರಾರ್ಥಿಸಿದರು. ಆದರೆ ಅವರ ಪ್ರಾರ್ಥನೆ ವ್ಯರ್ಥ ವಾಯಿತು. ಅನೇಕ ಜನ ಸತ್ತರು. ಸಾವಿರಾರು ಜನ ಗಾಯಗೊಂಡರು. ಆಗಲೇ ಹೇಳಿದ್ದು ಗಾಂಧೀಜಿ 'ಸ್ವರಾಜ್ಯ ನನ್ನ ಮೂಗಿನಲ್ಲಿ ದುರ್ವಾಸನೆ ಹೊಡೆಯುತ್ತಿದೆ' ಎಂದು.

ರಾಜಕುಮಾರರ ಭೇಟಿಯನ್ನು ನಿಷೇಧಿಸಿದ್ದಕ್ಕಾಗಿ ಅನೇಕ ಮುಖಂಡರುಗಳ ದಸ್ತಗಿರಿಯಾಯಿತು. ಸರೋಜಿನಿಯವರೂ ದಸ್ತಗಿರಿ ಮಾಡಲ್ಪಟ್ಟರು. ದೇಶದಾದ್ಯಂತ ಬಿರುದುಬಾವಲಿಗಳನ್ನು ಪಡೆದವರೆಲ್ಲ ಅವು ಗಳನ್ನು ತ್ಯಜಿಸಿದರು. ಕವಿವರ್ಯ ರವೀಂದ್ರನಾಥ ಠಾಕೂರರೂ ಬ್ರಿಟಿಷರು ಕೊಟ್ಟಿದ್ದ ನೈಟ್ ಪದವಿಯನ್ನು (Knight hood) ಹಿಂದಿರುಗಿ ಕೊಟ್ಟು ಬಿಟ್ಟರು. ಇಷ್ಟೆಲ್ಲಾ ಅನಾಹುತಕ್ಕೆ ಕಾರಣನಾದ ಪುಂಡ ಗಾಂಧಿಯನ್ನು ಏನು ಮಾಡಬೇಕೆಂದು ಯೋಚಿಸಿದ ಸರ್ಕಾರ ಅವರನ್ನು ಹಿಡಿದು ರಾಜ ದ್ರೋಹದ ಆಪಾದನೆಯನ್ನು ಹೊರಿಸಿ ವಿಚಾರಣೆಗೊಳಪಡಿಸಿತು. ೧೯೨೨ನೇ ಇಸವಿ ಮಾರ್ಚಿ ೧೦ ನೇ ತಾರೀಕು ಆ 'ಮಹಾವಿಚಾರಣೆ' ಪ್ರಾರಂಭ ವಾಯಿತು. ಅಂದೇ ಸರೋಜಿನಿಯವರ ವಿಚಾರಣೆಯೂ ಆಯಿತು. ಆ ಮಹಾವಿಚಾರಣೆಯನ್ನು ಕಣ್ಣಾರೆ ಕಂಡ ಸರೋಜಿನಿ ಅದನ್ನು ಹೀಗೆ ವರ್ಣಿಸಿದರು: "ಕಾನೂನು ರೀತ್ಯಾ ಗಾಂಧೀಜಿ ಒಬ್ಬ ಅಪರಾಧಿಯಾಗಿ ದ್ದರು, ಖೈದಿಯಾಗಿದ್ದರು. ಆದರೆ ಆ ಅಪರಾಧಿ ಹಾಗೂ ಖೈದಿ

ಕೋರ್ಟನ್ನು ಪ್ರವೇಶಿಸಿದಾಗ ಇಡೀ ಕೋರ್ಟೇ ಎದ್ದು ನಿಂತು ಅವರಿಗೆ ಗೌರವ ಸಲ್ಲಿಸಿತು. . . . ಆ ವಿಚಿತ್ರ ವಿಚಾರಣೆ ಪ್ರಾರಂಭವಾಯಿತು. ನನ್ನ ನೆಚ್ಚಿನ ಗುರುವಿನ ಬಾಯಿಂದ ಬಂದ ಅಮೋಘವಾಕ್ಯಗಳನ್ನು ನಾನು ಕೇಳುತ್ತ ಕುಳಿತೆ. . . . ”

ಗಾಂಧೀಜಿಗೆ ಆರು ವರ್ಷಗಳ ಶಿಕ್ಷೆಯಾಯಿತು. ಸರೋಜಿನಿಗೆ ಒಂದು ವರ್ಷದ ಶಿಕ್ಷೆಯಾಯಿತು. ಜೈಲಿಗೆ ಹೋಗುವಾಗ ಸರೋಜಿನಿಗೆ ಗಾಂಧೀಜಿ ‘ ಭಾರತದ ಐಕ್ಯತೆಯನ್ನು ನಿನ್ನ ಕೈಯಲ್ಲಿಟ್ಟಿದ್ದೇನೆ ’ ಎಂದು ಹೇಳಿ ಹೋದರು. ಅಷ್ಟೊಂದು ನಂಬಿಕೆ ಗಾಂಧೀಜಿಗೆ ಸರೋಜಿನಿಯಲ್ಲಿ. ಜೈಲಿಗೆ ಹೋದ ಶ್ರೀಮಂತಿಕೆಯ ಸರೋಜಿನಿ ಜೈಲಿನಲ್ಲಿ ಸಾಮಾನ್ಯ ಖೈದಿಗಳ ಜೊತೆಯಲ್ಲಿ ಜೈಲುವಾಸ ಅನುಭವಿಸಬೇಕಾಯಿತು. ತಿಂಗಳಿಗೊಂದು ಕಾಗದ ಬರೆಯಬಹುದಾಗಿತ್ತು ಅಥವಾ ಅದರ ಬದಲು ಒಬ್ಬರನ್ನು ನೋಡಬಹುದಾಗಿತ್ತು. ಇಂತಹ ಕಷ್ಟವನ್ನು ಸಹಿಸಿದರು ಸರೋಜಿನಿ ದೇವಿ. ಇದನ್ನೆಲ್ಲಾ ದೇಶಕ್ಕಾಗಿ ಅನುಭವಿಸಿದರು.

ಒಂದು ವರ್ಷದ ಶಿಕ್ಷೆ ಅನುಭವಿಸಿ ಹೊರಗೆ ಬಂದ ಸರೋಜಿನಿ ಸುಮ್ಮನೆ ಕುಳಿತುಕೊಳ್ಳುವ ವ್ಯಕ್ತಿಯಾಗಿರಲಿಲ್ಲ. ಹಗಲೂ ರಾತ್ರಿ ಚಳುವಳಿಗಾಗಿ ಸಂಚಾರಮಾಡುತ್ತಿದ್ದರು. ಈ ಅವಿಶ್ರಾಂತ ಓಡಾಟದಿಂದ ಅವರ ಆರೋಗ್ಯ ಕೆಟ್ಟಿತು. ಆರೋಗ್ಯ ಸುಧಾರಣೆಗಾಗಿ ಸಿಂಹಳಕ್ಕೆ ಹೋದರು. ಅಲ್ಲಿಯೂ ಭಾರತದಲ್ಲಿ ಆಗುತ್ತಿದ್ದ ಜಾಗೃತಿಯ ಸಂದೇಶವನ್ನು ಬೀರಿದರು. ‘ ಭಾರತೀಯ ಪುನರುತ್ಥಾನ ’ ಎಂಬ ಅವರ ಭಾಷಣವನ್ನು ಕೇಳಿದ ಲಂಕೆಯ ರಾಷ್ಟ್ರೀಯ ಕಾಂಗ್ರೆಸ್ಸಿನ ಅಧ್ಯಕ್ಷ ಪೆರೀರ ಎಂಬುವರು “ ಯಾವ ರೀತಿ ರವೀಂದ್ರನಾಥ ಠಾಕೂರರು ಭಾರತೀಯ ಪುನರುತ್ಥಾನದ ಪುರುಷ ಕವಿಯೋ ಅದೇ ರೀತಿ ಸರೋಜಿನಿ ಆ ಪುನರುತ್ಥಾನದ ಸ್ತ್ರೀಕವಿಯಾಗಿದ್ದಾರೆ” ಎಂದರು.

೧೯೨೩ ರಲ್ಲಿ ಮಹಮ್ಮದಾಲಿಯವರ ಅಧ್ಯಕ್ಷತೆಯಲ್ಲಿ ಕಾಂಗ್ರೆಸ್ ಅಧಿವೇಶನ ಕಾಕಿನಾಡಾದಲ್ಲಿ ನೆರೆಯಿತು. ಆಫ್ರಿಕಾದಲ್ಲಿದ್ದ ಭಾರತೀಯರಿಗೆ ಆಗುತ್ತಿದ್ದ ಅನ್ಯಾಯಗಳು ಇನ್ನೂ ನಿಂತಿರಲಿಲ್ಲ. ಅವನ್ನು ಮನಗಂಡು ಅವುಗಳ ಪರಿಹಾರಕ್ಕಾಗಿ ಸರೋಜಿನಿದೇವಿಯವರನ್ನು ಕೆನ್ಯಾ ಇಂಡಿಯನ್ ಕಾಂಗ್ರೆಸ್ ಅಧಿವೇಶನಕ್ಕೆ ಭಾರತದ ಪ್ರತಿನಿಧಿಯನ್ನಾಗಿ ಕಳುಹಿಸಿಕೊಡ

ಬೇಕೆಂದು ಈ ಅಧಿವೇಶನದಲ್ಲಿ ತೀರ್ಮಾನವಾಯಿತು. ಕಾಂಗ್ರೆಸಿನ ಆದೇಶ ವನ್ನು ಹೊತ್ತು ಸರೋಜಿನಿ ಕೆನ್ಯಾಕ್ಕೆ ಹೋದರು. ಅಲ್ಲಿ ಭಾರತೀಯರು ಅನುಭವಿಸುತ್ತಿದ್ದ ಕಷ್ಟಗಳನ್ನು ನೋಡಿ ಮರುಗಿದರು. ಅವುಗಳ ಪರಿ ಹಾರಕ್ಕೆ ಬಹಳ ಕಷ್ಟಪಟ್ಟರು. ಅವರು ಮಾಡಿದ ಅಪಾರಸೇವೆಯನ್ನು ೧೯೨೪ ರಲ್ಲಿ ಗಾಂಧೀಜಿಯವರ ಅಧ್ಯಕ್ಷತೆಯಲ್ಲಿ ನೆರೆದ ಕಾಂಗ್ರೆಸ್ ಅಧಿ ವೇಶನ ಮುಕ್ತಕಂಠದಿಂದ ಹೊಗಳಿತು. ಇಂಡಿಯಾ ಸರ್ಕಾರವೇ ಭಾರತೀ ಯರ ಪರ ಕೆನ್ಯಾ ಸರ್ಕಾರದ ಮೇಲೆ ಆಪಾದನೆ ಹೊರಿಸುವಷ್ಟರಮಟ್ಟಿಗೂ ಹೋಯಿತು ಸರೋಜಿನಿಯವರು ಮಾಡಿದ ಪ್ರಯತ್ನ.

೧೯೨೪ ರಲ್ಲಿ ಗಾಂಧೀಜಿಯವರು ಕಾಂಗ್ರೆಸ್ ಅಧಿವೇಶನದ ಅಧ್ಯಕ್ಷ ರಾದರಷ್ಟೇ. ಆದರೆ ಆ ಪದವಿ ಸರೋಜಿನಿಗೆ ದೊರೆಯಬೇಕೆಂಬುದು ಗಾಂಧೀಜಿಯವರ ಆಸೆಯಾಗಿತ್ತು. ಆ ಮಹಾಗೌರವಕ್ಕೆ ತನಗಿಂತ ಅವರು ಅರ್ಹರೆಂದು ಗಾಂಧೀಜಿಯವರ ಭಾವನೆಯಾಗಿತ್ತು. ಆದರೆ ಆಗತಾನೆ ದೀರ್ಘ ಜೈಲುವಾಸವನ್ನು ಅನುಭವಿಸಿ ಬಂದ ಗಾಂಧೀಜಿಗೆ ಆ ವರ್ಷದ ಗೌರವ ಸಲ್ಲಿಸಬೇಕೆಂದು ತೀರ್ಮಾನವಾಯಿತು. ಆದರೂ ೧೯೨೫ ನೇ ಇಸವಿಯ ಅಧಿವೇಶನಕ್ಕೆ ಸರೋಜಿನಿಯವರು ಅಧ್ಯಕ್ಷಿಣಿಯರಾದರು. ಎಂತಹ ಮಹಾಗೌರವ! ಇಲ್ಲಿಗೆ ಮೂವತ್ತುನಾಲ್ಕು ವರುಷಗಳ ಹಿಂದೆ ಸ್ತ್ರೀ ವಿದ್ಯಾಭ್ಯಾಸವೆಂಬುದೇ ಇಲ್ಲದ ಕಾಲದಲ್ಲಿ, ಬಾಲ್ಯ ವಿವಾಹ ಘೋಷಾ ಪದ್ಧತಿಗಳು ಕಟ್ಟುನಿಟ್ಟಾಗಿ ಪಾಲಿಸಲ್ಪಡುತ್ತಿದ್ದ ಕಾಲದಲ್ಲಿ ಭಾರತದ ಸ್ತ್ರೀಯೊಬ್ಬಳು ಕಾಂಗ್ರೆಸ್ ಮಹಾ ಸಂಸ್ಥೆಯ ಅಧ್ಯಕ್ಷಿಣಿಯಾಗುವುದೆಂದರೆ ನಿಜವಾಗಿಯೂ ಸಾಹಸದ ವಿಚಾರವೇ ಸರಿ. ಆದರೆ ಸತಿಯಾದವಳು ಮತ್ತು ತಾಯಿಯಾದವಳು ಆ ಸ್ಥಾನವನ್ನು ಅಲಂಕರಿಸಬೇಕೆಂದು ಗಾಂಧೀಜಿಯವರ ಇಷ್ಟವಾಗಿತ್ತು. ಅದರಂತೆ ನೆರವೇರಿತು.

ಅಧಿವೇಶನಕ್ಕೆ ಮುಂಚೆ ಅವರನ್ನು ಆರಿಸಿದ ಸುದ್ದಿ ಬಂದಾಗ ಸರೋ ಜಿನಿ ನಮ್ರತೆಯಿಂದ ಹೀಗೆ ಹೇಳಿದರು: "ನಾನು ಕೇವಲ ಸ್ತ್ರೀಮಾತ್ರ. ಆದ್ದರಿಂದ ನನ್ನ ಕಾರ್ಯಕ್ರಮ ಸರಳವಾದದ್ದು, ಗೃಹಕೃತ್ಯಕ್ಕೆ ಸಂಬಂಧ ಪಟ್ಟದ್ದು. ಭಾರತ ಮಾತೆ ತನ್ನ ಮನೆಯಲ್ಲಿ ತಾನೇ ನಿಜವಾದ ಗೃಹಿಣಿ ಯಂತೆ ಇರಬೇಕೆಂದು ನನ್ನ ಇಚ್ಛೆ. ಆಕೆ ತನ್ನ ಅಪಾರ ಪ್ರಕೃತಿ ಸಂಪತ್ತಿಗೆ ಏಕೈಕ ರಕ್ಷಕಳಾಗಬೇಕು. ಆಕೆಯ ಮನೆಗೆ ಬಂದವರ ಅತಿಥಿ ಸತ್ಕಾರ

ಆಕೆಯ ಇಚ್ಛೆಯಂತೆ ನಡೆಯಬೇಕು. ನಾನು ಭಾರತ ಮಾತೆಯ ವಿಧೇಯ ತೆಯ ಮಗಳು. ಅಂದಮೇಲೆ ನಾನು ಬರುವ ವರುಷ ನನ್ನ ತಾಯಿಯ ಮನೆಯನ್ನು ಒಪ್ಪವಾಗಿಡಬೇಕು. ನನ್ನ ತಾಯಿಯ ಮನೆಯಲ್ಲಿ ಆಕೆಯ ಹೊಟ್ಟೆಯಲ್ಲಿ ಹುಟ್ಟಿದ ಮಕ್ಕಳೆಲ್ಲರಿಗೂ ಸಾಕುಮಕ್ಕಳಿಗೂ ಸಹ ಸಾಕಷ್ಟು ಸ್ಥಳವೊದಗಬೇಕು. ಅವರಿಗೆಲ್ಲ ಸಮಾನರೀತಿಯ ಸ್ಥಾನಮಾನ ಸಿಗಬೇಕು. ಇಷ್ಟೆಲ್ಲ ಬಹು ಕಷ್ಟವಾದ ಕೆಲಸ ನಿಜ. ಆದರೂ ಅದು ನನಗೆ ಬಹು ಮೆಚ್ಚಿಕೆಯಾದ ಕೆಲಸ."

ಅಧಿವೇಶನ ಕಾನ್ಪುರದಲ್ಲಿ ನಡೆಯಿತು. ಕೈಮಗ್ಗದ ಬಟ್ಟೆಯಿಂದ ನಿರ್ಮಿಸಿದ ಮಂಟಪ ಕಂಗೊಳಿಸುತ್ತಿದೆ. ರಾಜಕಾರಣಿಗಳು, ವಿದ್ಯಾರ್ಥಿಗಳು, ಪ್ರತಿನಿಧಿಗಳು, ರಾಜಮಹಾರಾಜರುಗಳು ಸಹಾಸ್ರಾರು ಸಂಖ್ಯೆಯಲ್ಲಿ ನೆರೆದಿದ್ದಾರೆ. ಎಲ್ಲರಿಗೂ ನೆಲದ ಮೇಲೆಯೇ ಕುಳಿತುಕೊಳ್ಳುವ ಏರ್ಪಾಡು. ಪೀಠದ ಮೇಲೆ ಒಂದೇ ಒಂದು ಕುರ್ಚಿ—ನಿಂತು ಮಾತಾಡಲು ಅಶಕ್ತರಾಗಿದ್ದ ಗಾಂಧೀಜಿಯವರು ಕುಳಿತುಕೊಂಡು ಮಾತಾಡಲು.

ಮುಹೂರ್ತ ಹತ್ತಿರ ಬಂದಂತೆ ವಾದ್ಯಗಳು ಮೊಳಗಿದುವು. ಎಲ್ಲೆಲ್ಲೂ ಕೋಲಾಹಲ. ಗಾಂಧೀಜಿ ಕೇವಲ ದಟ್ಟಿಯನ್ನು ಸುತ್ತಿ ಕಾಲಿಗೆ ಚಪ್ಪಲಿ ಹಾಕಿಕೊಂಡು ಸಭಾಮಂದಿರವನ್ನು ಪ್ರವೇಶಿಸಿದರು. ಮದುಮಗಳನ್ನು ಲಗ್ನಮಂಟಪಕ್ಕೆ ಕರೆತರುವ ತಂದೆಯಂತೆ ಅವರು ಸರೋಜಿನಿಯ ಕೈಹಿಡಿದು ಕರೆದುಕೊಂಡು ಬಂದರು. ಹಿಂಬಾಲಿಸಿ ಮೋತಿಲಾಲ್ ನೆಹರೂ ಅವರ ಸುಪುತ್ರ ಜವಾಹರಲಾಲ್ ನೆಹರೂ ಬಂದರು. ಈ ರೀತಿ ಪರಿವಾರ ಸಮೇತ ಸಭಾಮಂಟಪವನ್ನು ಪ್ರವೇಶಿಸಿದ ಸರೋಜಿನಿಗೆ ಸಭೆ ಎದ್ದು ನಿಂತು ಗೌರವ ಸಲ್ಲಿಸಿತು. ಜಯ ಜಯಕಾರ ಮಾಡಿತು.

ಗಾಂಧೀಜಿ ವೇದಿಕೆಯನ್ನೇರಿ ಕುರ್ಚಿಯಮೇಲೆ ಕುಳಿತರು. ಸಭೆಗೆ ಹೊಸ ಅಧ್ಯಕ್ಷರ ಪರಿಚಯವನ್ನು ಮಾಡಿಕೊಟ್ಟರು: "ನಾನು ಆಫ್ರಿಕೆಯಲ್ಲಿದ್ದಾಗ ನನ್ನ ಹೋರಾಟಕ್ಕೆ ಒಬ್ಬ ಆಂಗ್ಲೇಯ ಮಹಿಳೆ ನೆರವಾಗಿ ನಿಂತಳು. ಆಕೆ ಈಗ ಇಲ್ಲ. ಇಲ್ಲಿ ಭಾರತದಲ್ಲಿ ನನ್ನ ನೆರವಿಗೆ ಸರೋಜಿನಿ ನಿಂತಿದ್ದಾಳೆ. ಆಕೆ ಮೇಧಾವಿಯಾದ ಸ್ತ್ರೀ; ಕೆಚ್ಚೆದೆಯ ವೀರ ಕನ್ಯೆ. ಭಾರತದ ಸ್ತ್ರೀಯೊಬ್ಬಳು ಮೊಟ್ಟಮೊದಲಿಗೆ ಕಾಂಗ್ರೆಸ್ಸಿನ ಅಧ್ಯಕ್ಷಪೀಠ ಅಲಂಕರಿಸುತ್ತಿದ್ದಾಳೆ. ರಾಷ್ಟ್ರವು ಸಲ್ಲಿಸಬಹುದಾದ ಅತ್ಯಂತ ಉನ್ನತ

ವಾದ ಗೌರವ ಇದು. ಅನ್ಯರು ನಮ್ಮನ್ನು ತುಚ್ಛವಾಗಿ ಕಾಣಬಹುದು. ನಾವು ಗುಲಾಮರಿರಬಹುದು. ಜೇಕೆಂದರೆ ಇಡೀ ಪ್ರಪಂಚವೇ ನಮ್ಮೀ ರಾಷ್ಟ್ರೀಯ ಸಭೆಯನ್ನು ಕಡೆಗಣಿಸಬಹುದು. ಆದರೆ ನಮ್ಮ ಅಧ್ಯಕ್ಷರೇ ನಮ್ಮ ಸರ್ವಸ್ವ. ಈ ಮಹಾಗೌರವ ಈ ವರ್ಷ ಸರೋಜಿನಿಯವರಿಗೆ ದೊರೆತದ್ದು ಅವರ ಹಕ್ಕು."

ಅಧಿವೇಶನಕ್ಕೆ ಅನೇಕ ಸಂದೇಶಗಳು ಬಂದಿದ್ದುವು. ಅವುಗಳಲ್ಲಿ ಮುಖ್ಯವಾದದ್ದು ರವೀಂದ್ರನಾಥ ಠಾಕೂರರಿಂದ ಬಂದ ಸಂದೇಶ. ಅದೂ ಕಾವ್ಯಮಯವಾಗಿತ್ತು : "ನಮ್ಮ ಅಧ್ಯಕ್ಷಿಣಿ ಸ್ತ್ರೀಯೂ ಹೌದು, ಕವಿಯೂ ಹೌದು. ಕಾಂಗ್ರೆಸ್ಸಿನ ಚಟುವಟಿಕೆಗಳನ್ನು ಪ್ರೇಮದ ಹಾಗೂ ಸೇವೆಯ ದಿಶೆಯಲ್ಲಿ ಕೊಂಡೊಯ್ಯುವ ಶಕ್ತಿಯುಳ್ಳವರು ಅವರು. ಬಡತನ, ಅಜ್ಞಾನ, ರೋಗರುಜಿನ ಹಾಗೂ ಅನೈಕಮತ್ಯದಿಂದ ನಮ್ಮ ಮಹಾತಾಯಿಯ ಎದೆ ಹಾಲು ಬತ್ತಿದೆ; ದೇಹ ಕುಟುಕುಜೀವ ಹಾಕುತ್ತಿದೆ; ಸಂತೋಷವೆಂಬ ಬೆಳಕು ನಂದಿಹೋಗುತ್ತಿದೆ. ಇಂತಹ ಭಾರತದ ಜನತೆಯ ತೊಟ್ಟಿಲನ್ನು ತೂಗಿ ಸರೋಜಿನಿ ಮಕ್ಕಳನ್ನು ಸಾಕುವರೆಂದು ನಾನು ಪೂರ್ಣ ನಂಬಿದ್ದೇನೆ."

ದಕ್ಷಿಣ ಆಫ್ರಿಕಾದಿಂದ ಅಲ್ಲಿಯ ಭಾರತೀಯರ ಪರವಾಗಿ ನಿಯೋಗವೊಂದು ಬಂದಿತ್ತು. ಅದರ ನಾಯಕರಾದ ಡಾಕ್ಟರ್ ಅಬ್ದುರ್ ರಹಮಾನರು ಮಾಡಿದ ಪುಟ್ಟ ಭಾಷಣ ಬಹು ಆತ್ಮೀಯವಾಗಿತ್ತು : "ನಾವು ಅಲ್ಲಿಂದ ಪ್ರಪಂಚದ ಮಹೋನ್ನತ ಮಹಿಳಾಮಣಿಯರಲ್ಲಿ ಒಬ್ಬರಿಗೆ ಅವರ ಛಾಯಾಚಿತ್ರವನ್ನು ಅರ್ಪಿಸಲು ಬಂದಿದ್ದೇವೆ. ದಕ್ಷಿಣ ಆಫ್ರಿಕಾದ ಭಾರತೀಯರು ಭಾರತಕ್ಕೆ ಒಬ್ಬ ಮಹಾಪುರುಷನನ್ನು ಇತ್ತಿದ್ದಾರೆ: ಮಹಾತ್ಮಜಿ ನಮಗೆ ಸೇರಿದವರು. ಶ್ರೀಮತಿ ನಾಯಿಡು ಅವರೂ ನಮಗೆ ಸೇರಿದವರು. ಇವರಿಬ್ಬರಲ್ಲಿ ಒಬ್ಬರನ್ನಾದರೂ ನೀವು ನಮಗೆ ಕೊಡಬೇಕು. ನಮ್ಮ ಸಂಗ್ರಾಮದಲ್ಲಿ ಹೋರಾಡಲು ಇವರಿಬ್ಬರಲ್ಲಿ ಯಾರಾದರೂ ಒಬ್ಬರು ಬೇಕಾಗಿದೆ. ಈ ಮಹೋನ್ನತ ಮಹಿಳೆಯನ್ನು ನಮಗೆ ಕೊಡುವುದಾದರೆ ಅವರಿಗೆ ಬದಲಾಗಿ ಈ ಛಾಯಾಚಿತ್ರವನ್ನು ನಿಮ್ಮ ಬಳಿ ಬಿಟ್ಟು ಹೋಗುತ್ತೇವೆ. ಅದನ್ನು ನೋಡಿ ನೀವು ತೃಪ್ತಿಪಟ್ಟುಕೊಳ್ಳಿ. ಪ್ರೇಮದ ಸಂಕೇತವಾಗಿ ನಮ್ಮ ತಾಯಿಗೆ, ನಮ್ಮ ಚಿಕ್ಕಮ್ಮನಿಗೆ ಈ ಛಾಯಾಚಿತ್ರವನ್ನು ಅರ್ಪಿಸುತ್ತೇವೆ." *

ಎಷ್ಟೊಂದು ಪ್ರೀತಿ ಸಂಪಾದಿಸಿದ್ದರು ಸರೋಜಿನಿ ಆಗಲೇ! ಹೌದು. ಅವರು ಹೋದೆಡೆಯಲ್ಲೆಲ್ಲಾ ಜನರನ್ನು ತಮ್ಮೆಡೆಗೆ ಸೆಳೆಯುತ್ತಿದ್ದರು. ಬೆಲ್ಲಕ್ಕೆ ಇರುವೆ ಮುತ್ತುವಂತೆ ಅವರಿಗೆ ಜನ ಮುತ್ತುತ್ತಿದ್ದರು. ಅವರಲ್ಲಿ ಆ ಆಕರ್ಷಣಶಕ್ತಿಯಿತ್ತು.

ಸರೋಜಿನಿ ತಮ್ಮ ಅಧ್ಯಕ್ಷ ಭಾಷಣವನ್ನು ಪ್ರಾರಂಭಿಸಿದರು. ಬರೆದು ಅಚ್ಚುಮಾಡಿಸಿದ ಭಾಷಣವನ್ನು ಅವರು ಓದಲೇ ಇಲ್ಲ. ಅದನ್ನು ಬಿಟ್ಟು ನಿಂತಂತೆಯೇ ಹೊರಸೂಸುತ್ತಾ ತಮ್ಮ ಭಾಷಣವನ್ನು ಆರಂಭಿಸಿದರು:

"ನಾನು, ತೊಟ್ಟಿಲನ್ನು ತೂಗಿದ ನಾನು, ಜೋಗುಳ ಹಾಡಿದ ನಾನು, ಭಾರತಮಾತೆಯ ಲಾಂಛನವಾದ ನಾನು, ಈಗ ಸ್ವಾತಂತ್ರ್ಯದ ಜ್ಯೋತಿಯನ್ನು ಬೆಳಗಬೇಕಾಗಿದೆ. ನನ್ನನ್ನು ನಿಮ್ಮ ನಾಯಕಳಾಗಿ ಆರಿಸಿ, ಈ ಸಂದಿಗ್ಧ ಸಮಯದಲ್ಲಿ ನನ್ನನ್ನು ಚುನಾಯಿಸಿ, ನೀವು ಪೂರ್ವದ ಸಂಪ್ರದಾಯವನ್ನು ಪುನಃ ಸ್ಥಾಪಿಸಿದ್ದೀರಿ; ನಮ್ಮ ನಾಡಿನ ಇತಿಹಾಸದ ಶ್ರೇಷ್ಠ ಯುಗದಲ್ಲಿ ಸ್ತ್ರೀಗೆ ದೊರೆತಿದ್ದ ಸ್ಥಾನವನ್ನು ಪುನಃ ಕೊಟ್ಟಿದ್ದೀರಿ. ನನ್ನ ಅಲ್ಪತೆಯ ಅರಿವು ನನಗಿದೆ. ಕಾಡಿನಲ್ಲಿದ್ದ ತಾಯಿ ಸೀತೆಯ ನೆಚ್ಚು, ಸಾವನ್ನು ಎದುರಿಸಿದ ಸತಿ ಸಾವಿತ್ರಿಯ ಕೆಚ್ಚು ನನ್ನ ಕೆಲಸದಲ್ಲಿ ನೆರವಾಗಲಿ."

ಈ ಧಾಟಿಯಲ್ಲಿ ಸಾಗಿತು ಕವಿ-ರಾಜಕಾರಿಣಿಯ ಭಾಷಣ. ಅವರು ಇಂಗ್ಲೀಷಿನಲ್ಲಿ ಭಾಷಣಮಾಡಿದರೂ ಅದು ಪೌರಾಣಿಕ ಸ್ತ್ರೀಯರೋರ್ವಳ ಭಾಷಣದಂತೆ ಭಾಸವಾಗುತ್ತಿತ್ತು. "ಆ ಭಾಷಣ ಗದ್ಯಪದ್ಯವಾಗಿತ್ತು. ಇಡೀ ಕಾಂಗ್ರೆಸ್ ಇತಿಹಾಸದಲ್ಲಿ ಯಾರೂ ಅವರಷ್ಟು ಪುಟ್ಟ ಭಾಷಣ ಮಾಡಲಿಲ್ಲ; ಅವರಷ್ಟು ಸೊಗಸಾಗಿ ಮಾತಾಡಲಿಲ್ಲ" ಎಂದು ಪಟ್ಟಾಭಿ ಸೀತಾರಾಮಯ್ಯನವರು ತಮ್ಮ ಕಾಂಗ್ರೆಸ್ ಇತಿಹಾಸದಲ್ಲಿ ಹೊಗಳಿದ್ದಾರೆ.

"ಒಗ್ಗಟ್ಟಿನ ವಿಷಯವನ್ನು ಪ್ರಸ್ತಾಪಿಸಿ ಸರೋಜಿನಿ "ಸರ್ವರಲ್ಲಿಯೂ ಸರ್ವರಂಗಗಳಲ್ಲಿಯೂ ಒಗ್ಗಟ್ಟಿರಬೇಕು. ಭಯಭೀತಿಗಳು ಇರಕೂಡದು. ಸ್ವಾತಂತ್ರ್ಯ ಹೋರಾಟದಲ್ಲಿ ಭೀತಿ ಅಕ್ಷಮ್ಯ ದ್ರೋಹ; ನಿರಾಶೆ ಅಕ್ಷಮ್ಯ ಅಪರಾಧ." ಎಂದರು.

ಎಂಟು ಗಂಟೆಗಳ ಕಾಲ ಒಂದೇ ಸಮನೆ ನಡೆದ ಅಧಿವೇಶನದ ಕಾರ್ಯಕ್ರಮಗಳನ್ನು ನಡಸುವುದರಲ್ಲಿಯೂ ಅವರು ಎತ್ತಿದ ಕೈಯಾದರು. ಚಕ್ಕಳು

ಬಕ್ಕಳು ಹಾಕಿ ಕುಳಿತಿದ್ದ ಅವರು ಬೇಕೆಂದಾಗ ಚಂಗನೆ ಎದ್ದುನಿಂತು ಉತ್ತರ ಕೊಡುತ್ತಿದ್ದರು. ಮಾತನಾಡುತ್ತಿರುವವರು ಯಾರೆಂದು ಆಗಾಗ್ಗೆ ಎದ್ದು ಗಮನಿಸುತ್ತಿದ್ದರು. ಚರ್ಚೆಯಲ್ಲಿ ಒಬ್ಬರಿಗೊಬ್ಬರಿಗೆ ತಿಕ್ಕಾಟವಾಗುತ್ತಿದ್ದರೆ ತಮ್ಮ ಅಧಿಕಾರವಾಣಿಯಿಂದ ಅದನ್ನು ತಡೆಯುತ್ತಿದ್ದರು. ಹೀಗೆ ಹೆಚ್ಚು ತಿಕ್ಕಾಟಕ್ಕೆ ಕಾರಣವಾಗುತ್ತಿದ್ದವರು ಮಹಮ್ಮದಾಲಿ ಜಿನ್ನಾ ಅವರು. ಆಗ್ಗೆ ಕಾಂಗ್ರೆಸ್ಸಿನಲ್ಲಿದ್ದ ಅವರು ಆಂಗ್ಲೇಯರಂತೆ ಸೊಗಸಾಗಿ ಉಡುಪು ಧರಿಸಿ ತಮ್ಮ ನಯವಾದ ಮಾತಿನಿಂದ, ಚುರುಕು ಬುದ್ಧಿಯಿಂದ ಗಾಂಧೀಜಿ ಹೇಳಿದ್ದನ್ನೆಲ್ಲ ವಿರೋಧಿಸುತ್ತಿದ್ದರು. ಒಮ್ಮೆ ಸರೋಜಿನಿ ಅನಿವಾರ್ಯವಾಗಿ ಅವರಿಗೆ ಬುದ್ಧಿ ಕಲಿಸಬೇಕಾಯಿತು. ಹಿಂದು ಮುಂದು ನೋಡದೆ ಹೀಗೆಂದು ಹೇಳಿಬಿಟ್ಟರು: "ಈ ಕಾಂಗ್ರೆಸ್ಸು ಜನಗಳ ಧ್ವನಿಯಾಗಿರಬೇಕೆ ಹೊರತು ರಾಜತಂತ್ರಜ್ಞರ ಧ್ವನಿಯಾಗುವುದು ಬೇಡ.... ನಮಗಿರಬೇಕಾದ್ದು ರಾಷ್ಟ್ರೀಯ ಉದ್ದೇಶಗಳೇ ಹೊರತು ಸ್ವಂತ ಉದ್ದೇಶಗಳಲ್ಲ.... ದಾಸ್ಯದಿಂದ ಜನರನ್ನು ಎಚ್ಚರಿಸಬೇಕಾದ ಜ್ಯೋತಿಯನ್ನು ನಾನು ಹೇಗೆ ಹಚ್ಚಲಿ? ನಮ್ಮಲ್ಲಿ ಕೆಲವರಿದ್ದಾರೆ. ಅಗ್ಗದ ಪಾಶ್ಚಾತ್ಯ ಮಾದರಿಗಳಾಗಬೇಕೆಂದು ಅವರ ಆಸೆ! ಆದರೆ ನಾವು ಅದೇಕೆ ಭಾರತೀಯರಾಗಿಲ್ಲ—ಭಾರತಕ್ಕಾಗಿ?"

ಮಾತಿನ ಎಂತಹ ಚಾವಟಿ ಏಟು? ಈ ಏಟು ತಿಂದು ಜಿನ್ನಾರವರು ಮುಟ್ಟಿನೋಡಿ ಕೊಂಡಿರಬೇಕು. ಹಿಂದೂ ಮುಸಲ್ಮಾನರ ಬಾಂಧವ್ಯದ ಬಗ್ಗೆ ಸರೋಜಿನಿಯವರಿಗೆ ಅಗಾಧವಾದ ಗಾಢ ನಂಬಿಕೆ ಇತ್ತು. ಇದೇ ಕಾಂಗ್ರೆಸ್ ಅಧಿವೇಶನದಲ್ಲಿ ಈ ಬಗ್ಗೆ ಅವರು ಆಡಿದ ಮಾತುಗಳು ಎಷ್ಟು ಅನೋಘವಾಗಿವೆ: "ಹಿಂದೂ-ಮುಸ್ಲಿಂ ಐಕ್ಯಮತ್ಯಕ್ಕಾಗಿ ನಾನು ನನ್ನ ಜೀವನವನ್ನೇ ಮುಡುಪಾಗಿಟ್ಟಿರುವೆ. ಆದರೆ ಹಿಂದೂ-ಮುಸ್ಲಿಮರ ಜಗಳ ಗುದ್ದಾಟಗಳನ್ನು ನೋಡಿ ನನ್ನ ಆಸೆ ನಿರ್ನಾಮವಾಗಿ ಹೋಗಿದೆ. ಇಬ್ಬರಲ್ಲಿಯೂ ಪರಸ್ಪರ ಅಸೂಯೆ ಅಪನಂಬಿಕೆ ಬೆಳೆದುಹೋಗಿದೆ. ವೇದೋಪನಿಷತ್ತುಗಳ ಸಾರವನ್ನು ಹೀರಿದ ಹಿಂದೂಗಳಿಗೆ ಸಹನೆ ಅನೂಚಾನವಾಗಿ ಬಂದದ್ದು. ಅವರನ್ನು ಅಂಗಲಾಚಿ ಕೇಳಿಕೊಳ್ಳುತ್ತೇನೆ: ಆ ನಿಮ್ಮ ಉದಾತ್ತ ಗುಣಗಳನ್ನು ಮತ್ತೊಮ್ಮೆ ತೋರಿಸಿ ಎಂದು. ಮುಸಲ್ಮಾನರನ್ನು ಕುರಿತು ಕೇಳಿಕೊಳ್ಳುತ್ತೇನೆ: ನಿಮ್ಮ ಮಾತೃ ಭೂಮಿ ಭಾರತ.

ಇತರ ಮುಸ್ಲಿಂ ರಾಷ್ಟ್ರಗಳು ಪಡುತ್ತಿರುವ ಕಷ್ಟಗಳಿಗೆ ಸಿಟ್ಟಾಗಿ ನೀವು ಭಾರತದ ಬಗ್ಗೆ ದ್ವೇಷ ತಾಳಬೇಡಿ. ಭಾರತವೇ ನಿಮ್ಮ ಎಂದೆಂದಿನ ಭೂಮಿ. ಅದಕ್ಕೆ ನೀವು ಎರಡು ಬಗೆಯಬಾರದು. ಎರಡು ವಂಶಗಳ ಸ್ತ್ರೀ ಪುರುಷರು ಪರಸ್ಪರ ಮತಸಹಿಷ್ಣುಯಿಂದ ಪರಸ್ಪರ ನಡೆನುಡಿಗಳನ್ನು ಗೌರವಿಸುತ್ತಾ ಪರಸ್ಪರ ಸಂಸ್ಕೃತಿಯಲ್ಲಿರುವ ಗುಣಗಳನ್ನು ಕಂಡು ಆನಂದಿಸುತ್ತಾ ಇರುವುದಾದರೆ ನಮ್ಮ ಹೃದಯವೆಷ್ಟು ತೃಪ್ತಿಗೊಳ್ಳುವುದು?"

ಕಾಂಗ್ರೆಸ್ಸಿನ ಆಡಳಿತದ ಹೊರೆಯನ್ನು ಹೊತ್ತ ಸರೋಜಿನಿದೇವಿ ತಮ್ಮ ಕೆಲಸವನ್ನು ಸಮರ್ಪಕವಾಗಿ ನಿರ್ವಹಿಸಿದ್ದರು. ಸ್ತ್ರೀಯಾದರೂ ಸ್ವಂತ ವಿವೇಚನೆಯಿಂದ ಕೆಲಸಕಾರ್ಯಗಳನ್ನು ನಿರ್ವಹಿಸಬಲ್ಲರೆಂಬುದನ್ನು ಪ್ರಪಂಚಕ್ಕೆ ತೋರಿಸಿಕೊಟ್ಟರು. ಜಾನ್ ಹೇಯನ್ಸ್ ಹೋಂಸ್ ಎಂಬುವರು ಅಮೇರಿಕಾದ ಪತ್ರಿಕೆಯೊಂದಕ್ಕೆ ಬರೆದ ಲೇಖನದಲ್ಲಿ ಪ್ರಪಂಚದ ಹತ್ತು ಮಹಾಮಹಿಳೆಯರಲ್ಲಿ ಸರೋಜಿನಿದೇವಿಗೆ ಪ್ರಥಮ ಸ್ಥಾನಕೊಟ್ಟರು.

# ೧೨. ಅಮೇರಿಕಾ ಆಫ್ರಿಕಾ ದೇಶಗಳಲ್ಲಿ

ಹೀಗೆ ಸರೋಜಿನಿದೇವಿ ಭಾರತದಲ್ಲಿ ಹಾಗೂ ಪ್ರಪಂಚದಲ್ಲಿ ಪ್ರಖ್ಯಾತ ರಾಗುತ್ತಿದ್ದರು. ಇಂತಹ ಪ್ರಖ್ಯಾತ ವ್ಯಕ್ತಿಯನ್ನು ಅಮೇರಿಕಾ ತಮ್ಮ ದೇಶಕ್ಕೆ ಕಳುಹಿಸಿಕೊಡಬೇಕೆಂದು ಕೇಳಿಕೊಳ್ಳುತ್ತಿತ್ತು. ೧೯೨೮ ರಲ್ಲಿ ಕ್ಯಾತರೀನ್ ಮೇಯೋ ಎಂಬ ಅಮೇರಿಕಾದ ಮಹಿಳೆಯೊಬ್ಬಳು ಭಾರತಕ್ಕೆ ಬಂದಿದ್ದಳು. ಬಂದವಳು ಇಲ್ಲಿ ಕಂಡ ಕೆಟ್ಟ ವಿಚಾರಗಳನ್ನೆಲ್ಲಾ ಕೂಡಿ ಹಾಕಿ 'ಮದರ್ ಇಂಡಿಯಾ' ಎಂಬ ಪುಸ್ತಕ ಬರೆದಳು. ಭಾರತ ಕೊಚ್ಚೆ ಗುಂಡಿ, ಸೂಳೆಗೇರಿ ಎಂದು ವರ್ಣಿಸಿದಳು. ಭಾರತದಲ್ಲಿ ತಮ್ಮನ್ನು ತಾವೇ ಆಳಿಕೊಳ್ಳುವ ಜನರಿಲ್ಲವೆಂದು ಆಡಿಕೊಂಡಳು. ಕೇವಲ ಕೊಳಕು ವಿಚಾರಗಳನ್ನೇ ಸೇರಿಸಿ ಬರೆದ ಈ ಪುಸ್ತಕವನ್ನು ಗಾಂಧೀಜಿ ಓದಿ ಇದು 'ಗಲ್ಲಿ ಇನ್‌ಸ್ಪೆಕ್ಟರ ವರದಿ' ಎಂದು ಒಂದೇ ಮಾತಿನಲ್ಲಿ ಅದರ ಬೆಲೆಯನ್ನು ನಿರ್ಧರಿಸಿದರು. ಆದರೂ ಯಾರಾದರೊಬ್ಬ ಗಣ್ಯ ವ್ಯಕ್ತಿ ಅಮೇರಿಕಾಕ್ಕೆ ಹೋಗಿ ಅವರಿಗೆ ಸತ್ಯಾಂಶಗಳನ್ನು ನೇರವಾಗಿ ಮನದಟ್ಟುವಂತೆ ಹೇಳಬೇಕಾದ ಆವಶ್ಯಕತೆಯಿತ್ತು. ಈ ಕೆಲಸಕ್ಕೆ ಸರೋಜಿನಿದೇವಿಯನ್ನು ಬಿಟ್ಟರೆ ಆಗ್ಗೆ ಬೇರೊಬ್ಬರು ಇರಲಿಲ್ಲ. ಗಾಂಧೀಜಿಯವರಿಗೂ ಸರೋಜಿನಿಯವರನ್ನು ಬಿಟ್ಟರೆ ಸರಿಯಾದ ವ್ಯಕ್ತಿ ಕಾಣಿಸಲಿಲ್ಲ. ಅಷ್ಟೊಂದು ನಂಬಿಕೆ ಇತ್ತು ಗಾಂಧೀಜಿಗೆ ಆ ಮಹಿಳೆಯಲ್ಲಿ.

ಹೀಗಾಗಿ ಸರೋಜಿನಿದೇವಿ ೧೯೨೮ ರಲ್ಲಿ ಭಾರತದ ಪ್ರತಿನಿಧಿಯಾಗಿ ಅಮೇರಿಕಾಕ್ಕೆ ಹೊರಟರು. ಹಡಗು ನ್ಯೂಯಾರ್ಕ್ ಬಂದರನ್ನು ತಲುಪಿತು. ಅಲ್ಲಿಗೆ ಮೂವತ್ತೈದು ವರ್ಷಗಳ ಹಿಂದೆ ಸ್ವಾಮಿ ವಿವೇಕಾನಂದರು ಅಮೇರಿಕಾಕ್ಕೆ ಹೋಗಿದ್ದರು. ಅವರು ಹೋದದ್ದು ಭಾರತದ ಧರ್ಮಸಾರವನ್ನು ಬಿತ್ತಲು. ಆದರೆ ಸರೋಜಿನಿ ಹೋದದ್ದು ಎದ್ದೇಳುತ್ತಿರುವ ಭಾರತದ ಆಸೆ ಆಕಾಂಕ್ಷೆಗಳನ್ನು ಅರುಹಲು. ಸ್ವಾಮಿಗಳು ಹೋದಾಗ, ಅವರು ಯಾರೆಂದು ತಿಳಿಯುವ ತನಕ, ಕೇಳುವವರಿಲ್ಲವಾದರು. ಒಂದು ರಾತ್ರಿ ಚಿಕಾಗೋ ನಗರದ ರೈಲ್ವೆ ಸ್ಟೇಷನ್ನಿನಲ್ಲಿ ಬಿದ್ದಿದ್ದ ಖಾಲೀ ಪೆಟ್ಟಿಗೆಯೊಳಗೆ ಮಲಗಿದ್ದರು! ಆದರ ಬೆಳಗ್ಗೆ ಎದ್ದು ಅದೇ ವ್ಯಕ್ತಿ ತನ್ನ ಹರಿಕಂಠ ಗರ್ಜನೆ

ಯಿಂದ ಅಮೇರಿಕಾ ದೇಶವನ್ನೇ ಎಚ್ಚರಗೊಳಿಸಿತು ! ಸರೋಜಿನಿ ದೇವಿಯ ವಿಚಾರ ಹಾಗಿರಲಿಲ್ಲ. ಹಡಗು ನ್ಯೂಯಾರ್ಕ್ ಬಂದರನ್ನು ಮುಟ್ಟಿದಾಗ ಅನೇಕ ಯುವಕ ಯುವತಿಯರು, ಪತ್ರಿಕಾಪ್ರತಿನಿಧಿಗಳು, ಗಣ್ಯರು ಬಂದು ಅವರನ್ನು ಎದುರುಗೊಂಡರು. ಹಡಗಿನಿಂದ ಇಳಿದ ಕೂಡಲೇ ಒಬ್ಬನು ಕೇಳಿದ ' ಕ್ಯಾತರೀನ್ ಮೆಯೋ ಬಗ್ಗೆ ನಿಮ್ಮ ಅಭಿಪ್ರಾಯವೇನು ? ಎಂದು. ' ಕ್ಯಾತಿರೀನ್ ಮೇಯೋ ! ಯಾರಾಕೆ ? ' ಎಂದು ಪ್ರತಿ ಪ್ರಶ್ನೆ ಕೇಳಿದರು ಸರೋಜಿನಿ. ಪ್ರಶ್ನೆ ಕೇಳಿದವನೇ ತಬ್ಬಿಬ್ಬಾದ. ಒಂದರಗಳಿಗೆಯಲ್ಲಿ ಕ್ಯಾತರೀನ್ ಮೇಯೋ ಆಸಡ್ಡೆಗೆ ಕಾರಣಳಾದ ಅಪ್ರಬುದ್ಧ ವ್ಯಕ್ತಿಯಾದಳು. ಸರೋಜಿನಿದೇವಿಗೆ ಆಕೆಯ ವಿಚಾರ ಚೆನ್ನಾಗಿ ಗೊತ್ತಿತ್ತು. ಆದರೆ ಗೊತ್ತೇ ಇಲ್ಲವೆಂಬಂತೆ ನಟಿಸಿ, ಗೊತ್ತು ಮಾಡಿಕೊಳ್ಳಲೂ ಅರ್ಹಳಲ್ಲವೆಂಬ ಭಾವನೆ ಯನ್ನುಂಟು ಮಾಡಿದರು ಸರೋಜಿನಿ ಅಮೇರಿಕೆಯವರಲ್ಲಿ.

ಅಮೆರಿಕಾದಲ್ಲಿ ಸರೋಜಿನಿ ತಮ್ಮ ಕಾರ್ಯವನ್ನು ಪ್ರಾರಂಭಿಸಿದರು. ಊರಿಂದ ಊರಿಗೆ ಹೋದರು. ಭಾರತದ ಸಂಸ್ಕೃತಿಯ ಬಗ್ಗೆ, ಭಾರತದ ಸ್ತ್ರೀತ್ವದ ಬಗ್ಗೆ, ಭಾರತದ ಹೊಸ ಆಸೆ ಆಕಾಂಕ್ಷೆಗಳ ಬಗ್ಗೆ ತಮ್ಮ ಭವ್ಯ ಕವಿ ವಾಣಿಯಲ್ಲಿ ಮಾತನಾಡಿದರು. ಆ ಭಾಷಣಗಳನ್ನು ಕೇಳಿ ಅಮೇರಿ ಕಾದ ಜನತೆ ಅಚ್ಚರಿಗೊಂಡಿತು. ಬಣ್ಣಬಣ್ಣದ ಸೀರೆ ಉಟ್ಟು, ಕಿವಿ ಯಲ್ಲಿ ಓಲೆ, ಕೈಯ್ಯಲ್ಲಿ ಉಂಗುರವಿಟ್ಟು, ಕೂರಳಲ್ಲಿ ಚಿನ್ನದ ಹಾರ ಧರಿಸಿದ್ದ ಆ ವ್ಯಕ್ತಿ ಅಮೇರಿಕಾ ದೇಶದವರಿಗೆ ಒಂದು ಅಪೂರ್ವ ಮೂರ್ತಿ ಯಾಗಿ ಕಂಡರು. ಮಿಸ್ ಮೇಯೋ ಹರಡಿದ್ದ ದುರ್ಭಾವನೆಗಳು ಸರೋ ಜಿನಿಯವರನ್ನು ಕಂಡು ಕೇಳಿದ ಮೇಲೆ ಮಾಯವಾದುವು. ಮೂವ ತ್ತೈದು ವರ್ಷಗಳ ಹಿಂದೆ ವಿವೇಕಾನಂದರು ಧಾರ್ಮಿಕ ಕ್ಷೇತ್ರದಲ್ಲಿ ಮಾಡಿದ ಅದ್ಭುತ ಕೆಲಸವನ್ನು ಇಂದು ಸರೋಜಿನಿ ಸಮಾಜಿಕ ಹಾಗೂ ರಾಜಕೀಯ ಕ್ಷೇತ್ರದಲ್ಲಿ ಮಾಡಿದರು. ಇಷ್ಟು ಮಾಡಿ ಸರೋಜಿನಿ ಭಾರತಕ್ಕೆ ಹಿಂದಿರು ಗಿದರು.

ಅಮೇರಿಕಾಕ್ಕೆ ಹೋಗುವುದಕ್ಕೆ ಮುನ್ನ ಸರೋಜಿನಿ ವಸಾಹತುಗಳಲ್ಲಿ ಇದ್ದ ಭಾರತೀಯರಿಗೆ ಬಹುವಾಗಿ ದುಡಿದಿದ್ದರು. ಅವರಿಗಾಗಿ ಗಾಂಧೀಜಿ ಶ್ರೀನಿವಾಸಶಾಸ್ತ್ರಿ, ರೆವರೆಂಡ್ ಆಂಡ್ರ್ಯೂಸ್ ಮತ್ತು ಸರೋಜಿನಿದೇವಿ— ಈ ನಾಲ್ವರು ಹೋರಾಡಿರುವಷ್ಟು ಯಾರೂ ಹೋರಾಡಿಲ್ಲ. ೧೯೨೪ ರಲ್ಲಿ ನಡೆದ

ಕಾಂಗ್ರೆಸ್ ಅಧಿವೇಶನಕ್ಕೆ ಸರೋಜಿನಿದೇವಿ ಅಧ್ಯಕ್ಷರಾದಾಗ ದಕ್ಷಿಣ ಆಫ್ರಿಕಾದಲ್ಲಿದ್ದ ಭಾರತೀಯ ವಲಸೆಗಾರರ ನಿಯೋಗವೊಂದು ಬಂದು 'ನಮ್ಮ ಪ್ರೇಮದ ಸಂಕೇತವಾಗಿ ನಮ್ಮ ತಾಯಿಗೆ, ನಮ್ಮ ಚಿಕ್ಕಮ್ಮನಿಗೆ, ಈ ಛಾಯಾಚಿತ್ರವನ್ನು ಅರ್ಪಿಸುತ್ತಿದ್ದೇವೆ' ಎಂದು ಬಹು ಪ್ರೀತಿಯ ಕಾಣಿಕೆಯನ್ನು ಅರ್ಪಿಸಿದ್ದರಷ್ಟೆ. ಅದು ಕೇವಲ ಔಪಚಾರಿಕವಾದುದಾಗಿರಲಿಲ್ಲ. ನಿಜವಾಗಿಯೂ ದಕ್ಷಿಣ ಆಫ್ರಿಕಾದವರಿಗಾಗಿ ಸರೋಜಿನಿ ದುಡಿದಿದ್ದರು. ಅವರ ಪ್ರೀತಿ ಸಂಪಾದಿಸಿದ್ದರು. ೧೯೧೭ ರಲ್ಲಿ ಅವರು ಮಾಡಿದ ಭಾಷಣವೊಂದರಿಂದ ಎಷ್ಟು ತೀವ್ರವಾಗಿ ಹೊರ ಭಾರತೀಯರ ಗೌರವ ಸಂರಕ್ಷಣೆಯ ಬಗ್ಗೆ ಯೋಚಿಸುತ್ತಿದ್ದರೆಂದು ವ್ಯಕ್ತವಾಗುವುದು:

"ನಿಮ್ಮ ಸ್ತ್ರೀಯರು ಹೊರಗಡೆ ಅನುಭವಿಸುತ್ತಿರುವ ಕಷ್ಟ, ಅಪಮಾನಗಳನ್ನು ನೀವು ಕಾಣಿರಿ. ಅವನ್ನು ನೀವು ಪರಿಹರಿಸಬೇಕಾಗಿದೆ. ಈ ದಿವಸ ನೀವು ಕೇಳಿದ ಮಾತುಗಳು ನಿಮ್ಮಲ್ಲಿ ಬೆಂಕಿಯ ಜ್ವಾಲೆಯನ್ನೆಬ್ಬಿಸಿರಬೇಕು. ಭಾರತೀಯರೆ, ಅದೇ ಬೆಂಕಿ 'ಕರಾರು ಕೂಲಿತನದ Indenture System' ದಹನ ಚಿತೆಯಾಗಲಿ. ಇಂದು ನೀವು ನನ್ನಿಂದ ಮಾತುಗಳನ್ನು ಅಪೇಕ್ಷಿಸುವಿರಾ? ಇಲ್ಲ, ಸಾಧ್ಯವಿಲ್ಲ. ನನಗೆ ಮಾತು ಬರುವುವುದಿಲ್ಲ, ಕಣ್ಣೀರು ಬರುತ್ತದೆ. ಏಕೆಂದರೆ ನಾನು ಸ್ತ್ರೀ. ನೀವು ನಿಮ್ಮ ತಾಯಿ ತಂಗಿಯರಿಗಾದ ಅಗೌರವಕ್ಕೆ ವ್ಯಸನಪಡುವಿರಿ. ಆದರೆ ನನ್ನ ವ್ಯಸನ ಅಷ್ಟೇ ಅಲ್ಲ. ಸ್ತ್ರೀಜಾತಿಗಾದ ಅವಮಾನ ನನಗಾದ ಅವಮಾನವೆಂದು ಭಾವಿಸುತ್ತೇನೆ."

ಭಾರತಕ್ಕೆ ಬಂದಮೇಲೆ ಗಾಂಧೀಜಿ ದಕ್ಷಿಣ ಆಫ್ರಿಕಾಕ್ಕೆ ಹಿಂದಿರುಗಿ ಹೋಗಲಿಲ್ಲ. ಒಮ್ಮೆ ಪುಣೆಯ ಸಸೂನ್ ಆಸ್ಪತ್ರೆಯಲ್ಲಿ ಕಾಯಿಲೆಯಿಂದ ಮಲಗಿದ್ದ ಅವರು ವಿದೇಶಗಳಲ್ಲಿದ್ದ ಭಾರತೀಯರ ಕಷ್ಟವನ್ನು ನೋಡಲಾರದೆ ಅವರ ಬಗ್ಗೆ ಒಂದು ಹೇಳಿಕೆ ಕೊಟ್ಟಿದ್ದರು. ಅದರಲ್ಲಿ ಹೇಳಿದ್ದ ಅತ್ಯಾಚಾರಗಳ ವರ್ಣನೆಯನ್ನೋದಿ ಸರೋಜಿನಿಯ ಮಾತೃಹೃದಯ ಪರಿತಾಪಗೊಂಡಿತು. ಕೆನ್ಯಾದಲ್ಲಿದ್ದ ಭಾರತೀಯರ ಆಹ್ವಾನವನ್ನು ಅಂಗೀಕರಿಸಿ ಅವರು ಅಲ್ಲಿಗೆ ಹೊರಟರು.

ಕೆನ್ಯಾ ಪೂರ್ವ ಆಫ್ರಿಕಾದಲ್ಲಿದೆ. ಅದರ ಆಗುಹೋಗು ಭಾರತೀಯ ವಲಸೆಗಾರರ ಕೈಯಲ್ಲಿತ್ತು. ಅಲ್ಲಿಯ ಜಮೀನನ್ನು ಚೆನ್ನಾಗಿ ಸಾಗುವಳಿ

ಮಾಡುತ್ತಿದ್ದರು. ಬರುತ್ತ ಬರುತ್ತ ವ್ಯಾಪಾರವೂ ಲೇವಾದೇವಿಯೂ ಅವರ ಕೈಸೇರಿತು. ಫರಂಗಿ ವರ್ತಕರೂ ಅವರಿಂದ ಹಣ ಪಡೆದು ವ್ಯಾಪಾರ ಮಾಡಬೇಕಾಯಿತು. ಆದರೆ ಯಾವಾಗ ಫರಂಗಿಯವರು ಅನುಕೂಲಸ್ತ ರಾದರೋ ಆಗ ಭಾರತೀಯರನ್ನು ದ್ವೇಷಿಸತೊಡಗಿದರು. ಭಾರತೀಯ ರನ್ನು ಕೆನ್ಯಾದಿಂದ ಓಡಿಸಿಬಿಡಬೇಕೆಂದು ಯೋಚಿಸಿದರು. ಅದಕ್ಕೆ ಬ್ರಿಟಿಷ್ ಸರ್ಕಾರದ ಬೆಂಬಲವೂ ಇತ್ತು. ಭಾರತೀಯರು ಇದನ್ನು ವಿರೋಧಿಸಿದರು.

ಕೆನ್ಯಾ ತಲುಪಿದ ಸರೋಜಿನಿದೇವಿ ಅಲ್ಲಿನ ಪರಿಸ್ಥಿತಿಯನ್ನು ಸೂಕ್ಷ್ಮವಾಗಿ ಪರಿಶೀಲಿಸಿದರು. ಪರಿಸ್ಥಿತಿ ಬಹು ವ್ಯಸನಕರವಾಗಿತ್ತು. ಪ್ರವಾಸ ಹೊರಟರು. ಭಿನ್ನ ಭಿನ್ನ ಪ್ರಾಂತಗಳಲ್ಲಿ ಪ್ರವಾಸಮಾಡಿ ಭಾರತೀಯರಿಗೆ ಅವರ ಕರ್ತವ್ಯದ ಅರಿವು ಮಾಡಿಕೊಟ್ಟರು. ಭಾರತೀಯ ರಿಗೆ ರೆಕ್ಕೆ ಬಂದಂತಾಯಿತು. ಅವರು ಅಸಹಯೋಗ ಪ್ರಾರಂಭಿಸಿದರು. ತಲೆಗಂದಾಯ (Poll tax) ಕೊಡುವುದಿಲ್ಲವೆಂದು ನಿರಾಕರಿಸಿದರು. ಸರೋಜಿನಿಯವರ ವಾಣಿ ಸಾವಿರಾರು ಹೃದಯಗಳನ್ನು ಹೊಕ್ಕು ಆತ್ಮ ವಿಶ್ವಾಸದ ಅಗ್ನಿಯನ್ನು ಹೊತ್ತಿಸಿತು. ಇಂತಹ ಪರಿವರ್ತನೆಯನ್ನುಂಟು ಮಾಡಿದ ತಾಯಿಗೆ ತಮ್ಮ ಕೃತಜ್ಞತೆಯನ್ನು ಅರ್ಪಿಸುವ ಸಲುವಾಗಿ ಅವರು ದಕ್ಷಿಣ ಅಫ್ರಿಕದ ಭಾರತೀಯ ಕಾಂಗ್ರೆಸ್ಸಿನ ಮೊಂಬಾಸಾ ಅಧಿವೇಶನಕ್ಕೆ ಸರೋಜಿನಿಯನ್ನು ಅಧ್ಯಕ್ಷಿಣಿಯಾಗಿ ಮಾಡಿದರು. ಅಧ್ಯಕ್ಷಸ್ಥಾನದಲ್ಲಿ ಕುಳಿತ ಅವರು ಉತ್ಸಾಹಕರ ಭಾಷಣಮಾಡುತ್ತಾ ಈ ರೀತಿ ಘೋಷಿಸಿದರು :

" ನೀವು ಒಂದೇ ಸ್ವರದಿಂದ ಸರ್ಕಾರಕ್ಕೆ ಈ ರೀತಿ ಉತ್ತರಕೊಡಿ : ಯಾವ ರೀತಿ ಪ್ರಕೃತಿಯ ಸೃಷ್ಟಿಯಲ್ಲಿ ನದಿಗಳು ಹಿಂದಕ್ಕೆ ಹರಿಯುವು ದಿಲ್ಲವೋ ಅದೇ ರೀತಿ ನಿಮ್ಮ ನಿರ್ಣಯದ ನದಿ ಹಿಂದಕ್ಕೆ ಹರಿಯುವುದಿಲ್ಲ ವೆಂದು ! "

ಕೆನ್ಯಾದ ಪ್ರವಾಸ ಮುಗಿದನಂತರ ಅವರು ದಕ್ಷಿಣ ಆಫ್ರಿಕಾದ ನಿಮಂತ್ರಣವನ್ನು ಸ್ವೀಕರಿಸಿ ಅಲ್ಲಿಗೆ ಹೋದರು. ಅಲ್ಲಿ 'ನೇಟಾಲ್ ಆರ್ಡಿನೆನ್ಸ್' ಎಂಬ ಕಾನೂನಿನ ವಿರುದ್ಧ ಆಂದೋಲನ ಹೂಡಿದರು. ಹೋದೆಡೆಯಲ್ಲೆಲ್ಲಾ ಅವರ ಸಿಡಿಲಿನ ಧ್ವನಿ ಮೊಳಗಿತು. ಜನರಲ್ ಸ್ಮಟ್ಸ್, ಕರ್ನಲ್ ಕ್ರಾಸ್‌ವೆಲ್ ಮುಂತಾದ ಉನ್ನತಾಧಿಕಾರಿಗಳ ಭೇಟಿ ಮಾಡಿ ಭಾರತೀಯರ ಹಕ್ಕಿನ ಬಗ್ಗೆ ಬಹು ಬಿರುಸಿನ ವಾದಮಾಡಿದರು. ಎಲ್ಲಿ ಹೋದರಲ್ಲಿ ಅವರಿಗೆ ಉತ್ಸಾಹದ ಸ್ವಾಗತ ದೊರೆಯಿತು. ಭಾರತದ

ಪರವಾಗಿ ಈ ಸಂದೇಶಕೊಟ್ಟರು: "ಸಂಭವವಿದ್ದರೆ ಭಾರತ ಬ್ರಿಟಿಷ್ ಸಾಮ್ರಾಜ್ಯದಲ್ಲಿರಬಹುದು; ಆವಶ್ಯಕತೆ ಬಿದ್ದರೆ ಅದರಿಂದ ಹೊರಗಾಗ ಬಹುದು. ಆದರೆ ಅದರ ನಿರ್ಣಯು ದಕ್ಷಿಣ ಆಫ್ರಿಕದ ಅಧೀನದಲ್ಲಿದೆ ಯೆಂಬುದನ್ನು ಮರೆಯದಿರಿ!"

ಅಲ್ಲಿಗೆ ಹೋಗಿದ್ದಾಗ ಸರೋಜಿನಿಗೆ ಅಲ್ಲಿಯ ಸೇನಾಪತಿ ಹೆರಟೋಜನ ಭೇಟಿಯಾಯಿತು. ಅವನೊಡನೆ ಮಾತನಾಡುತ್ತಿದ್ದಾಗ ಆತ "ದಕ್ಷಿಣ ಆಫ್ರಿಕಾದಲ್ಲಿರುವ ಭಾರತೀಯರು ತಮ್ಮ ಸ್ವದೇಶಕ್ಕೆ ಏಕೆ ಮರಳಬಾರದು" ಎಂದು ಸರೋಜಿನಿಯನ್ನು ಕೇಳಿದ. ಅದಕ್ಕೆ ಸರೋಜಿನಿಯವರ ಉತ್ತರ ಸಿದ್ಧವಾಗಿತ್ತು: "ದಕ್ಷಿಣ ಆಫ್ರಿಕಾದಲ್ಲಿ ನೆಲೆಸಿರುವ ಹಾಲೆಂಡಿನವರಾದ ನೀವು ನಿಮ್ಮ ಸ್ವದೇಶವಾದ ನೆದರ್‌ಲ್ಯಾಂಡ್ಸಿಗೆ ಏಕೆ ಹೋಗಬಾರದು?" ಎಂದು. ಸೇನಾಪತಿ ಕಕ್ಕಾಬಿಕ್ಕಿಯಾದ. ಸರೋಜಿನಿಯವರ ಭಾಷಣ ಎಷ್ಟು ಸ್ವಾರಸ್ಯವೋ ಅವರ ಪ್ರತ್ಯುತ್ತರಗಳೂ ಅಷ್ಟೇ ಸ್ವಾರಸ್ಯವಾಗಿದ್ದುವು.

ದಕ್ಷಿಣ ಆಫ್ರಿಕಾದ ಪ್ರಶ್ನೆ ಇಂದಿಗೂ ಜಟಿಲ ಪ್ರಶ್ನೆಯಾಗಿಯೇ ಉಳಿದಿದೆ. ಪ್ರಪಂಚ ಸಂಸ್ಥೆಯೇ (U. N. O.) ಹೇಳಿದರೂ ಅದರ ಮಾತನ್ನು ಧಿಕ್ಕರಿಸಿ ದಕ್ಷಿಣ ಆಫ್ರಿಕಾ ತನ್ನ ವರ್ಣಭೇದ ನೀತಿಯನ್ನು ಮುಂದುವರಿಸಿಕೊಂಡು ಬಂದಿದೆ. ಎಂದು ಆ ಸಮಸ್ಯೆ ಬಗೆಹರಿಯುವುದೋ ಹೇಳಲು ಸಾಧ್ಯವಿಲ್ಲ!

ದಕ್ಷಿಣ ಆಫ್ರಿಕಾದಿಂದ ಸರೋಜಿನಿ ರೊಢೀಷಿಯಾಕ್ಕೆ ಹೋದರು. ಅಲ್ಲಿಯೂ ಅವರು ಪ್ರವಾಸಿ ಭಾರತೀಯರ ಹಕ್ಕುಬಾಧ್ಯತೆಗೋಸುಗ ಪೂರ್ಣ ಪ್ರಯತ್ನ ಮಾಡಿದರು. ಅವರು ಭಾರತಕ್ಕೆ ಹಿಂದಿರುಗಿದಾಗ ಬೊಂಬಾಯಿನಲ್ಲಿ ಅವರಿಗೆ ಅಪೂರ್ವ ಸ್ವಾಗತ ದೊರೆಯಿತು.

ಸರೋಜಿನಿದೇವಿ ಭಾರತದ ಹೊರಗೆ ಹಾಗೂ ಒಳಗೆ ಹೆಸರಾಂತ ವ್ಯಕ್ತಿಯಾದರು. ಸಿ. ಎಸ್. ಆಂಡ್ರೂಸರು ಗಾಂಧೀಜಿಗೆ ಹೀಗೆ ಬರೆದರು: "ಶ್ರೀಮತಿ ಸರೋಜಿನಿ ನಾಯಿಡು ಅವರ ಭೇಟಿ ಆಫ್ರಿಕಾದಲ್ಲಿರುವ ಭಾರತೀಯರ ಹಿತವೂ ಭಾರತದಲ್ಲಿರುವ ಭಾರತೀಯರ ಹಿತವೂ ಒಂದೇ ಎಂಬುದನ್ನು ಸ್ಥಿರಮಾಡಿದೆ. ಅದಕ್ಕಾಗಿ ಅವರನ್ನು ಪ್ರತಿದಿನವೂ ಆಶೀರ್ವದಿಸುತ್ತಿದ್ದೇನೆ. ಅವರು ಇಲ್ಲಿಗೆ ಬಂದಾಗ ತೋರಿಸಿದ ಪ್ರೀತಿ ಇಲ್ಲಿಯ ಜನರು ಅವರನ್ನು ರಾಣಿಯೋಪಾದಿಯಲ್ಲಿ ಭಾವಿಸುವಂತೆ ಮಾಡಿದೆ."

# ೧೩. ಭಾಗ್ಯವಿಧಾತನ ಹಿಂದೆ

ಭಾರತದಲ್ಲಿ ಸ್ವಾತಂತ್ರ್ಯದ ಬೇಡಿಕೆ ಮುಂದುವರಿಯಿತು. ಸಂಪೂರ್ಣ ಡೊಮಿನಿಯನ್ ಸ್ಟೇಟಸ್ಸನ್ನಾದರೂ ಕೊಡಬೇಕೆಂದು ಮುಖಂಡರ ನಿರ್ಣಯವಾಗಿತ್ತು. ದೇಶದ ಅಭಿಪ್ರಾಯವನ್ನು ಮುಂದಿಡಲು ೧೯೨೯ ನೇ ಡಿಶಂಬರ್ ತಿಂಗಳಿನಲ್ಲಿ ಗಾಂಧೀಜೀಯವರು ಸರೋಜಿನಿದೇವಿಯ ಸಮೇತ ಹೋಗಿ ವೈಸ್‌ರಾಯರನ್ನು ಭೇಟಿಮಾಡಿದರು. ದುಂಡು ಮೇಜಿನ ಸಮ್ಮೇಳನ ಸೇರಿಸಿ ಈ ವಿಚಾರವನ್ನು ಇತ್ಯರ್ಥ ಮಾಡಿ ಎಂದು ಕೇಳಿಕೊಂಡರು. ಆದರೆ ಯಾವುದೂ ಆಗಲಿಲ್ಲ. ಅದೇ ವರ್ಷ ಜವಾಹರ್‌ಲಾಲ್ ನೆಹರೂ ಅವರು ಕಾಂಗ್ರೆಸ್ಸಿನ ಅಧ್ಯಕ್ಷರಾದರು. ಆಗಲೇ ಸರೋಜಿನಿದೇವಿ ಜವಾಹರಲಾಲರ ಭವ್ಯ ಭವಿಷ್ಯವನ್ನು ಕುರಿತು ಸಾರಿದರು. ಆಗ ಬರೆದ ಪತ್ರವೊಂದರಲ್ಲಿ ಇರುವ ಮಾತುಗಳು ಎಷ್ಟು ಅಮೋಘವಾಗಿವೆ ನೋಡಿ:

"ಪ್ರಿಯ ಜವಾಹರ್,

ನಿನ್ನ ಚುನಾವಣೆ ಆದಾಗ ಜನಗಳು ಆನಂದದಲ್ಲಿ ಮುಳುಗಿ ಕರತಾಡನ ಮಾಡಿದರು. ಅದರಿಂದ ನಿನ್ನ ತಂದೆಗಾದ ಆನಂದ ನಿನಗಾದ ವ್ಯಥೆ ಎರಡೂ ಅಪಾರ. ನನ್ನದಾದರೋ ಇವೆರಡರಲ್ಲಿ ಸಮಭಾಗಿಯಾಗುವ ವಿಚಿತ್ರ ಪರಿಸ್ಥಿತಿ. ನಿನ್ನ ಬಗ್ಗೆ ನಾನು ಅನೇಕ ಸಲ ಹೇಳಿದ್ದೇನೆ 'ನೀನು ಭವ್ಯತರವಾದ ಧರ್ಮಬಲಿಯಾಗಬೇಕಾಗಿದೆ. ಇದು ದೇವರ ಮಹೋದ್ದೇಶ' ಎಂದು. ಈ ಮಾತುಗಳನ್ನು ನೆನೆದುಕೊಳ್ಳುತ್ತಾ ನಾನು ನಿನ್ನೆ ರಾತ್ರಿ ಬಹಳ ಹೊತ್ತು ನಿದ್ದೆ ಮಾಡಲಿಲ್ಲ. ನಿನ್ನ ಬಗ್ಗೆ ಜನಗಳು ತೋರಿಸಿದ ಆನಂದವನ್ನು ಕಂಡು ನಿನ್ನ ಕಿರೀಟ ಧಾರಣೆ, ಕ್ರಿಸ್ತನ ಕ್ರೂಶಾರೋಹಣ (Crucification) ಎರಡೂ ಆಯಿತೆಂದು ಭಾವಿಸಿದೆ. ಏಕೆಂದರೆ ಕೆಲವು ಸನ್ನಿವೇಶ ಸಂದರ್ಭಗಳಲ್ಲಿ ಎರಡನ್ನು ಬೇರೆ ಮಾಡುವುದು ಸಾಧ್ಯವಿಲ್ಲ; ಎರಡೂ ಒಂದೆ.... ನಿನ್ನ ಮಹತ್ಕಾರ್ಯದಲ್ಲಿ, ನಿನ್ನ ಮುಂದಿನ ಕಷ್ಟಕರವಾದ ಕೆಲಸದಲ್ಲಿ, ನನ್ನಿಂದ ನಿನಗೇನು ಸಹಾಯಬೇಕಾದರೂ ಕೇಳಿದರೆ ಸಾಕು ಕೊಡಲು ಸಿದ್ಧಳಿರುವೆ. ಏನಿಲ್ಲದಿದ್ದರೂ ನನ್ನ ಪ್ರೀತಿ

ಸೌಹಾರ್ದಗಳನ್ನು ಕೈ ತುಂಬ ನೀಡುವೆ. ಖಲೀಲ್ ಗಿಬ್ರಾನ್ ಹೇಳಿದ್ದಾನೆ: 'ಒಬ್ಬನ ದರ್ಶನ ಮತ್ತೊಬ್ಬನಿಗೆ ಹಾರಲು ರೆಕ್ಕೆಗಳನ್ನು ನೀಡಲಾರದು' ಎಂದು. ಆದರೂ ಒಬ್ಬನ ಅಜ್ಞೇಯ ಆಸೆ ಮತ್ತೊಬ್ಬನಲ್ಲಿ ಕಿಚ್ಚೆಬ್ಬಿಸುತ್ತದೆ. ಆ ಕಿಚ್ಚು ಪ್ರಪಂಚವನ್ನೇ ಬೆಳಗುತ್ತದೆ ಎಂದು ನಾನು ಭಾವಿಸುತ್ತೇನೆ.

ನಿನ್ನ ಪ್ರೀತಿಯ ಸ್ನೇಹಿತೆ ಹಾಗೂ ಅಕ್ಕ,
ಸರೋಜಿನಿ ನಾಯಿಡು."

ಸುಮಾರು ಹತ್ತು ವರ್ಷಗಳನಂತರ ಬರೆದ ಮತ್ತೊಂದು ಪತ್ರ ಇಷ್ಟೇ ಭವ್ಯವಾಗಿದೆ—ಸರೋಜಿನಿ ಮತ್ತು ಜವಾಹರರ ಬಾಂಧವ್ಯದ ಬಗ್ಗೆ :

ಮಹಾತ್ಮರ ಕ್ಯಾಂಪು
ಕಲ್ಕತ್ತ
ತಾ. ೧೩–೧೧–೩೪

" ನನ್ನ ಪ್ರೀತಿಯ ಜವಾಹರ್,

ಇಡೀ ಪ್ರಪಂಚವೇ ತನ್ನ ಸುತ್ತಮುತ್ತ ಪ್ರಕ್ಷುಬ್ಧವಾಗಿರುವಾಗ ಈ ಪುಟ್ಟ ಮನುಷ್ಯ ಬಸಲೆ ಸೊಪ್ಪು, ಬಟಾಣಿಗಳನ್ನು ತಿನ್ನುತ್ತ ಅನಾದರಣೆಯಿಂದ ಕುಳಿತಿದ್ದಾನೆ. ಅವನು ನಿಜವಾಗಿಯೂ ಅಸ್ವಸ್ಥನಾಗಿದ್ದಾನೆ.. ಮೈಯಲ್ಲಿ ಅಸ್ವಸ್ಥತೆ, ಆತ್ಮದ ಆಳದಲ್ಲಿ ಅಸ್ವಸ್ಥತೆ.... ಈತ ತನ್ನ ಕಾಲದ ಏಕೈಕ ವ್ಯಕ್ತಿ, ಬಹು ದುರಂತದ ವ್ಯಕ್ತಿ.... ತನ್ನ ಪತನದ ಕಂಟಿದಲ್ಲಿರುವ ಭಾರತದ ಭಾಗ್ಯವಿಧಾತ.

ನಿನಗೆ—ಭಾರತದ ಮತ್ತೊಬ್ಬ ಭಾಗ್ಯವಿಧಾತನಾದ ನಿನಗೆ—ನಿನ್ನ ಹುಟ್ಟು ಹಬ್ಬದ ಆಶೀರ್ವಾದ ಕಳಿಸುತ್ತಿದ್ದೇನೆ. ಏನೆಂದು ಹರಸಲಿ ನಿನ್ನನ್ನು ? ಸುಖವೆನ್ನಲೆ ? ಶಾಂತಿಯೆನ್ನಲೆ ? ದಿಗ್ವಿಜಯವೆನ್ನಲೇ ?—ಇವೆಲ್ಲ ಅನ್ಯರಿಗೆ ಬಹು ಬೆಲೆಯಾದರೂ ನಿನಗೆ ಸಾಮಾನ್ಯ. ಆದ್ದರಿಂದ, ನನ್ನ ಚಿನ್ನ, ನಿನ್ನ ಸ್ವಾತಂತ್ರ್ಯ ಸಮರದಲ್ಲಿ ನೆಚ್ಚು ಕೆಚ್ಚುಗಳು ನಿನ್ನನು ಎಡೆಬಿಡದೆ ಇರಲಿ ಎಂದು ಹರಸುತ್ತೇನೆ. ಸ್ಥಿರಮನಸ್ಸಿನಲಿ ಮುನ್ನಡೆ—ಒಂಟಿಯಾದರೂ ಚಿಂತೆಯಿಲ್ಲ. ಆದರೆ ಒಂಟಿಯಾಗಲಾರೆ....

ನಿನ್ನ ಪ್ರೀತಿಯ,
ಸರೋಜಿನಿ "

ಹೌದು ! ಆ ಕಿಚ್ಚಿನ ಕಾರಣವಾಗಿ ೧೯೩೦ ನೇ ಜನವರಿ ೨೬ ನೇ ತಾರೀಖು ಕಾಂಗ್ರೆಸ್ಸು ಭಾರತ ಸ್ವಾತಂತ್ರ್ಯದ ಪ್ರತಿಜ್ಞೆ ಸ್ವೀಕರಿಸಿತು. ಪ್ರತಿಜ್ಞೆಯನ್ನು ಸ್ವೀಕರಿಸಿದನಂತರ ಸ್ವಾತಂತ್ರ್ಯ ಹೋರಾಟ ಆರಂಭ ವಾಯಿತು. ಗಾಂಧೀಜಿ ಉಪ್ಪಿನ ಕಾನೂನುಭಂಗ ಪ್ರಾರಂಭಿಸಿದರು. ಉಪ್ಪು ಎಲ್ಲರಿಗೂ ಬೇಕಾದ ವಸ್ತು. ಅಂತಹ ವಸ್ತುವನ್ನು ಯಾರು ಬೇಕಾದರೂ ತಯಾರಿಸಿ ಉಪಯೋಗಿಸಬಹುದು. ಅದರ ಮೇಲೆ ತೆರಿಗೆ ಹಾಕುವುದು ಸರಿಯಲ್ಲವೆಂದು ಗಾಂಧೀಜಿ ವಾದಿಸಿದರು. ಉಪ್ಪಿನ ಸತ್ಯಾಗ್ರಹ ಮಾಡುತ್ತೇವೆಂದು ವೈಸ್‌ರಾಯರಿಗೆ ತಿಳಿಸಿದರು. ಇಡೀ ಭಾರತದಲ್ಲಿ ಶಕ್ತಿ ಸಂಚಾರವಾದಂತಾಯಿತು. ಗೊತ್ತಾದ ದಿನ ಗಾಂಧೀಜಿ ತಮ್ಮ ಸತ್ಯಾಗ್ರಹವನ್ನು ಆರಂಭಿಸಿದರು. ಸರೋಜಿನಿದೇವಿ ಅವರನ್ನು ಹಿಂಬಾಲಿಸಿದರು.

ಸರೋಜಿನಿದೇವಿ ಉರಿಬಿಸಿಲಿನಲ್ಲಿ ಇಪ್ಪತ್ತು ಮೂರು ದಿನಗಳು ಗಾಂಧೀಜಿಯನ್ನು ಹಿಂಬಾಲಿಸಿ ದಂಡಿ ಎಂಬ ಸಮುದ್ರತೀರದಲ್ಲಿದ್ದ ಸ್ಥಳ ವನ್ನು ಮುಟ್ಟಿದರು. ಅರುವತ್ತೊಂದು ವರ್ಷ ವಯಸ್ಸಿನ ಗಾಂಧೀಜಿಯನ್ನು ಐವತ್ತೊಂದು ವರ್ಷ ವಯಸ್ಸಿನ ಸರೋಜಿನಿ ಮಗಳು ತಂದೆಯನ್ನು ಹಿಂಬಾ ಲಿಸುವಂತೆ ಹಿಂಬಾಲಿಸಿದಳು. ದಾರಿಯಲ್ಲಿಯೇ ಅಡುಗೆ, ಮರಗಳ ಕೆಳಗೆ ನಿದ್ದೆ. ಇಂತಹ ಕಷ್ಟಗಳನ್ನು ಅನುಭವಿಸಿಕೊಂಡು ಸರೋಜಿನಿ ಗಾಂಧೀಜಿಯು ವರೊಡನೆ ದಂಡಿಯನ್ನು ಮುಟ್ಟಿದಾಗ ಅವರ ಹಿಂದೆ ಎಪ್ಪತ್ತೈದು ಸಹಸ್ರ ಜನರು ನೆರೆದರು.

ಏಪ್ರಿಲ್ ಆರನೇ ತಾರೀಕು ಪ್ರಾತಃಕಾಲ ಗಾಂಧೀಜಿ ತಮ್ಮ ಸ್ವಹಸ್ತದಿಂದ ಉಪ್ಪು ಮಿಶ್ರಿತ ಮಣ್ಣನ್ನು ಕೈಯಲ್ಲಿ ಹಿಡಿದು ಉಪ್ಪಿನ ಕಾಯದೆ ಭಂಗ ಮಾಡಿದರು. ಗಾಂಧೀಜಿಗೆ ಜಯವಾಗಲಿ ಎಂದು ಸರೋಜಿನಿ ಘೋಷಿಸಿದರು. ನೆರೆದ ಅಸಂಖ್ಯಾತ ಜನಸ್ತೋಮ ಸಮುದ್ರ ವನ್ನು ಮೀರಿಸಿದ ಧ್ವನಿಯಲ್ಲಿ ಆ ಜಯಘೋಷವನ್ನು ಪ್ರತಿಧ್ವನಿಸಿತು. ಉಪ್ಪನ್ನೇ ಉಪಯೋಗಿಸದ ಗಾಂಧೀಜಿ ಉಪ್ಪಿನ ಸತ್ಯಾಗ್ರಹ ಪ್ರಾರಂಭಿ ಸಿದರು. ಗಾಂಧೀಜಿಯವರ ದಸ್ತಗಿರಿಯಾಯಿತು. ವಿಚಾರಣೆಗೊಳ ಪಡಿಸದೆ ಅವರನ್ನು ಎರವಾಡಾ ಜೈಲಿಗೊಯ್ದರು. ಇದನ್ನು ಕಂಡು ಸರೋಜಿನಿ ಈ ರೀತಿ ಹೇಳಿದರು : “ ಶಕ್ತಿವಂತ ಸರಕಾರ ವಿಚಾರಣೆಯಿಲ್ಲದೆ

ಗಾಂಧೀಜಿಯವರನ್ನು ಜೈಲಿಗೆ ಹಾಕಿದೆ. ಇದು ದೊಡ್ಡ ಅಪರಾಧ. ಕಬ್ಬಿಣದ ಸಲಾಕಿಗಳ ಹಿಂದೆ, ಕಲ್ಲು ಗೋಡೆಗಳ ಮಧ್ಯೆ ಸೂಕ್ಷ್ಮ ಶರೀರದ ಮಹಾತ್ಮನನ್ನು ಕೂಡಿಹಾಕಿರುತ್ತೇವೆಂದು ಹೇಳಿಕೊಳ್ಳುವುದು ಒಪ್ಪಲಾರದ ಮಾತು. ಆ ಮನುಷ್ಯ, ಅವನ ಸಂದೇಶ ಎರಡೂ ಒಂದೆ. ಆ ಸಂದೇಶ ಭಾರತದ ಸಜೀವ ಹಕ್ಕು. ಆ ಸಂದೇಶಕ್ಕೆ ಭಾರತದ ಮನಸ್ಸನ್ನು, ಅದೇಕೆ ಇಡೀ ಪ್ರಪಂಚದ ಮನಸ್ಸನ್ನು, ಬದಲಿಸುವ ಶಕ್ತಿಯಿದೆ. ಯಾವ ಸರ್ಕಾರದ ಆಜ್ಞೆಯೂ ಅದನ್ನು ತಡೆಯಲಾರದು."

ಗಾಂಧೀಜಿಯವರ ಕಾರ್ಯವನ್ನು ಸರೋಜಿನಿದೇವಿ ಮುಂದುವರಿಸಿದರು. ಸ್ತ್ರೀಯರ ಸೇನೆಯನ್ನೇ ಕಟ್ಟಿದರು. 'ಆಕೆ ವೈಸರಾಯ್ ಆಗಲೂ ಅರ್ಹಳು' ಎಂದಿದ್ದರು ಗಾಂಧೀಜಿ. ಅಂತಹುದರಲ್ಲಿ ಉಪ್ಪಿನ ಸತ್ಯಾಗ್ರಹದ ನಾಯಕಿಯಾಗಿ ಕಾರ್ಯನಿರ್ವಹಿಸಿದ್ದು ಹೆಚ್ಚಲ್ಲ. ನಾಯಕತ್ವ ವಹಿಸಿದ ಸರೋಜಿನಿ ಧರಸನ ಎಂಬ ಉಪ್ಪಿನ ಕೋಠಿಯಮೇಲೆ ಧಾಳಿ ಮಾಡಬೇಕೆಂದು ತೀರ್ಮಾನಿಸಿದರು. ಅವರಿದ್ದ ಸ್ಥಳದಿಂದ ಐವತ್ತು ಮೈಲಿ ದೂರದಲ್ಲಿತ್ತು ಆ ಉಪ್ಪಿನ ಕೋಠಿ. ಅಲ್ಲಿಗೆ ದಾರಿ ನಡೆದು ಸ್ಥಳವನ್ನು ಮುಟ್ಟಿದರು. ಅವರನ್ನು ಹಿಂಬಾಲಿಸಿ ಸ್ವಯಂಸೇವಕರ ತಂಡವೇ ಹೊರಟಿತ್ತು. ಕೋಠಿಯನ್ನು ಕಾಯುತ್ತಿದ್ದ ಪೋಲೀಸರು ಸರೋಜಿನಿಯನ್ನು ಮುಂದೆ ಹೋಗದಂತೆ ತಡೆದರು. ಸ್ವಯಂಸೇವಕರನ್ನು ಹೊಡೆದರು. ಆದರೂ ಸ್ವಯಂಸೇವಕರು ಜಗ್ಗಲಿಲ್ಲ. ಎಲ್ಲರೂ ಮರಳಹಾದಿಯಲ್ಲಿಯೇ ಕುಳಿತುಬಿಟ್ಟರು. ಮೇಲೆ ಉರಿಬಿಸಿಲು; ಕೆಳಗೆ ಸುಡುವ ಮರಳು. ಎತ್ತ ಹೋಗುವುದಕ್ಕೂ ಪೋಲೀಸರು ಅವಕಾಶ ಕೊಡಲೊಲ್ಲರು. ಬಹು ಚಿಕ್ಕ ವಯಸ್ಸಿನ ಸ್ವಯಂಸೇವಕರು ಬಾಯಾರಿಕೆಯನ್ನು ತಡೆಯಲಾರದೆ ಪರಿತಪಿಸಿದರು. ಅವರನ್ನು ಹಂಗಿಸಲೆಂದೇ ಪೋಲೀಸರು ನೀರು ತುಂಬಿದ ಗಾಡಿಗಳನ್ನು ಅವರ ಮಧ್ಯೆ ನೂಕಿಕೊಂಡು ಹೋದರು. ನೀರನ್ನು ನೋಡಿದ ಮೇಲಂತೂ ಬಾಯಾರಿಕೆ ಹೆಚ್ಚಾಯಿತು. ಒಂದು ತೊಟ್ಟನ್ನೂ ಕೊಡಲಿಲ್ಲ ಪೋಲೀಸರು. ಆದರೆ ಧೈರ್ಯ ತಾಳಿದರು ಸ್ವಯಂಸೇವಕರು. ಸತ್ತರೂ ಚಿಂತೆಯಿಲ್ಲ, ನೀರು ಕೇಳಬಾರದೆಂದು ನಿರ್ಧರಿಸಿದರು. ಅವರ ನಾಯಕಿ ಹಸನ್ಮುಖಿಯಾಗಿ ಕುಳಿತಿದ್ದರು. ಒಮ್ಮೊಮ್ಮೆ ನಗೆತೆರೆಗಳನ್ನು ಎಬ್ಬಿಸಿ ಎಲ್ಲರನ್ನೂ ನಗಿಸುತ್ತಿದ್ದರು. ಪ್ರೀತಿಯ ದೃಷ್ಟಿಯನ್ನು ಬೀರಿ ಸಂತೈಸುತ್ತಿದ್ದರು.

ಅಂತಹ ಕಷ್ಟದಲ್ಲಿಯೂ ಅವರು ಅಷ್ಟೊಂದು ಧೈರ್ಯ ಹಾಗೂ ಶಾಂತತೆಯಿಂದ ಇರುವುದನ್ನು ನೋಡಿ ಎಲ್ಲರಿಗೂ ಆಶ್ಚರ್ಯವಾಯಿತು. ಬಹು ತಂಪಾದ ಸೌಧಗಳಲ್ಲಿ ದಪ್ಪ ದಪ್ಪಪರದೆಗಳ ಮರೆಯಲ್ಲಿ ವಾಸಮಾಡಿದ್ದ ವ್ಯಕ್ತಿ ಅವರು. ಮೆತ್ತನೆಯ ಜಮುಖಾನದ ಮೇಲೆ ತಿರುಗಾಡಿದ ಕಾಲುಗಳು ಅವರವು. ತಂಪಾದ ಪಾನೀಯಗಳನ್ನೂ ಸುಖಭೋಜನವನ್ನೂ ಅನುಭವಿಸಿದ್ದ ಶರೀರ ಅವರದು. ಅಂತಹ ಸುಖದಲ್ಲಿ ಸುಂದರ ಕವಿತೆಗಳನ್ನು ಹಾಡಿದ ಕೋಗಿಲೆ ಅವರು. ಅಂಥವರು ಇಂದು ಸ್ಥಿತಪ್ರಜ್ಞತೆಯಲ್ಲಿ ಉರಿಬಿಸಿಲಿನಲ್ಲಿ ಮರಳಿನ ಮೇಲೆ ಮರಳುಗಾಡಿನ ರಾಣಿಯೋಪಾದಿಯಲ್ಲಿ ಕುಳಿತಿದ್ದರು.

ಒಂದು ಹಗಲು ಒಂದು ರಾತ್ರಿ ಅವರು ತಮ್ಮ ತಂಡದ ಸಮೇತ ಹಾಗೆಯೇ ಕುಳಿತರು. ಎರಡನೆಯ ದಿನ ಎದ್ದು ನಿಂತು ತಮ್ಮ ಅನುಯಾಯಿಗಳನ್ನು ಕುರಿತು ಹೀಗೆ ಹೇಳಿದರು: "ನಾವು ಮುಂದಕ್ಕೆ ಹೆಜ್ಜೆ ಇಟ್ಟರೆ ಪೋಲೀಸರು ನಮ್ಮನ್ನು ಹೊಡೆಯುತ್ತಾರೆ. ಕೋಠಿಯ ಮೇಲೆ ಧಾಳಿ ಮಾಡಿದರೆ ನಮ್ಮನ್ನು ಗಾಯಗೊಳಿಸುತ್ತಾರೆ. ಆದರೆ ನಾವು ಅದಕ್ಕೆ ಪ್ರತೀಕಾರ ಮಾಡಬಾರದು. ಬೀಳುವ ಏಟನ್ನು ತಪ್ಪಿಸಿಕೊಳ್ಳಲೂ ಕೈಯೆತ್ತಬಾರದು. ಇದು ಗಾಂಧೀಜಿಯ ಆಜ್ಞೆ. ಆದನ್ನು ನೀವು ಪಾಲಿಸಲೇಬೇಕು"

ಎಲ್ಲರೂ ಒಂದು ಗಳಿಗೆ ಮೌನವಾಗಿ ಪ್ರಾರ್ಥನೆ ಮಾಡಿದರು. ಎದ್ದು ನಿಂತು ಮೆಲ್ಲಮೆಲ್ಲನೆ ಎಲ್ಲರೂ ಮುಂದೆ ಸಾಗಿದರು. ಉಕ್ಕಿನ ಬಳೆಯುಳ್ಳ ಲಾಠಿಗಳಿಂದ ಪೋಲೀಸರು ಹೊಡೆದರು. ಆದರೆ ಯಾರೂ ಹಿಂಜರಿಯಲಿಲ್ಲ. ಯಾರೂ ಮುಖ ತಿರುಗಿಸಲಿಲ್ಲ. ಮತ್ತೂ ಹೊಡೆದರು. ರಕ್ತ ಮರಳಿನಮೇಲೆ ತೊಟ್ಟಿಕ್ಕಿ ಮರಳನ್ನು ಮುದ್ದೆ ಮುದ್ದೆ ಮಾಡಿತು. ಸರೋಜಿನಿಯವರನ್ನು ಯಾರೋ ಮುಟ್ಟಿದಂತಾಯಿತು. "ನಿಮ್ಮನ್ನು ದಸ್ತಗಿರಿ ಮಾಡಿದ್ದೇನೆ" ಎಂದಿತು ಪೋಲೀಸ್ ಅಧಿಕಾರಿಯೊಬ್ಬನ ಧ್ವನಿ. ಮುಟ್ಟಿದ್ದ ಕೈಯನ್ನು ಕಿತ್ತು ಬಿಸಾಡಿ "ನಾನು ಬರುವೆ.... ಆದರೆ ನನ್ನನ್ನು ಮುಟ್ಟಬೇಡಿ!" ಎಂದು ಗಾಂಭೀರ್ಯದಿಂದ ನುಡಿದ ಸರೋಜಿನಿ ಅಧಿಕಾರಿಯನ್ನು ಹಿಂಬಾಲಿಸಿದರು. ಈ ದೌರ್ಜನ್ಯ ದೃಶ್ಯವನ್ನು ಕಂಡ ವಿಠಲಭಾಯಿ ಪಟೇಲರು "ಭಾರತಕ್ಕೂ ಬ್ರಿಟಿಷ್ ಸಾಮ್ರಾಜ್ಯಕ್ಕೂ ಒಂದಾಣಿಕೆಯ ಮಾತು ಇನ್ನು ಮುಗಿಯಿತು" ಎಂದರು.

ಲಕ್ಷಾಂತರ ಹೆಂಗಸರೂ ಗಂಡಸರೂ ಜೈಲನ್ನು ತುಂಬಿದರು. ಅವರಲ್ಲಿ ದಿನ ತುಂಬಿದ ಗರ್ಭಿಣಿಯರಿದ್ದರು. ಮಕ್ಕಳನ್ನು ತೊರೆದ ಮಾತೆಯರಿದ್ದರು. ಅವರೆಲ್ಲ ಸರೋಜಿನಿಯ ಧೀರವಾಣಿಯನ್ನು ಕೇಳಿ ಅಡುಗೆಮನೆಯನ್ನು ತೊರೆದು ಜೈಲನ್ನು ಸೇರಿದ್ದರು. ಬ್ರಿಟಿಷ್ ಸಾಮ್ರಾಜ್ಯ ತತ್ತರಿಸಿತು. "ಭಾರತದ ಸ್ವಾತಂತ್ರ್ಯ ಸಮರದಲ್ಲಿ ಮಹಿಳೆಯರ ಪಾತ್ರ ಸುವರ್ಣಾಕ್ಷರ ಗಳಲ್ಲಿ ಬರಯತಕ್ಕಂಥಹುದು" ಎಂದು ಗಾಂಧೀಜಿ ಹೇಳಿದ್ದು ಆಗಲೇ.

ಸರ್ಕಾರ ಎಷ್ಟು ದಿನ ತಾನೆ ಲಕ್ಷಾಂತರ ಜನರನ್ನು ಜೈಲಿನಲ್ಲಿಟ್ಟು ಕೊಳ್ಳಲು ಸಾಧ್ಯ? ಸಾಧ್ಯವಾಗಲಿಲ್ಲ. ೧೯೩೧ ರಲ್ಲಿ ಎಲ್ಲರ ಬಿಡುಗಡೆ ಯಾಯಿತು. ಆಗ ಗಾಂಧೀಜಿಗೂ ವೈಸ್‌ರಾಯ್ ಲಾರ್ಡ್ ಇರ್ವಿನ್ನರಿಗೂ ಸಂಧಾನದ ಮಾತುಕತೆಗಳು ನಡೆದು ಒಂದು ಒಡಂಬಡಿಕೆಯಾಯಿತು. ಅದರ ಪ್ರಕಾರ ಎರಡನೇ ರೌಂಡ್ ಟೇಬಲ್ ಸಮ್ಮೇಲನಕ್ಕೆ ಗಾಂಧೀಜಿ ಹೋಗಬೇಕೆಂದು ತೀರ್ಮಾನವಾಯಿತು. ಭಾರತದ ಸ್ತ್ರೀ ಪ್ರತಿನಿಧಿಯಾಗಿ ಸರೋಜಿನಿಯವರು ನೇಮಿಸಲ್ಪಟ್ಟರು. ಎಲ್ಲರೂ ಹಡಗು ಏರಿ ಲಂಡನ್ ಮುಟ್ಟಿದರು. ಸಮ್ಮೇಳನ ಪ್ರಾರಂಭವಾಯಿತು. ಚಕ್ರವರ್ತಿ ಐದನೇ ಜಾರ್ಜರು ಬಕಿಂಗ್ ಹ್ಯಾಂ ಅರಮನೆಯಲ್ಲಿ ರಾಜಭೋಜನ ಏರ್ಪಡಿಸಿದರು. ಭೋಜನಕ್ಕೆ ಆಹ್ವಾನತಂದ ನಿಯೋಗಕ್ಕೆ ಗಾಂಧೀಜಿ "ನಾನು ಬಗ್ಗಿ ನಮ ಸ್ಕರಿಸುವುದಿಲ್ಲ" ಎಂದು ಹೇಳಿಕಳುಹಿಸಿದ್ದರು. ಆ 'ನಗ್ನಫಕೀರ' ದಟ್ಟಿ ಯುಟ್ಟು, ಹಚ್ಚಡಹೊದೆದು, ಚಪ್ಪಲಿಯ ಕಾಲಿನಲ್ಲಿ ಅರಮನೆಯ ಮೆಟ್ಟಲೇರಿ ಅರಮನೆಯನ್ನು ಪ್ರವೇಶಿಸಿದರು. ಸರೋಜಿನಿ ಸಾಕಷ್ಟು ಸೊಗಸಾಗಿಯೇ ಉಡುಪು ಧರಿಸಿದ್ದರು. ರಾಜಭೋಜನದಲ್ಲಿ ಸರೋಜಿನಿ ಚಕ್ರವರ್ತಿಯ ಪಕ್ಕದಲ್ಲಿಯೇ ಮಂಡಿಸಿದರು ಭಾರತದ ಸ್ತ್ರೀ ಪ್ರತಿನಿಧಿಯಾದ ಆಕೆಗೆ ಸಲ್ಲಬೇಕಾದ ಗೌರವ ಸಲ್ಲಿತು. ಭೋಜನ ಮುಗಿದಮೇಲೆ ಯಾರೋ ಒಬ್ಬರು ಕೇಳಿದರಂತೆ ಗಾಂಧೀಜಿಯವರನ್ನು "ಇದೇನು ಇಷ್ಟು ಕಡಮೆ ಉಡುಪುಧರಿಸಿ ಅರಮನೆಗೆ ಹೋಗಿದ್ದಿರಲ್ಲ!" ಎಂದು. ಅದಕ್ಕೆ ಗಾಂಧೀಜಿ "ಚಕ್ರವರ್ತಿ ಯೊಬ್ಬರ ಮೇಲೆ ಇಬ್ಬರಿಗಾಗುವಷ್ಟು ಉಡುಪಿತ್ತು. ಹೀಗಿರುವಾಗ ನನಗೆಲ್ಲಿ ಬರಬೇಕು ಬಟ್ಟೆ?" ಎಂದು ಹಾಸ್ಯದ ಚಟಾಕಿ ಹಾರಿಸಿದರು. ಹಾಸ್ಯದಲ್ಲಿ ಗಂಭೀರ ಅರ್ಥವೂ ಇತ್ತು.

ರೌಂಡ್ ಟೇಬಲ್ ಸಮ್ಮೇಳನ ಹಲವಾರು ದಿನಗಳು ಜರುಗಿತು.

ಆದರೆ ಅದರಿಂದ ಏನೂ ಸಿದ್ಧಿಸಲಿಲ್ಲ. ಬರಿಗೈಯಲ್ಲಿ ಸರೋಜಿನಿ ಗಾಂಧೀಜಿ ಭಾರತಕ್ಕೆ ಹಿಂದಿರುಗಿದರು. ಬಂದು ತಲುಪಿದ ನಾಲ್ಕೈದು ದಿನಗಳಲ್ಲಿ ಇಬ್ಬರನ್ನು ದಸ್ತಗಿರಿ ಮಾಡಿ ಜೈಲಿಗೆ ಹಾಕಿದರು. ಇದಕ್ಕೆ ಮುನ್ನವೇ ವಲ್ಲಭಭಾಯಿ, ನೆಹರೂ ಅವರ ದಸ್ತಗಿರಿಯಾಗಿ ಹೋಗಿತ್ತು.

ಎಲ್ಲರನ್ನೂ ಜೈಲಿಗೆ ಸೇರಿಸಿದನಂತರ ಬ್ರಿಟಿಷ್ ಪ್ರಧಾನಿ ಮ್ಯಾಕ್ಡೊನಾಲ್ಡರು ಅಲ್ಪ ಸಂಖ್ಯಾತರನ್ನೂ ಬಹು ಸಂಖ್ಯಾತರನ್ನೂ ಬೇರೆ ಮಾಡುವ ಜಾತೀಯ ಅವಾರ್ಡನ್ನು (Communal Award) ಘೋಷಿಸಿದರು. ಇದರ ಪ್ರಕಾರ ನಿಮ್ನ ವರ್ಗದವರು ಹಿಂದೂಗಳಿಂದ ಬೇರೆಯೆಂತಲೂ ಅವರು ತಮ್ಮವರೇ ಆದ ಪ್ರತಿನಿಧಿಗಳಿಗೆ ಓಟು ಮಾಡುವ ಅಧಿಕಾರ ಪಡೆದಿರುವರೆಂತಲೂ ಹೇಳಲಾಯಿತು. ಇದನ್ನು ತೀವ್ರವಾಗಿ ವಿರೋಧಿಸಿ ಗಾಂಧೀಜಿ ಜೈಲಿನಲ್ಲಿಯೇ ಆಮರಣಾಂತರ ಉಪವಾಸ ಕೈಕೊಂಡರು. ಅದೇ ಜೈಲಿನಲ್ಲಿ ಅಂದರೆ ಎರವಾಡಾ ಜೈಲಿನಲ್ಲಿದ್ದ ಸರೋಜಿನಿದೇವಿಯನ್ನು ಗಾಂಧೀಜಿಯ ಬಳಿಗೆ ಕರೆದುತಂದರು. ಅವರ ಶುಶ್ರೂಷೆಯಲ್ಲಿ ತೊಡಗಿದರು ಸರೋಜಿನಿ.

ಗಾಂಧೀಜಿಯವರ ಉಪವಾಸದ ಸುದ್ದಿ ಕೇಳಿ ಇಡೀ ದೇಶ ತಲ್ಲಣಗೊಂಡಿತು. ಅನೇಕರು ಅವರಂತೆ ಉಪವಾಸ ಮಾಡಲಾರಂಭಿಸಿದರು. ಗಾಂಧೀಜಿ ಮೂರು ದಿನ ಉಪವಾಸಮಾಡುವುದರೊಳಗೆ ಸಾವಿನ ಬಾಯಿಗೆ ಹತ್ತಿರ ಬಂದಂತೆ ಕಂಡಿತು. ಆದರೆ ಸರೋಜಿನೀ ಮಾತೆಯ ಸನಿಹದಿಂದ ಏಳು ದಿನ ಕಳೆದರು. ಇಡೀ ದೇಶ ತಳಮಳಗೊಂಡಿತು. ಮಹಾತ್ಮನ ಪ್ರಾಣವನ್ನು ಹೇಗಾದರೂ ಮಾಡಿ ಉಳಿಸಿಕೊಳ್ಳಬೇಕೆಂದು ದೇಶದ ನಾನಾ ಪಕ್ಷದ ಮುಖಂಡರು ಯೋಚಿಸಿದರು. ನಿಮ್ನವರ್ಗದ ಮುಖಂಡರಾದ ಡಾ॰ ಅಂಬೇಡಕರರೂ ಸೇರಿದರು. ಎಲ್ಲರೂ ಸೇರಿ ಮ್ಯಾಕ್ಡೊನಾಲ್ಡರ ಅವಾರ್ಡು ಬೇಡ ಎಂದು ತಿರಸ್ಕರಿಸಿದರು. ಅವಾರ್ಡು ಕಸದ ಬುಟ್ಟಿಗೆ ಬಿತ್ತು. ಗಾಂಧೀಜಿ ಉಪವಾಸ ನಿಲ್ಲಿಸಿದರು. ಅಲ್ಲಿಯವರೆಗೂ ಅಂತ್ಯಜರು ಅಸ್ಪೃಶ್ಯರು, ಹೊಲೆಯರು, ಮಾದಿಗರು ಎಂದು ಕರೆಯಲ್ಪಡುತ್ತಿದ್ದ ಜನ 'ಹರಿಜನ' ರಾದರು. ದೇವರ ಸಾನ್ನಿಧ್ಯಕ್ಕೆ ಅವರಿಗೂ ಪ್ರವೇಶ ದೊರೆಯಿತು. ದೇಶದಲ್ಲೆಲ್ಲಾ ಒಂದು ಸಾಮಾಜಿಕ ಆಂದೋಳನವೇ ಆಯಿತು.

ಉಪವಾಸ ಮುಗಿದಮೇಲೂ ಗಾಂಧೀಜಿಯ ಬಿಡುಗಡೆಯಾಗಲಿಲ್ಲ. ಸರೋಜಿನಿಯನ್ನು ಅವರ ವಾರ್ಡಿಗೆ ಕಳುಹಿಸಿಬಿಟ್ಟರು. ಕೊನೆಗೆ ಗಾಂಧೀಜಿಯವರ ಪತ್ನಿಯನ್ನೂ ಅವರ ಬಳಿ ಇರಗೊಡಲಿಲ್ಲ.

ಸರೋಜಿನಿ ಕಮಲಾದೇವಿಚಟ್ಟೋಪಾಧ್ಯಾಯಳ ಸಂಗಡ ಜೈಲುವಾಸವನ್ನು ಹಸನ್ಮುಖಿಯಾಗಿ ಅನುಭವಿಸಿದರು. ತಮ್ಮ ಕೋಣೆಯ ಮುಂದಿದ್ದ ಖಾಲಿ ಜಾಗದಲ್ಲಿ ಹೂ ಬೀಜಗಳನ್ನು ಬಿತ್ತಿದರು. ಅವು ಹುಟ್ಟಿ ಸಸಿಯಾಗಿ ಇನ್ನೇನು ಹೂ ಬಿಡಬೇಕು, ಅಷ್ಟರಲ್ಲಿ ಅವರ ಬಿಡುಗಡೆಯಾಗುವುದೆಂದು ಗೊತ್ತಾಯಿತು. 'ಹೂ ಬಿಡುವುದನ್ನು ನೋಡದೆ ಹೋಗಬೇಕಲ್ಲಾ' ಎಂದು ಸರೋಜಿನಿ 'ಬೇಡಿ, ಇನ್ನೊಂದು ವಾರ ಇಲ್ಲಿಯೇ ಇರಿಸಿ' ಎಂದು ಜೈಲಿನ ಅಧಿಕಾರಿಯನ್ನು ಕೇಳಿಕೊಂಡರು. ಜೈಲಿನವರಿಗೆ ಆಶ್ಚರ್ಯ! ಬಿಡುಗಡೆ ಮಾಡುತ್ತೇವೆಂದರೂ ಬೇಡವೆಂದು ಹೇಳುತ್ತಾರಲ್ಲಾ ಎಂದು. ಆದರೆ ಸರೋಜಿನಿಯ ಬೇಡಿಕೆ ಈಡೇರಲಿಲ್ಲ. ಹೀಗೆ ಅವರು ಇದ್ದಲ್ಲಿಯೇ ಆನಂದ ಪಡುವ ವ್ಯಕ್ತಿ. ಅನ್ಯರನ್ನು ಕುರಿಯುತ್ತಿರಲಿಲ್ಲ ತಮ್ಮ ಮನಸ್ಸಿನ ಆನಂದಕ್ಕೆ. ಜೈಲಿನಲ್ಲಿರಲಿ, ಮರಳುಗಾಡಿನಲ್ಲಿರಲಿ, ತಾಜಮಹಲ್ ಹೋಟಲಿನಲ್ಲಿರಲಿ ಯಾವಾಗಲೂ ಒಂದೇ ರೀತಿ, ಒಂದೇ ಆನಂದ. ಸುಖಪಡುವಾಗ ಸುಖಪಡುತ್ತಿದ್ದರು. ಬೊಂಬಾಯಿಗೆ ಹೋದರೆ ತಾಜ್‌ಮಹಲ್ ಹೋಟಲಿನಲ್ಲೇ ಅವರ ಬಿಡಾರ. ಅವರ ಮಟ್ಟಿಗೆ 'ಜೈಲಿನ ಕಿಟಕಿಗಳು ಬಂದೀಖಾನೆಯನ್ನು ಸೃಷ್ಟಿಸಲಾರವು, ಕಬ್ಬಿಣದ ಸಲಾಕಿಗಳು ಪಂಜರವನ್ನು ಮಾಡಲಾರವು' ಎಂಬ ಮಾತು ಸತ್ಯ.

ಗಾಂಧೀಜಿ ಮತ್ತೆ ೧೯೩೩ ನೇ ಮೇ ಎಂಟನೇ ತಾರೀಕು ಆತ್ಮಪರಿಶುದ್ಧತೆಗೆಂದು ಇಪ್ಪತ್ತೊಂದು ದಿನಗಳ ಉಪವಾಸ ಕೈಕೊಂಡರು. ಇದನ್ನು ಕೇಳಿದ ಸರ್ಕಾರ ಅವರನ್ನು ಬಿಡುಗಡೆ ಮಾಡಿದರು. ಸರೋಜಿನಿಯವರನ್ನೂ ಬಿಡುಗಡೆ ಮಾಡಿದರು. ಅವರ ಶುಶ್ರೂಷೆಯಿಂದ ಗಾಂಧೀಜಿ ಸಾವಿನ ಬಾಯಿಂದ ತಪ್ಪಿಸಿಕೊಂಡರು. ಉಪವಾಸ ಮುಗಿದನಂತರ ಗಾಂಧೀಜಿ ಬೊಂಬಾಯಿನ ಬಳಿ ಸಮುದ್ರತೀರದಲ್ಲಿರುವ ಜುಹು ಎಂಬ ಸ್ಥಳಕ್ಕೆ ವಿಶ್ರಾಂತಿಗಾಗಿ ಹೋದರು. 'ಶೆಟ್ಟಿ ಕುಂತಲ್ಲೇ ಪಟ್ಟಣ' ಎಂದ ಹಾಗೆ ಗಾಂಧಿ ಇದ್ದಲ್ಲಿ ಜನ ಮುತ್ತುತ್ತಿದ್ದರು. ಅವರನ್ನೆಲ್ಲ ಹತ್ತಿರ ಬರದಂತೆ ತಡೆಯುವುದಕ್ಕೆ ಯಾರಿಂದಲೂ ಸಾಧ್ಯವಿರುತ್ತಿರಲಿಲ್ಲ. ಆದರೆ ಹಾಗೆ

ತಡೆಯದಿದ್ದರೆ ಅವರಿಗೆ ವಿಶ್ರಾಂತಿ ಸಿಗುತ್ತಿರಲಿಲ್ಲ. ಆ ಕೆಲಸ ಮಾಡಲು ಸಿದ್ಧರಾದರು ಸರೋಜಿನಿ. ಆಕೆಯೊಬ್ಬರೇ ಯಾರಿಗಾದರು ಏನಾದರೊಂದು ಹೇಳಿ ಹಿಂದಕ್ಕೆ ಕಳುಹಿಸಿ, ಗಾಂಧೀಜಿಯವರಿಗೆ ತೊಂದರೆಯಾಗದಂತೆ ನೋಡಿಕೊಳ್ಳುವ ಶಕ್ತಿ ಪಡೆದಿದ್ದರು. ಅದು ಬಹು ಕಷ್ಟದ ಕೆಲಸ. ಅಲ್ಲದೆ ಅದು ಅಷ್ಟೇ ಸೂಕ್ಷ್ಮವಾದುದೂ ಆಗಿತ್ತು. ಆದರೆ ಸರೋಜಿನಿ ಆ ಕೆಲಸವನ್ನು ನಿರ್ವಹಿಸಿದರು. ತಮ್ಮ ಆರೋಗ್ಯವು ಸರಿಯಾಗಿಲ್ಲದಿದ್ದರೂ ಗಾಂಧೀಜಿಯ ಆರೋಗ್ಯ ಹೆಚ್ಚೆಂದು ಭಾವಿಸಿದರು. ತಾಯಿಹುಲಿ ಮರಿಯನ್ನು ಕಾಯುವಂತೆ ಸರೋಜಿನಿ ಗಾಂಧೀಜಿಯಮೇಲೆ ಕಾವಲು ಕೂತರು. ಹೀಗೆ ಮಗನ ಯೋಗಕ್ಷೇಮವನ್ನು ನೋಡಿಕೊಂಡಂತೆ ತಮ್ಮನ್ನು ನೋಡಿಕೊಳ್ಳುತ್ತಿದ್ದ ಸರೋಜಿನಿಯನ್ನು ಗಾಂಧೀಜಿ 'ಅಮ್ಮಾಜಾನ್' ಎಂಬ ಅಡ್ಡಹೆಸರಿನಿಂದ ಕರೆದರು. ಆ ಹೆಸರನ್ನು ಸಾರ್ಥಕಮಾಡಿಕೊಂಡರು ಸರೋಜಿನಿ. ಅದನ್ನು ನೋಡಿಯೇ ಗಾಂಧೀಜಿಯವರ ಕಾರ್ಯದರ್ಶಿಯಾಗಿದ್ದ ಪ್ಯಾರೆಲಾಲರು ಸರೋಜಿನಿಯನ್ನು "ವರ್ಣಮಯ ವ್ಯಕ್ತಿ—ಪೂಜ್ಯಭಾವವಿಲ್ಲದ ಪೂಜ್ಯೆ The mother irreverent" ಎಂದು ಕರೆದಿದ್ದಾರೆ.

ಉಪವಾಸದಿಂದ ಮುಕ್ತರಾಗಿ ಪೂಜ್ಯೆಯಿಂದ ಹಾರೈಕೆ ಪಡೆದ ಗಾಂಧೀಜಿ ಸಬರ್ಮತಿ ಆಶ್ರಯವನ್ನು ಮುಚ್ಚಿಬಿಟ್ಟರು. ದಂಡಿ ಉಪ್ಪಿನ ಸತ್ಯಾಗ್ರಹಕ್ಕೆ ಹೋಗುವಾಗ ಸ್ವರಾಜ್ಯ ಸಿಗುವವರೆಗೆ ಸಬರ್ಮತಿಗೆ ಹಿಂದಿರುಗುವುದಿಲ್ಲ ಎಂದು ಹೇಳಿ ಹೋಗಿದ್ದರು. ಈಗ ಆಶ್ರಮವನ್ನೇ ಮುಚ್ಚಿಬಿಟ್ಟರು. ಇದ್ದೊಂದು ಮನೆಯ ಕದ ಮುಚ್ಚಿದ ಈ 'ನಗ್ನ ಫಕೀರ' ಮತ್ತೇನು ಅನಾಹುತ ಮಾಡುವನೋ ಎಂದು ಹೆದರಿದ ಸರ್ಕಾರ ಅವರನ್ನು ಪುನಃ ದಸ್ತಗಿರಿ ಮಾಡಿತು. ಮತ್ತೊಮ್ಮೆ ಚಳುವಳಿ ಆರಂಭವಾಯಿತು. ಗಾಂಧೀಜಿಯನ್ನು ಪುನಃ ಬಿಡುಗಡೆ ಮಾಡಿದರು. ಈಗ ಗಾಂಧೀಜಿ ಹರಿಜನೋದ್ಧಾರದ ಪ್ರವಾಸ ಕೈಕೊಂಡರು. ದೇಶದಲ್ಲೆಲ್ಲಾ ತಿರುಗಿ ನಿಧಿ ಶೇಖರಿಸಿದರು.

ಇದಾದನಂತರ ೧೯೩೪ ರಲ್ಲಿ ಖಾದೀ ಪ್ರಚಾರ ಕೈಕೊಂಡರು. ಹೋರಾಟವನ್ನು ಬಿಟ್ಟು ರಚನಾತ್ಮಕ ಕಾರ್ಯದಲ್ಲಿ ಮಗ್ನರಾದರು. ಗಾಂಧೀಜಿ ಒಮ್ಮೊಮ್ಮೆ ಒಗಟಿನ ವ್ಯಕ್ತಿಯಾಗುತ್ತಿದ್ದರು. ಯಾವುದನ್ನು ಏತಕ್ಕೆ

ಮಾಡುತ್ತಾರೆಂದು ಜನಗಳಿಗೆ ಹೋಗಲಿ ಅವರ ಹತ್ತಿರದವರಿಗೇ ಅರ್ಥ ವಾಗುತ್ತಿರಲಿಲ್ಲ. ಕಾಂಗ್ರೆಸ್ಸನ್ನೇ ತ್ಯಜಿಸಿದರು. ಸಾಮೂಹಿಕ ಚಳುವಳಿ ಬೇಡ, ವೈಯಕ್ತಿಕ ಚಳುವಳಿ ನಡೆಯಲೆಂದರು. ಇದರಿಂದ ಮುಖ್ಯವಾಗಿ ದೇಶಕ್ಕೆ ಬೇಕಾಗಿದ್ದ ವಿಶ್ರಾಂತಿಯನ್ನು ಒದಗಿಸಿಕೊಟ್ಟರು. ಮಹಾಸಮರಕ್ಕೆ ಮುನ್ನ ನಡೆಯುವ ಸಿದ್ಧತೆಯಂತೆ ಅವರು ಮೌನವಾಗಿ ಸಿದ್ಧವಾಗುತ್ತಿದ್ದರೋ ಏನೋ !

# ೧೪. ವರ್ಣಮಯ ವ್ಯಕ್ತಿ

ಸರೋಜಿನಿ ನಿಜವಾಗಿಯೂ ವರ್ಣಮಯ ವ್ಯಕ್ತಿ. ಅವರ ಜೀವನವೇ ವರ್ಣಮಯವಾಗಿತ್ತು. ಅವರು ಜೀವನದ ನಾನಾ ಕ್ಷೇತ್ರಗಳಲ್ಲಿ ತಮ್ಮ ವೈವಿಧ್ಯಮಯ ಬಣ್ಣಗಳನ್ನು ಎರಚಿದ್ದಾರೆ. ಕಾಂಗ್ರೆಸ್ ಅಧ್ಯಕ್ಷರಾದವರು ೧೯೩೦ ರಲ್ಲಿ ಅಖಿಲ ಭಾರತ ಸ್ತ್ರೀ ಸಮ್ಮೇಳನದ ಅಧ್ಯಕ್ಷಿಣಿಯರಾದರು. ಬಹಳ ಕಾಲ ಆ ಸ್ಥಾನದಲ್ಲಿದ್ದು ಸ್ತ್ರೀ ಆಂದೋಲನದ ಬಗ್ಗೆ ಕಾರ್ಯ ನಡೆಸಿದರು. ಇಂದು ನೂರಾರು ಜನ ಸ್ತ್ರೀಯರು ಉನ್ನತ ಹುದ್ದೆಗಳಲ್ಲಿ ದ್ದಾರೆ, ರಾಯಭಾರಿಗಳಾಗಿದ್ದಾರೆ, ಮಂತ್ರಿಗಳಾಗಿದ್ದಾರೆ ಮತ್ತು ಪಾರ್ಲಿ ಮೆಂಟಿನಲ್ಲಿದ್ದಾರೆ. ಇದಕ್ಕೆ ಕಾರಣ ಸರೋಜಿನಿದೇವಿಯವರು. ಇಡೀ ಭಾರತದಲ್ಲಿ ಸರೋಜಿನಿ ಮತ್ತು ಮಾರ್ಗರೆಟ್ ಕಜಿನ್ಸರಷ್ಟು ಸ್ತ್ರೀ ಉನ್ನತಿ ಗಾಗಿ ದುಡಿದವರು ಯಾರೂ ಇಲ್ಲ. ಅವರನ್ನು 'ಮಹಿಳೆಯರ ಅಭಿವೃದ್ಧಿ ಗಾಗಿ ದುಡಿದ ಅಗ್ರದ್ವಯ' ರೆಂದು ಹಿಂದುಮುಂದು ನೋಡದೆ ಹೇಳ ಬಹುದು. ಸರೋಜಿನಿಯ ಸ್ಮಾರಕವಾಗಿ ದೆಹಲಿಯಲ್ಲಿ ಅಖಿಲ ಭಾರತ ಸ್ತ್ರೀ ಸಮ್ಮೇಳನ ಒಂದು ಭವನವನ್ನು ತೆರೆಯಿತು. ಆಗ ನೆಹರೂ "ಸರೋಜಿನಿ ನಾಯಿಡುರವರಲ್ಲಿ ಹೆಂಗಸರಿಗೆ ಯೋಗ್ಯವಾದ ಮೃದು ಸ್ವಭಾವವೂ ರಾಷ್ಟ್ರೀಯ ಜೀವನವನ್ನು ರೂಪಿಸಲು ಬೇಕಾದ ಕೆಚ್ಚೆದೆಯೂ ಸರಿಸಮಾನ ವಾಗಿದ್ದುವು" ಎಂದು ಹೇಳಿದರು.

೧೯೩೩ ರಲ್ಲಿ ಮತ್ತೊಂದು ಗೌರವ ಸರೋಜಿನಿಯವರಿಗೆ ಒದಗಿತು. ಆ ವರ್ಷ ಪಿ. ಇ. ಎನ್. (P. E. N.) ಎಂಬ ಸಾಹಿತಿಗಳ ಸಂಸ್ಥೆ ಸ್ಥಾಪಿತ ವಾಯಿತು. ಇದು ಕವಿಗಳ ಮತ್ತು ನಾಟಕ ಕರ್ತರ (Poets and Play-writes-P), ಸಂಪಾದಕರ ಮತ್ತು ಪ್ರಬಂಧಕಾರರ (Editors and Essayists-E) ಮತ್ತು ಕಾದಂಬರಿಕಾರರ (Novelists-N) ಒಕ್ಕೂಟ. ಇದು ಅಂತರರಾಷ್ಟ್ರೀಯ ಸಂಸ್ಥೆ. ಈ ಸಂಸ್ಥೆಯ ಭಾರತ ಶಾಖೆಯ ಉಪಾ ಧ್ಯಕ್ಷರಾಗಿ ಸರೋಜಿನಿ ಸಂಸ್ಥೆಯ ಆರಂಭದಲ್ಲಿಯೇ ಆರಿಸಲ್ಪಟ್ಟರು. ಅಧ್ಯಕ್ಷರಾಗಿ ರವೀಂದ್ರನಾಥ ಠಾಕೂರರು ಆರಿಸಲ್ಪಟ್ಟರು. ಈ ಸಂಸ್ಥೆಯ ಅಧ್ಯಕ್ಷ ಉಪಾಧ್ಯಕ್ಷರಾಗುವುದು ಬಹು ದೊಡ್ಡ ಗೌರವ. ೧೯೩೩ ರಲ್ಲಿ ಅದರ

8

ಉಪಾಧ್ಯಕ್ಷರಾದ ಸರೋಜಿನಿ ೧೯೪೧ ರಲ್ಲಿ ರವೀಂದ್ರನಾಥರು ತೀರಿಕೊಂಡ ಮೇಲೆ ಅದರ ಅಧ್ಯಕ್ಷರಾಗಿ ಆರಿಸಲ್ಪಟ್ಟರು. ಅವರು ೧೯೪೯ ರಲ್ಲಿ ತೀರಿಕೊಳ್ಳುವ ವರೆಗೂ ಅಧ್ಯಕ್ಷರಾಗಿದ್ದರು. ಅವರನ್ನು ಅಧ್ಯಕ್ಷರನ್ನಾಗಿ ಆರಿಸುವಾಗ ಮುಂಬಯಿ ವಿಶ್ವವಿದ್ಯಾನಿಲಯದ ಉಪಕುಲಪತಿ ಆರ್. ಪಿ. ಮಸಾನಿಯ ವರು ಸರೋಜಿನಿಯ ಮೇಲ್ಮೆಯನ್ನು ಕುರಿತು ಹೀಗೆ ನುಡಿದರು: "ನಮ್ಮ ಸಂಸ್ಥೆಯಲ್ಲಿ ಸರೋಜಿನಿಯ ಮಟ್ಟಕ್ಕೆ ಬರುವವರು ಯಾರಾದರೂ ಇದ್ದಾ ರೆಯೇ? ಇಲ್ಲ. ಸಾರಸ್ವತ ಪ್ರಪಂಚದಲ್ಲಿ ನಮ್ಮನ್ನು ಪ್ರತಿನಿಧಿಸಲು ಅವರಿ ಗಿಂತ ದೊಡ್ಡವರು ಯಾರಿದ್ದಾರೆ? ಇಲ್ಲ. ಪ್ರತಿಭಾನ್ವಿತ ಕವಯಿತ್ರಿಯಾಗಿ, ಬಹು ಸೊಗಸಾದ ವಾಗ್ಮಿಯಾಗಿ, ಭಾರತದ ಸಂಸ್ಕೃತಿಯನ್ನು ಸರಿಯಾಗಿ ನಿರೂಪಿಸಬಲ್ಲ ಉನ್ನತ ವ್ಯಕ್ತಿಯಾಗಿ, ಗಾಢ ರಾಷ್ಟ್ರಪ್ರೇಮಿಯಾಗಿ, ಸುಧಾ ರಣೆಯಲ್ಲಿ ಎತ್ತಿದ ಕೈಯಾಗಿ, ಕೊನೆಯದಾಗಿ ಭಾರತ ದೇಶದ ನಡೆನುಡಿಗಳ ಸುಸಂಸ್ಕೃತ ಮುಖಂಡರಾಗಿ ಭಾರತದ ಕೀರ್ತಿಯನ್ನು ಬೆಳಗಿದವರು ಅವರಿ ಗಿಂತ ಹೆಚ್ಚಿನವರು ಇಂದು ಯಾರಿದ್ದಾರೆ? ಇಲ್ಲ. ಇಂದು ಭಾರತದಲ್ಲಿ ಮಹಾತ್ಮ ಗಾಂಧಿಯನ್ನು ಬಿಟ್ಟರೆ ಉಳಿದೆಲ್ಲರನ್ನೂ ಮೀರಿ ನಿಲ್ಲುವ ವ್ಯಕ್ತಿ ಮತ್ತಾರಾದರೂ ಇದ್ದಾರೆಯೇ? ಇಲ್ಲ." ರವೀಂದ್ರನಾಥರ ಸ್ಥಾನವನ್ನು ಅಲಂಕರಿಸಬೇಕಾದರೆ ಅದೇ ಕ್ಷೇತ್ರದಲ್ಲಿ ಹೆಸರಾದಂಥ ವ್ಯಕ್ತಿ ಬೇಕಾಗಿತ್ತು. ಅದಕ್ಕೋಸ್ಕರವೇ ಪ್ರೊಫೆಸರ್ ಎಂ. ಡಿ. ಅಲ್ಟೇಕರ್ ಎಂಬುವರು ಆ ಸಂದರ್ಭದಲ್ಲಿ "ನಾವು ಭಾರತದ ಕಾಜಾಣದ (Skylark) ಜಾಗದಲ್ಲಿ ಕೋಗಿಲೆಯನ್ನು (Nightingale) ಕುಳ್ಳಿರಿಸುತ್ತಿದ್ದೇವೆ' ಎಂದು ಹೇಳಿದ್ದು.

ಅಧ್ಯಕ್ಷತೆಯ ಗೌರವವನ್ನು ಸ್ವೀಕರಿಸುತ್ತಾ ಸರೋಜಿನಿ ನಮ್ರತೆಯ ನುಡಿಗಳನ್ನಾಡಿದರು. "ನಾನು ಕೇವಲ ನಿಮಿತ್ತ ಮಾತ್ರ. ನಾನು ಕೊಳಲು, ಗಾಂಧಿ ನನ್ನ ಕೃಷ್ಣ" ಎಂದು ತಮಗೆ ದೊರೆತ ಗೌರವಕ್ಕೆ ಕಾರಣವನ್ನು ಸೂಚಿಸಿದರು. ಪಿ. ಇ. ಎನ್. ಅಧ್ಯಕ್ಷಿಣಿಯಾಗಿದ್ದಾಗ ಅವರು ಬಹು ಉಪ ಯುಕ್ತವಾದ ಭಾಷಣಗಳನ್ನು ಮಾಡಿದರು. ಒಮ್ಮೆ ಅವರು ಸಾಹಿತ್ಯದ ಸ್ಥಾನವನ್ನು ಕುರಿತು ಹೀಗೆ ಹೇಳಿದರು: "ಪ್ರಪಂಚದ ನಿಜವಾದ ಶಾಸನ ಕಾರರೆಂದರೆ ಸರಸ್ವತಿಯ ಸುಪುತ್ರರು. ಯುಗಯುಗಗಳಲ್ಲಿ ಶಾಶ್ವತವಾದು ದೆಂದರೆ ಬರೆದ ಮಾತು, ನುಡಿದ ಮಾತು. ದೊರೆಗಳು ಮರೆತುಹೋಗುತ್ತಾರೆ. ಶಾಸನಕಾರರು, ಯೋಧರು, ಪುರೋಹಿತರು ಸ್ಮೃತಿಯಿಂದ ಜಾರಿ ಹೋಗು

ಕ್ಕಾರೆ. ಅಥವಾ ಅವರು ಜ್ಞಾಪಕದಲ್ಲಿದ್ದರೆ ಅಲ್ಲಿ ಇಲ್ಲಿ ಅಗೆದು ತೆಗೆದ ಹಳೆಯ ಮೂರ್ತಿ ಅಥವಾ ನಾಣ್ಯಗಳಲ್ಲಿ ಅಲ್ಪ ಸ್ವಲ್ಪ ಜ್ಞಾಪಕ ಬರಬಹುದು. ಆದರೆ ಪ್ರಪಂಚದಲ್ಲಿ ನಿಜವಾಗಿಯೂ ಶಾಶ್ವತವಾದುದೆಂದರೆ ದಾರ್ಶನಿಕರ ದರ್ಶನ, ಹಾಡಿದವರ ಹಾಡು ಮತ್ತು ಮಾನವ ಹೃದಯದ ಭಾವಗಳನ್ನೂ ಆಶೋತ್ತರಗಳನ್ನೂ ಶಬ್ದದಲ್ಲಿ ಸೃಷ್ಟಿಸಿದ ಸಾಹಿತ್ಯ ಮಾತ್ರ. ಪ್ರಪಂಚಕ್ಕೆ ಶಾಂತಿ ದೊರೆಯುವುದು ಸತ್ಯ ಸೌಂದರ್ಯ ಸೌಶೀಲ್ಯಗಳ ಪಂಕ್ತಿಗೆ ಸೇರಿದ ಮಹಾ ಸ್ತ್ರೀ ಪುರುಷರಿಂದ ಮಾತ್ರ. ಆ ಸ್ತ್ರೀಪುರುಷರು ಮಾಡಿದ ಸೃಷ್ಟಿ ಮಾತಿನಲ್ಲಿ ಕಾಣಬಹುದು, ಬರೆಹದಲ್ಲಿ ಕಾಣಬಹುದು, ಸರಳ ಗದ್ಯದಲ್ಲಿರಬಹುದು, ವೀರ್ಯವತ್ತಾದ ಕಾವ್ಯದಲ್ಲಿರಬಹುದು. ಅದು ಮಾನವನ ಹೃದಯವನ್ನು ತಾಕಿ ಅಲ್ಲಿ ಪ್ರತಿಧ್ವನಿಯನ್ನೆಬ್ಬಿಸುತ್ತದೆ. ಅಂಥಾದ್ದರಿಂದ ದೊರೆಯುವ ಶಾಂತಿಯೇ ಶಾಶ್ವತ ಶಾಂತಿ. ಉಳಿದುದೆಲ್ಲ ಬರಿ ಭ್ರಾಂತಿ"

ಮತ್ತೊಮ್ಮೆ ಅವರು ಜಾನಪದ ಸಾಹಿತ್ಯದ ಮೇಲೆ ಮಾಡಿದ ಭಾಷಣ ಬಹು ಬೋಧಪ್ರದವಾಗಿತ್ತು : "ಜನತೆಯ ನಾಡಿಯನ್ನು ಜನಪದ ಗೀತೆಗಳಲ್ಲಿ ನೋಡಬೇಕು. ಯಾವ ದೇಶದಲ್ಲಿಯೇ ಆಗಲಿ ಜನತೆಯ ಹೃದಯವನ್ನು ತಿಳಿಯಬೇಕಾದರೆ ಜಾನಪದ ಗೀತೆಗಳನ್ನು ಹೊಕ್ಕು ನೋಡಬೇಕು. ಎಲ್ಲಾ ಜನತೆಗಳ ಜಾನಪದ ಗೀತೆಗಳನ್ನು ಒಂದೇ ಭಾಷೆಗೆ ಅನುವಾದಿಸಿ ನೋಡಿದರೆ ಆಗ ಗೊತ್ತಾಗುವುದು ಪ್ರಪಂಚದ ಎಲ್ಲಾ ಜನತೆಯ ಮನಸ್ಸು ಮೂಲತ: ಒಂದೇ ಎಂದು ಮಾನವರೆಲ್ಲರ ಬೇರು ಒಂದೇ, ಎಂದು. ಅವರನ್ನು ಬೇರ್ಪಡಿಸುವುದು ಅಸಾಧ್ಯ ಎಂಬುದು ನಮಗೆ ಅರಿವಾದಾಗ ರೋಮಾಂಚವಾಗುವುದು. ಮಾನವ ಜನಾಂಗವನ್ನು ಕೊಂಬೆಗಳಲ್ಲಿ ಬೇರ್ಪಡಿಸಬಹುದೇ ಹೊರತು ಬುಡದಲ್ಲಿ ಬೇರ್ಪಡಿಸುವುದು ಸಾಧ್ಯವಿಲ್ಲ."

ಹೀಗೆ ಸರೋಜಿನಿ ನಾನಾ ಕ್ಷೇತ್ರಗಳಲ್ಲಿ ತಮ್ಮ ಪ್ರಭೆಯನ್ನು ಬೀರುತ್ತ ಬಂದರು. ಗಾಂಧೀಜಿಯವರ ಕಾರ್ಯದಲ್ಲಿ, ಅವರ ಯೋಜನೆಗಳಲ್ಲಿ ಸರೋಜಿನಿದೇವಿ ಮುಖ್ಯಪಾತ್ರ ವಹಿಸಿದರು. ಕಾಂಗ್ರೆಸ್ಸಿನ ಕಾರ್ಯಕಾರಿ ಸಮಿತಿಯಲ್ಲಿ ಸರೋಜಿನಿ ಎಂದರೆ ಎಲ್ಲರೂ ಅವರ ಮಾತಿಗೆ ಕಿವಿಗೊಡುತ್ತಿದ್ದರು. ಕಷ್ಟದ ಪರಿಸ್ಥಿತಿಯೊದಗಿ ಎಲ್ಲರೂ ತಲೆ ಕೆರೆದುಕೊಳ್ಳುವಾಗ ಸರೋಜಿನಿ ಆ ಕಷ್ಟವನ್ನು ಸುಲಭವಾಗಿ ಪರಿಹರಿಸುತ್ತಿದ್ದರು.

ಪರಿಸ್ಥಿತಿ ಬಿಗಡಾಯಿಸಿ ಒಬ್ಬರೊಬ್ಬರಿಗೆ ಮುಖ ಮುನಿಸು ಆದಾಗ ಸರೋಜಿನಿ ತಮ್ಮ ಹಾಸ್ಯದಿಂದ ಎಲ್ಲರನ್ನೂ ನಗಿಸಿ ಆನಂದ ವಾತಾವರಣವನ್ನು ಉಂಟುಮಾಡುತ್ತಿದ್ದರು. ಸರ್ದಾರ್ ಪಟೇಲರು ಹೇಳಿದಂತೆ "ಅವರ ಮುಖದಲ್ಲಿ ನಗು ಬುಗ್ಗೆ ಬುಗ್ಗೆಯಾಗಿ ಉಕ್ಕುತ್ತಿತ್ತು. ಒಂದು ಕೋಣೆಯನ್ನೋ ಅಥವಾ ಒಂದು ಸಭೆಯನ್ನೋ ಪ್ರವೇಶಿಸಿದರೆ ನೂರಾರು ದೀಪಗಳು ಒಂದೇ ಸಲ ಹತ್ತಿಕೊಂಡಂತಾಗುತ್ತಿತ್ತು. ಅವರು ಹೋದೆಡೆಯಲ್ಲೆಲ್ಲಾ ಬೆಳಕು ಹೊಳಪನ್ನು ಬೀರುತ್ತಿದ್ದರು" ಒಟ್ಟಿನಲ್ಲಿ ಅವರಿಲ್ಲದ ಕಾಂಗ್ರೆಸ್ಸಿನ ಸಭೆಗಳಲ್ಲಿ ಕಳೆಯುತ್ತಿರಲಿಲ್ಲ.

ಇಷ್ಟೇ ಅಲ್ಲ. ಕಾಗದ ಪತ್ರಗಳಲ್ಲಿಯೂ ಸರೋಜಿನಿದೇವಿ ಬೇಜಾರಾದ ಜೀವಿಗಳಿಗೆ ಬೇಜಾರು ಕಳೆಯುವಂತೆ ವಿನೋದವಾಗಿ, ಹಾಸ್ಯವಾಗಿ ಬರೆಯುತ್ತಿದ್ದರು. ೧೯೩೬ ನೇ ಅಕ್ಟೋಬರ್ ೧೫ ರಲ್ಲಿ ನೆಹರು ಅವರಿಗೆ ಬರೆದ ಪತ್ರವನ್ನು ಓದಿ :

"ನನ್ನ ಪ್ರೀತಿಯ ಜವಾಹರ್,

ನಿನ್ನ ಬಗ್ಗೆ ನಾನಾ ಬಗೆಯ ಸಂತೋಷದ ಸುದ್ದಿಗಳು ಬರುತ್ತಿವೆ. ನಿನ್ನ ಆರೋಗ್ಯ ಚೆನ್ನಾಗಿ ಸುಧಾರಿಸಿದೆಯೆಂದು ಕೇಳಿ ನನಗೆ ಹಿಡಿಸಲಾರದ ಸಂತೋಷ. ಇಲ್ಲಿ ನಾನು ದಿನ ಬೆಳಗೆದ್ದರೆ ಸಂಚಾರ ಮಾಡುತ್ತ ಸಣ್ಣ ಪುಟ್ಟ ವ್ಯಾಜ್ಯಗಳನ್ನು ಪರಿಹರಿಸಿ ಸಾಕಾಗಿದೆ. ನಾನೂ ನಿನ್ನಂತೆ ಸಮುದ್ರದಾಚೆ ಹೋಗಿದ್ದರೆ ಚೆನ್ನಾಗಿತ್ತೆನಿಸುತ್ತದೆ. ಈಗ—ಈ ಸಮಯದಲ್ಲಿ—ನನಗೆ ಮೈ ಸ್ವಸ್ಥವಿಲ್ಲ. ಪದ್ಮಜ ಬಹು ಚೆನ್ನಾಗಿದ್ದಾಳೆ. ಲೀಲಾಮಣಿಗೆ ಆಪರೇಷನ್ ಆಯಿತು. ಇನ್ನೂ ಹಾಸಗೆಯಲ್ಲಿದ್ದಾಳೆ. ಹೆಡಜಿ ಹಾಜಿಗಳು ಬೇಜಾರಾಗಿ ಹಿಂದಿರುಗಿದರು. ಮೌಲಾನರ ಮಾತು ಜಾಸ್ತಿಯಾಗಿದೆ. ಸೌದರ ಬಗ್ಗೆ ಅನಾವಶ್ಯಕವಾದ ಮಾತುಗಳನ್ನಾಡುತ್ತಾರೆ. ಷಾಯೇಬ ಅಷ್ಟೇನೂ ಸುಖವಾಗಿಲ್ಲ. ಬೊಂಬಾಯಿನಲ್ಲಿ ಏನಾದರೂ ವ್ಯಾಪಾರ ಮಾಡಬೇಕೆಂದು ಯೋಚಿಸುತ್ತಿದ್ದಾನೆ. ಕಳೆದ ಹಲವಾರು ತಿಂಗಳಿನಿಂದ ಅನ್ಸಾರಿ ರಾಜತ್ವದ ಬಗ್ಗೆ ಹಾಲು ಹಿಂಗಿದ ನರ್ಸಿನಂತಿದ್ದಾನೆ. ಬಹು ಬೇಜಾರಾದಂತೆ ಕಾಣುತ್ತಿದ್ದಾನೆ. ಥರ್ಮಾಮೀಟರು, ಮುಕ್ಕಳಿಸುವ ದ್ರವ ಮತ್ತು ಬ್ಯಾಂಡೇಜುಗಳ ಮಧ್ಯೆ ಖೈದಿಯಾಗಿದ್ದಾನೆ—ಅವುಗಳೇ

ತನ್ನ ದಾಸ್ಯದ ಏಕೈಕ ಗೆಳೆಯರೋ ಎಂಬಂತೆ.... ನೀನು ನನ್ನ ಬರೆಹ ವನ್ನು ಓದಬಲ್ಲೆಯೋ ಹೇಗೊ ಕಾಣೆ. ನೋವಿನಿಂದ ನನ್ನ ಮುಂಗೈ ಹಿಡಿದುಕೊಂಡಿದೆ. ಇಕ್ಬಾಲರ ಮಾತಿನಲ್ಲಿ ಹೇಳುವುದಾದರೆ 'ಮೈ ಸರಾಫ್ ದರ್ದ್ ಹೈ'

ಜವಾಹರ್, ನಮಸ್ಕಾರ.... ಹುಡುಗಿಯರಿಗೆ—ತಾಯಿ ಮತ್ತು ಮಗಳಿಗೆ—ನನ್ನ ಆಶೀರ್ವಾದ.

ನಿನ್ನ ಪ್ರೀತಿಯ ಅಕ್ಕ
ಸರೋಜಿನಿ."

ಸರೋಜಿನಿಯ ಸಮ್ಮುಖದಲ್ಲಿ ನೆಹರೂ ತಮ್ಮನಂತೆ ವರ್ತಿಸುತ್ತಿದ್ದರು, ತುಂಟಾಟ ಮಾಡುತ್ತಿದ್ದರು. ಆನಂದ ಭವನದಲ್ಲಿ ಬೆಳಗಿನ ತಿಂಡಿಗೆ ಕುಳಿತಾಗ ನೆಹರೂ ಅಕ್ಕನನ್ನು ಹಂಗಿಸಲು 'ಭಾರತದ ಕೋಗಿಲೆಯೇ, ಸ್ವಲ್ಪ ಹೊತ್ತು ಸುಮ್ಮನಿರುವೆಯಾ' ಎಂದರೆ, ಸರೋಜಿನಿ ಅದಕ್ಕೆ ಮಾರುತ್ತರ ವಾಗಿ 'ಭಾರತದ ಅನರ್ಘ್ಯರತ್ನವೇ, ದಯವಿಟ್ಟು ಇತ್ತ ಸಕ್ಕರೆಯಬಟ್ಟಲು ಕೊಡುವೆಯಾ?' ಎಂದು ಹೇಳುವರು.

ಸರೋಜಿನಿ ಎಲ್ಲರನ್ನೂ ಗೇಲಿ ಮಾಡುತ್ತಿದ್ದರು. ಸರ್ದಾರ್ ಪಟೇಲ ರನ್ನು Bardoli Bull —ಬಾರ್ಡೋಲಿಯ ಬಸವ ಎಂದು ಕರೆಯುತ್ತಿದ್ದರು. ಆಚಾರ್ಯ ಕೃಪಲಾನಿಯವರನ್ನು ಬೆದರು ಬೊಂಬೆ (ಅಂದರೆ ಹೊಲ ಗದ್ದೆ ಗಳಲ್ಲಿ ಕಾಗೆ ಮುಂತಾದ ಹಕ್ಕಿ ಪಕ್ಷಿಗಳನ್ನು ಬೆದರಿಸಲು ನಿಲ್ಲಿಸುವ ಮನು ಷ್ಯಾಕಾರದ ಬೊಂಬೆ) ಎಂದು ನಗಿಸುತ್ತಿದ್ದರು. ಒಮ್ಮೊಮ್ಮೆ ನೆಹರೂ ರವರನ್ನು Prince Charming— ಮೋಹನದ ರಾಜಕುಮಾರ ಎಂದು ಕರೆದು ಪೀಡಿಸುತ್ತಿದ್ದರು.

ಗಾಂಧೀಜಿಯನ್ನಂತೂ ಪೀಡಿಸಿದ್ದೂ ಪೀಡಿಸಿದ್ದೆ. ಆ ಮುದುಕನಿಗೂ ಈ ಮುದುಕಿಗೂ ಮಧ್ಯೆ ಹಾರುತ್ತಿದ್ದ ಹಾಸ್ಯದ ಚಟಾಕಿಗಳಿಗೆ ಲೆಕ್ಕವೇ ಇರುತ್ತಿರಲಿಲ್ಲ. ೧೯೩೬ರಲ್ಲಿ ಗಾಂಧೀಜಿ ಮಧ್ಯಪ್ರಾಂತದಲ್ಲಿದ್ದ ವಾರ್ಧಾ ಎಂಬ ಹಳ್ಳಿಯಲ್ಲಿ ತಮ್ಮ ಹೊಸ ಆಶ್ರಮವನ್ನು ಸ್ಥಾಪಿಸಿದರು. ಸರೋಜಿನಿಯ ವರು ಆ ಆಶ್ರಮದ ನಿವಾಸಿಯಾಗದಿದ್ದರೂ ಅದರ ಆಗುಹೋಗುಗಳಲ್ಲಿ ಬಹು ಆಸಕ್ತಿ ವಹಿಸಿದರು. ಆಗಾಗ್ಗೆ ಹೋಗಿ ಆ ಮುದುಕನನ್ನು ಗೇಲಿ ಮಾಡದಿದ್ದರೆ ಅವರಿಗೆ ಸಮಾಧಾನವಾಗುತ್ತಿರಲಿಲ್ಲ. ಗಾಂಧೀಜಿಯನ್ನು

ಮಿಕಿ ಮೌಸ್–ಸುಂಡಿಲಿ ಎಂದು ಕರೆದು ಹಾಸ್ಯ ಮಾಡುತ್ತಿದ್ದರು. ಗಾಂಧೀಜಿ ಒಮ್ಮೆ ಸರೋಜಿನಿಯ ವೈಯ್ಯಾರದ ಉಡುಪನ್ನು ನೋಡಿ 'ನವವಧುವಿನಂತೆ ಕಾಣುವೆಯಲ್ಲ' ಎಂದರಂತೆ. ಅದಕ್ಕೆ ಸರೋಜಿನಿ 'ಹೌದು, ನವ ವರನಿಗೆ ತಕ್ಕ ನವ ವಧು' ಎಂದು ಮಾರುತ್ತರ ಕೊಟ್ಟು ನೆರೆದವರನ್ನೆಲ್ಲಾ ನಗಿಸಿದರಂತೆ.

ಹಾಸ್ಯಕ್ಕೆ, ವಿನೋದಕ್ಕೆ ಎತ್ತಿದ ಕೈ ಸರೋಜಿನಿ. ಸ್ವಾತಂತ್ರ್ಯ ಬಂದಮೇಲೆ ಭಾರತದ ಪ್ರಥಮ ಗೌರ್ನರ್ ಜನರಲ್ ಆಗಿ ಚಕ್ರವರ್ತಿ ರಾಜಗೋಪಾಲಾಚಾರಿಯವರು ನೇಮಿಸಲ್ಪಟ್ಟರಷ್ಟೆ. ಆಗ ಅವರು ಸರೋಜಿನಿಯವರಿಗೆ ದೆಹಲಿಯಲ್ಲಿದ್ದ ತಮ್ಮ ನಿವಾಸವಾದ ರಾಷ್ಟ್ರಭವನ ವನ್ನು ತೋರಿಸುತ್ತ ಹೋದರಂತೆ. ಒಂದೊಂದು ಕೋಣೆಗೂ ಹೋಗಿ ಅಲ್ಲಿದ್ದುದನ್ನು ವಿವರಿಸಿದರು. ಹೀಗೆ ತೋರಿಸುತ್ತ ಒಂದು ಮಲಗುವ ಕೋಣೆಗೆ ಬಂದರು. ಆ ಭವ್ಯವಾದ ಕೋಣೆಯಲ್ಲಿ ಸುಪ್ಪತ್ತಿಗೆ ಇತ್ತು. ಆದರ ಕಡೆ ಕೈ ತೋರಿಸಿ ರಾಜಗೋಪಾಲಾಚಾರಿಯವರು 'ನನ್ನಂತಹ ಸರಳ ಜೀವಿಗೆ, ನಮ್ರತೆಯಿಂದ ಬಾಳುವವನಿಗೆ ಆ ಸುಪ್ಪತ್ತಿಗೆಯಿಂದೇನು ಉಪಯೋಗ?' ಎಂದು ಅಂದರಂತೆ. ಶ್ರೀಮತಿ ಸರೋಜಿನಿ ನಕ್ಕು ಮಾರುತ್ತರವಿತ್ತರಂತೆ : 'ನೋಡಿ ರಾಜಾಜಿ, ನಾನು ಹಿಂದೆ ನಿಮ್ಮ ಕಷ್ಟ ಗಳನ್ನೆಷ್ಟೋ ಪರಿಹರಿಸಿದ್ದೇನೆ. ಆದರೆ ಈಗ ಒದಗಿರುವ ನಿಮ್ಮ ಒಂಟಿತನದ ಸಮಸ್ಯೆಗೆ ನನ್ನಿಂದ ಯಾವ ಸಹಾಯವನ್ನೂ ನೀವು ನಿರೀಕ್ಷಿಸಕೂಡದು."

ದೆಹಲಿಯ ಭಂಗಿ ಕಾಲೋನಿಯಲ್ಲಿ ಗಾಂಧೀಜಿ ಬಿಡಾರಮಾಡಿದ್ದರು. ಅವರ ಪ್ರಾಣ ಅಮೂಲ್ಯವಾದುದೆಂದು ಭಾವಿಸಿದ್ದ ನಮ್ಮ ಸರ್ಕಾರ ಅವ ರನ್ನು ಕಾಯಲು ದೊಡ್ಡ ಸಿಬ್ಬಂದಿಯನ್ನೇ ನೇಮಿಸಿತ್ತು. ಇದನ್ನು ನೋಡಿದ ಸರೋಜಿನಿ "ಭಂಗಿಯಂತೆ ಬಾಳಲು ಎಷ್ಟು ಖರ್ಚಾಗುತ್ತೆ ಎಂಬುದು ಈ ಪುಟ್ಟ ಮನುಷ್ಯನಿಗೆ ಗೊತ್ತಿದೆಯೋ ಹೇಗೋ ಕಾಣೆ" ಎಂದು ನಕ್ಕು ಎಲ್ಲ ರನ್ನೂ ನಗಿಸಿದರು.

ಗಾಂಧೀಜಿ ಸರೋಜಿನಿಯವರಲ್ಲಿದ್ದ ಆತ್ಮೀಯತೆ ಬಹಳ ಅಗಾಧ ವಾಗಿತ್ತು. ಅದು ಎಷ್ಟೆಂಬುದನ್ನು ಗಾಂಧೀಜಿಯವರು ಸರೋಜಿನಿಗೂ ಅವರ ಮಗಳಿಗೂ ಬರೆದ ಪತ್ರದಿಂದ ತಿಳಿಯಬಹುದು. ಸರೋಜಿನಿಯವರ ಎರಡನೆ ಮಗ ರಣಧೀರ ತೀರಿಹೋದ. ಮಗನನ್ನು ಕಳೆದುಕೊಂಡ

ತಾಯಿ ಬಹು ದುಃಖದಲ್ಲಿದ್ದಳು. ತಾಯಿಯನ್ನು ಸಂತೈಸುವುದಕ್ಕಾಗಿ ಗಾಂಧೀಜಿ ಒಂದು ಪತ್ರ ಬರೆದರು. ಸರೋಜಿನಿ ಗಾಂಧೀಜಿಯವರನ್ನು Spinner of Destiny ಭಾಗ್ಯವನ್ನು ನೂಲುವವ ಎಂದು ಕರೆದಿದ್ದರು. ಅದೇ ವಿಶೇಷಣವನ್ನು ಉಪಯೋಗಿಸಿಕೊಂಡು ಗಾಂಧೀಜಿ ಹೀಗೆ ಬರೆದರು :

" ನನ್ನ ಪ್ರೀತಿಯ ಗಾಯಕಿ,

ಹದಿಮೂರನೇ ತಾರೀಕಿನ ನಿನ್ನ ಪ್ರೀತಿಯ ಪತ್ರ ಮುಟ್ಟಿತು. ಅದಕ್ಕೆ ಆಗಲೇ ಉತ್ತರ ಕೊಡದೆ ಈಗ ನಾಲ್ಕು ಮಾತು ಬರೆಯುತ್ತಿದ್ದೆ. ನಿನ್ನ ಮಾತೃಪ್ರೇಮ ಅಪಾರವಾದದ್ದು. ನಿನ್ನಿಂದ ಬಂದ ತಾರು ಒಬ್ಬ ತತ್ವಜ್ಞನಿಂದ ಬಂದ ತಾರಿನಂತಿತ್ತು. ನಿನ್ನ ತತ್ವವನ್ನು ಸಕಾಲದಲ್ಲಿ ಕಾರ್ಯರೂಪಕ್ಕಿಳಿಸಿದೆ. ನಿನ್ನ ಪತ್ರ ಮಾತೃಪ್ರೇಮವೆಂಬ ಮಹತ್ವದ ಗಿರಿಮುಟ್ಟಿದೆ. ನಿನ್ನನ್ನು ಯಾವ ಕಾರಣಕ್ಕಾಗಿ ಪ್ರೀತಿಸಲೋ ಕಾಣೆ. ಕವಯಿತ್ರಿಯಾಗಿಯೇ? ತತ್ವಜ್ಞಾನಿಯಾಗಿಯೇ? ಅಥವಾ ತಾಯಿಯಾಗಿಯೇ ? ಹೇಳು.

ನೂಲುವವ "

ನಂತರ ಸರೋಜಿನಿಯ ಎರಡನೇ ಮಗಳು ಲೀಲಾಮಣಿ ಕಾಯಿಲೆ ಬಿದ್ದಳು. ಆಗ ಗಾಂಧೀಜಿ ಸರೋಜಿನಿಗೆ ಹೀಗೆ ಬರೆದರು :

" ನನ್ನ ಮುದ್ದು ಗಾಯಕಿ,

ನಾನು ಮಹಾತ್ಮನಲ್ಲ, ಮಹತ್ವವಿನಿತಿಲ್ಲ ನನ್ನಲ್ಲಿ. ಮಹಾತ್ಮನ ಚೆನ್ನತನವೂ ಇಲ್ಲ. ಆದರೆ ನಾನು ಒಳ್ಳೆಯ ತಂದೆಯೆಂದು ಗೊತ್ತು. ಆದ್ದರಿಂದ ಒಳ್ಳೆಯ ತಾಯಿಯಾದ ನಿನಗಾಗಿ ನನ್ನ ಹೃದಯವೆಲ್ಲ ಕರಗಿ ಹರಿಯುತ್ತಿದೆ. ಇದರೊಡನೆ ಒಂದು ಚೀಟಿ ಕಳುಹಿಸಿದ್ದೇನೆ. ಅದನ್ನು ಲೀಲಾಮಣಿಗೆ ಕೊಡು. ಆಕೆ ಅನ್ಯರಿಗಲ್ಲದಿದ್ದರೂ ನಿನಗಾಗಿಯಾದರೂ ಬದುಕುವಳೆಂದು ನಂಬಿದ್ದೇನೆ. ಆಕೆಯ ಆರೋಗ್ಯಕ್ಕೆ ಆಗಾಗ್ಗೆ ಪತ್ರ ಬರೆ.

ನೀನು ಹೇಳಿರುವ ' ಕ್ಷಣಿಕ ಪ್ರದರ್ಶನ 'ದಲ್ಲಿ ನನಗೆ ಏನೇನೂ ಆಸಕ್ತಿಯಿಲ್ಲ.

—ನೂಲುವವ "

ಲೀಲಾಮಣಿಗೆ ಬರೆದಿದ್ದ ಚೀಟಿ ಇದು :

" ನನ್ನ ಮುದ್ದು ಲೀಲಾಮಣಿ,

ನಾನು ನಿನ್ನೊಡನೆ ಹಲವು ವರ್ಷಗಳ ಹಿಂದೆ 'ಚಿನ್ನದ ಹೊಸ್ತಿಲಿ'ನಲ್ಲಿದ್ದಾಗ ನೀನು ನನ್ನ ತೊಡೆಯಮೇಲೆ ಕುಳಿತಿದ್ದ ಜ್ಞಾಪಕ ಬರುತ್ತದೆ. ಈಗ ನನ್ನ ತೊಡೆಯ ಮೇಲೆ ಕುಳಿತುಕೊಳ್ಳ ಲಾರದಷ್ಟು ದೊಡ್ಡವಳಾಗಿರುವೆ. ಆದರೂ ನಾನು ನಿನ್ನ ಬಳಿ ಇದ್ದಿದ್ದರೆ ನಿನ್ನ ತಲೆಯೆತ್ತಿ ನನ್ನ ತೊಡೆಯಮೇಲಿರಿಸಿಕೊಂಡು ವೈದ್ಯರು ಹೇಳುವುದನ್ನೆಲ್ಲಾ ಚಾಚೂ ತಪ್ಪದೆ ಕೇಳುತ್ತೇನೆಂದು ಮಾತು ಕೊಡುವವರೆಗೂ ನಿನ್ನ ತಲೆಯನ್ನು ಬಿಡುತ್ತಿರುಲಿಲ್ಲ. ನಿನ್ನ ಶಿಷ್ಯೆಯರು ನಿನಗಾಗಿ ಕಾಯುತ್ತಿದ್ದಾರೆ. ಆದರೆ ಈಚೆಗೆ ಮಗನನ್ನು ಕಳೆದುಕೊಂಡ ತಾಯಿ ನಿನಗಾಗಿ ಹಾತೊರೆಯುತ್ತಿದ್ದಾಳೆ. ಆಕೆಗಾಗಿ 'ಆಗಲಿ' ಎನ್ನು—ಬದುಕು.

—ಪ್ರೀತಿಯ ಬಾಪು "

ಸರೋಜಿನಿದೇವಿಯಂತಹ ಸ್ತ್ರೀರತ್ನವನ್ನು ಕಡೆದುಕೊಟ್ಟ ಗಾಂಧೀಜಿ ಇನ್ನೂ ಹಲವಾರು ರತ್ನಗಳನ್ನು ಕಡೆದಿದ್ದಾರೆ. ಆದರೆ ಸರೋಜಿನಿಯವರ ಮಟ್ಟಕ್ಕೆ ಉಳಿದವರು ಬರಲಾರರು. ಶ್ರೀರಾಮಕೃಷ್ಣ ಪರಮಹಂಸರು ಮಹಾಮಾತೆ ಶಾರದಾದೇವಿಯವರನ್ನು ಈ ಪ್ರಪಂಚಕ್ಕೆ ಕೊಟ್ಟರು. ಅವರದು ಆಧ್ಯಾತ್ಮಿಕ ಕ್ಷೇತ್ರ. ಆದರೆ ರಾಜಕೀಯ ಹಾಗೂ ಸಾಮಾಜಿಕ ಕ್ಷೇತ್ರದಲ್ಲಿ ಯಾರೂ ಇರಲಿಲ್ಲ. ಇದನ್ನು ಕಂಡೇ ಸ್ವಾಮಿ ವಿವೇಕಾನಂದರು 'ಸ್ತ್ರೀಯರಿಗಾಗಿ ಕೆಲಸಮಾಡಬಲ್ಲ ನಿಜವಾದ ಸಿಂಹಿಣಿ ಬೇಕಾಗಿದೆ' ಎಂದು ಹೇಳಿದ್ದು. ಅಂತಹ ಸಿಂಹಿಣಿಯನ್ನು ಸೃಷ್ಟಿಮಾಡಿದರು ಗಾಂಧೀಜಿ. ಅಡುಮುಟ್ಟದ ಗಿಡವಿಲ್ಲ ಎನ್ನುವಂತೆ ಗಾಂಧೀಜಿ ಮಾಡದ ಕೆಲಸವಿಲ್ಲ. ಬಹುಶಃ ಮಾನವನ ಮಹತ್ವ ಪರಸ್ಪರ ಪೋಷಕವೆಂದು ಕಾಣುತ್ತದೆ. ಪರಮಹಂಸರಿಗೆ ವಿವೇಕಾನಂದರಂತಹ ಶಿಷ್ಯ ಸಿಗದಿದ್ದರೆ ಪರಮಹಂಸರು ಮರೆತ ವ್ಯಕ್ತಿಯಾಗುತ್ತಿದ್ದರೋ ಏನೋ. ಹಾಗೆಯೇ ಗಾಂಧೀಜಿಗೆ ಸರೋಜಿನಿದೇವಿಯಂತಹ ಶಿಷ್ಯೆ ಸಿಗದಿದ್ದರೆ ಗಾಂಧೀಜಿಯ ವ್ಯಕ್ತಿತ್ವ ಇಷ್ಟು ಪ್ರಜ್ವಲವಾಗಿ ಪ್ರಕಾಶಿಸುತ್ತಿತ್ತೇ ಎಂಬುದು ಸಂದೇಹ.

# ೧೫. ಆ ಶ್ರೀಕಂಠ

ಬಹಳ ಮುಂದುವರಿದ ದೇಶವಾದ ಇಂಗ್ಲೆಂಡಿನಲ್ಲಿ ಸ್ತ್ರೀಯರು ಪಾರ್ಲಿಮೆಂಟಿಗೆ ಚುನಾಯಿತರಾಗುವಂತಿಲ್ಲ. ಮೊಟ್ಟಮೊದಲಿಗೆ ಈಗ ತಾನೆ ಎಲಿಜಬೆತ್ ರಾಣಿ ಇಬ್ಬರು ಮಹಿಳೆಯರನ್ನು ಹೌಸ್ ಆಫ್ ಲಾರ್ಡ್ಸ್ ಸಭೆಗೆ ನಾಮಕರಣ ಮಾಡಿದ್ದಾರೆ. ರಾಣಿ ಇಲ್ಲದೆ, ರಾಜನೇ ಇದ್ದಿದ್ದ ಪಕ್ಷದಲ್ಲಿ ಇದೂ ಅಸಾಧ್ಯವಾಗಿತ್ತೋ ಏನೋ. ಹೀಗಿರುವಲ್ಲಿ, ಭಾರತದ ಸ್ತ್ರೀಯರು ರಾಯಭಾರಿಗಳಾಗಿ, ಮಂತ್ರಿಗಳಾಗಿ, ಗೌರ್ನರಾಗಿ, ಮಹಾ ನಗರಗಳ ಅಧ್ಯಕ್ಷರಾಗಿ ಮೆರೆದಿದ್ದಾರೆ. ಇದೊಂದು ಸಾಮಾನ್ಯ ವಿಚಾರ ವೆಂದು ತಿಳಿಯಬಾರದು.

ಈ ಶತಮಾನದಲ್ಲಿ ಪ್ರಪಂಚದಲ್ಲಿಯೇ ಖ್ಯಾತಿವೆತ್ತ ಭಾರತ ಮಹಿಳೆಯರಲ್ಲಿ ಸರೋಜಿನಿದೇವಿ ಮತ್ತು ವಿಜಯಲಕ್ಷ್ಮಿ ಪಂಡಿತರು ಮುಖ್ಯರಾದವರು. ಸರೋಜಿನಿದೇವಿ ಈ ಶತಮಾನದ ಪೂರ್ವಾರ್ಧದಲ್ಲಿ ಖ್ಯಾತಿವೆತ್ತರೆ ವಿಜಯಲಕ್ಷ್ಮಿ ಈಚೆಗೆ ಅಂದರೆ ಉತ್ತರಾರ್ಧದಲ್ಲಿ ಖ್ಯಾತಿವೆತ್ತವರು. ವಿಜಯಲಕ್ಷ್ಮಿಯ ಖ್ಯಾತಿ ಬಹುತೇಕ ಅವರ ಭಾಷಣಕಲೆಯಿಂದ ಬಂದಿರಬಹುದು. ಆದರೆ ಅದಕ್ಕೂ ಸರೋಜಿನಿದೇವಿಯೇ ಮೇಲ್ಪಂಕ್ತಿ. ವಿಜಯಲಕ್ಷ್ಮಿ ತಾವು ಉತ್ತರ ಪ್ರದೇಶದ ಮಂತ್ರಿಯಾದನಂತರ ಹೇಳಿದ್ದನ್ನು ಕೇಳಿದರೆ ಅದು ಗೊತ್ತಾಗುತ್ತದೆ: "ನಾನಿನ್ನೂ ಚಿಕ್ಕವಳಾಗಿದ್ದಾಗ ಆನಿಬೆಸೆಂಟರನ್ನೂ ಸರೋಜಿನಿ ನಾಯಿಡು ಅವರನ್ನೂ ಕಂಡಿದ್ದೆ. ಮೊಟ್ಟಮೊದಲಿಗೆ ನಾನು ಆನಿಬೆಸೆಂಟರ ಭಾಷಣ ಕೇಳಿದೆ. ಅದನ್ನು ಎಂದಿಗೂ ಮರೆಯುವಂತಿಲ್ಲ. ಸರೋಜಿನಿ ನಾಯಿಡುರವರಂತೂ ನನ್ನ ಬಾಲ್ಯತನದ ಆರಾಧ್ಯ ದೇವತೆಯಾಗಿದ್ದರು. ಅವರ ಮಟ್ಟಕ್ಕೇರಬೇಕೆಂದು ನಾನು ಕನಸಿನಲ್ಲಿಯೂ ಆಸೆಪಡಲಿಲ್ಲ. ಕೇವಲ ಅವರ ಧ್ವನಿಯ ಮಂತ್ರಕ್ಕೆ, ಪದಗಳ ಸೌಂದರ್ಯಕ್ಕೆ ಮುಗ್ಧಳಾಗುವುದಷ್ಟೇ ನನ್ನ ತೃಪ್ತಿಯಾಗಿತ್ತು. ಅವರು ನಮ್ಮವರು ಎಂದು ಹೆಮ್ಮೆ ಪಡುವುದೇ ನನ್ನ ಸಮಾಧಾನವಾಗಿತ್ತು. ಅಂತೂ ಪರಸ್ಪರ ವಿರೋಧದ ಈ ಇಬ್ಬರು ವ್ಯಕ್ತಿಗಳು

ನನ್ನ ಬಾಲ್ಯತನದ ಕನಸಿನ ಮೇಲೆ ಮಹತ್ಪರಿಣಾಮವನ್ನುಂಟು ಮಾಡಿದರು.”

ಇದಕ್ಕಿಂತಲೂ ಬೇಕೆ ಸರೋಜಿನಿದೇವಿಯ ವಾಗ್ಮಿತೆಯನ್ನು ಸಾರುವುದಕ್ಕೆ? ಅವರ ಭಾಷಣ ರೀತಿ, ಆ ಸೊಗಸು ಸೌಂದರ್ಯಗಳನ್ನು ಕಂಡು ಕೇಳಿದವರು ಮಾತ್ರ ಅನುಭವಿಸಬಲ್ಲರು. ೧೯೩೫ ನೇ ಇಸವಿಯಲ್ಲಿ ಅವರು ಬೆಂಗಳೂರಿನ ಕಾಲೇಜೊಂದರಲ್ಲಿ ವಿದ್ಯಾರ್ಥಿಗಳನ್ನು ಕುರಿತು ಭಾಷಣ ಮಾಡಿದರು. ಆ ಭಾಷಣ ಈಗಲೂ ಕಿವಿಯಲ್ಲಿ ದನಿಗೊಡುತ್ತಿದೆ. ಆ ದೃಶ್ಯ ಇನ್ನೂ ಕಣ್ಣಿಗೆ ಕಟ್ಟಿದಂತಿದೆ. ಮಗಳು ಪದ್ಮಜಾನಾಯಿಡು ಜೊತೆಯಲ್ಲಿ ಠೀವಿಯಿಂದ ಸಭಾಂಗಣವನ್ನು ಪ್ರವೇಶಿಸಿದ ಸರೋಜಿನಿದೇವಿ ಸಿಂಹಿಣಿಯ ದೃಷ್ಟಿಯನ್ನು ಬೀರಿ ತಮ್ಮ ಭಾಷಣವನ್ನು ಪ್ರಾರಂಭಿಸಿದರು. ಅವರ ಕೊರಳಲ್ಲಿ ಆಫ್ರಿಕಾ ಜನತೆಯು ಬಹುಮಾನವಾಗಿ ಕೊಟ್ಟ ಹುಲಿಯುಗುರು ನೇತಾಡುತ್ತಿತ್ತು. ಬಾಯಿಂದ ಮಾತುಗಳು ತರಂಗತರಂಗವಾಗಿ ನೃತ್ಯಗತಿಯಲ್ಲಿ ಹೊರಬರತೊಡಗಿದುವು. ವಾಕ್ಯಗಳಾದ ಮೇಲೆ ವಾಕ್ಯಗಳು ಎಡೆಬಿಡದೆ, ನಿಲ್ಲದೆ, ನಿರರ್ಗಳವಾಗಿ ಹರಿಯುತ್ತಿದ್ದುವು. ಆ ಮಾತುಗಳಲ್ಲಿ ಭವ್ಯತೆಯಿತ್ತು, ಪವಿತ್ರತೆಯಿತ್ತು. ದೇಶಪ್ರೇಮ ಮಾತುಮಾತಿನಲ್ಲಿ ತುಂಬಿ ತುಳುಕುತ್ತಿತ್ತು. ಸುಪ್ರಸಿದ್ಧ ಆಂಗ್ಲೇಯ ಭಾಷಣಕಾರರೆಂದು ಹೆಸರಾದ ಫಾಕ್ಸ್ (Fox), ಷೆರಿಡಿಯನ್ (Sheridian), ಹಿರಿಯ ಪಿಟ್ (Pitt the Elder ), ಕಿರಿಯ ಪಿಟ್ (Pitt the Younger) ಗ್ಲಾಡ್‌ಸ್ಟೋನ್ (Gladstone), ಡಿಸ್‌ರೈಲಿ ( Disraili) ಅಥವಾ ಬ್ರೈಟ್ (Bright)— ಇವರ ಭಾಷಣಗಳನ್ನು ನಾವು ಕೇಳಿಲ್ಲ. ಆದರೆ ಇತ್ತೀಚಿನ ಹೆಸರಾಂತ ಭಾಷಣಕಾರರಾದ ರಾಂಸೆ ಮಾಕ್ಡೊನಾಲ್ಡ್ (Ramsay Mac' Donald), ಚರ್ಚಿಲ್ (Churchill), ಸೈಮನ್ (Simon), ಅಟ್ಲಿ (Attlee), ಈಡನ್ (Eden)—ಇವರುಗಳನ್ನು ಕೇಳಿದವರು ಹೇಳುತ್ತಾರೆ ಸರೋಜಿನಿ ನಾಯಿಡು ಇವರನ್ನೆಲ್ಲ ಮೀರಿಸುತ್ತಿದ್ದರೆಂದು.

ಸರೋಜಿನಿ ಭಾಷಣವನ್ನು ಮುಕ್ತಾಯ ಮಾಡುವ ರೀತಿ ಬಹು ಭವ್ಯವೂ ಮೋಹಕವೂ ಆಗಿತ್ತು. ಮಂತ್ರಮುಗ್ಧರಾದವರಂತೆ ಕುಳಿತು ಕೇಳುತಿದ್ದ ಶ್ರೋತೃಗಳು ಅವರು ಭಾಷಣ ಮಾಡಿ ಕುಳಿತಮೇಲೆ ಎಚ್ಚೆತ್ತು— ‘ ಆಹಾ ನಿಲ್ಲಿಸಿಬಿಟ್ಟರೇ! ಇನ್ನೂ ಸ್ವಲ್ಪ ಹೊತ್ತು ಮಾತಾಡಬಾರದೆ!’ ಎಂದು

ಕೊಳ್ಳುತ್ತಿದ್ದರು. ಅವರ ನಾದಮಯ ಹಾಗೂ ಗಾಂಭೀರ್ಯವಾದ ಆ ಭಾಷೆಯ ನಿರರ್ಗಳತೆ, ಅದರ ಆ ಹೊಂದಾಣಿಕೆ, ಆ ಹುರುಪು, ಆ ಕಾವು, ಅವರ ನುಡಿಯಲ್ಲಿರುತ್ತಿದ್ದ ಆ ಆವೇಶ ಹಾಗೂ ಸೂಕ್ಷ್ಮತೆ, ಆ ನಾಟ್ಯಕಲೆ, ಆ ಉಜ್ವಲ ಕಲ್ಪನೆ, ಸಂದರ್ಭಕ್ಕೆ ತಕ್ಕಂತೆ ಧ್ವನಿಯನ್ನು ಏರಿಳಿಸುವಿಕೆ, ಅವರ ಇಂಪಾದ ದನಿ, ಒಮ್ಮೆ ಬಿಸಿಯೇರಿ ಭೇದಿಸುತ್ತಿದ್ದ, ಮತ್ತೊಮ್ಮೆ ತಂಪಾಗಿ ತಗ್ಗುತ್ತಿದ್ದ ಆ ಶ್ರೀಕಂಠ — ಇವು ಸಭಿಕರನ್ನು ನಿರಂತರ ಉತ್ಸಾಹದಲ್ಲಿಡುತ್ತಿದ್ದುವು.

ಅವರ ಕೆಲವು ಭಾಷಣಗಳನ್ನು ಈಗ ನಾವು ಓದಬಹುದು. ಆದರೆ ಅವರನ್ನು ಸ್ವತಃ ಕೇಳಿ ಆ ಶ್ರೀಕಂಠವನ್ನು, ಆ ರಾಗರೀತಿಯನ್ನು, ಆ ಧ್ವನಿ ಮಾರ್ಪಾಟನ್ನು, ತಲೆಯತೂಗುವಿಕೆಯನ್ನು, ಶರೀರದ ಆ ಉಯ್ಯಾಲೆಯನ್ನು, ಭಾಷಣಮಾಡುವಾಗ ಮತ್ತಷ್ಟು ವಿಶಾಲವಾಗುತ್ತಿದ್ದ ಆ ವಿಶಾಲ ನಯನಗಳನ್ನು, ಭಾಷಣಮಾಡುತ್ತ ಮಾಡುತ್ತ ಬಿಸಿಯೇರುತ್ತಿದ್ದ ಆ ಧ್ವನಿಯನ್ನು, ಪ್ರಕಾಶವಾಗುತ್ತಿದ್ದ ಆ ಮುಖವನ್ನು ಅನುಭವಿಸುವ ಸೌಭಾಗ್ಯ ಅವರನ್ನು ಕಂಡು ಕೇಳದವರಿಗೆ ಇಲ್ಲವಾಗಿದೆ. ಅವರ ಭಾಷಣದಲ್ಲಿ ಸುರೇಂದ್ರನಾಥರ ಹುರುಪು, ಶ್ರೀನಿವಾಸಶಾಸ್ತ್ರಿಯವರ ಸ್ವರಗತಿ, ಆನಿಬೆಸೆಂಟರ ಸತ್ವ ಇದ್ದುವು. ಆದರೂ ಅವರು ಇವರೆಲ್ಲರನ್ನೂ ಮೀರಿಸಿದ್ದರು, ಏಕೆಂದರೆ ಅವರ ಭಾಷಣದಲ್ಲಿ ಆಕರ್ಷಣ ಶಕ್ತಿಯಿತ್ತು.

ಅವರು ಕವಿಯಾಗಿದ್ದಷ್ಟೇ ಭಾಷಣಕಾರರೂ ಆಗಿದ್ದರು. ಅವರ ಕವನಗಳನ್ನು ಅವರೇ ಓದಿದರಂತೂ ಸೊಬಗಿನ ಸುಗ್ಗಿಯೇ ಆಗುತ್ತಿತ್ತು. ಒಂದೂರಿನಲ್ಲಿ ಹಲವಾರು ಕಡೆ ಅವರ ಭಾಷಣಗಳೇರ್ಪಟ್ಟರೇ ಒಮ್ಮೆ ಕೇಳಿದ ಜನ ಒಂದು ಕಡೆಯಿಂದ ಇನ್ನೊಂದು ಕಡೆಗೆ ನುಗ್ಗುತ್ತಿದ್ದರು. ಅಷ್ಟು ವೈಭವಯುತವಾಗಿತ್ತು ಅವರ ವಾಕ್ಪ್ರತಿಭೆ. ಅವರಿಗೆ ಭಾರತದ ಕೋಗಿಲೆ ಎಂಬ ಹೆಸರು ಬಂದದ್ದು ಅವರ ಕವನಗಳಿಗಿಂತ ಹೆಚ್ಚಾಗಿ ಅವರ ವಾಗ್ಮಿತೆಯಿಂದ ಎಂದು ಕೆಲವರು ಹೇಳುತ್ತಾರೆ.

# ೧೬. ಬಾ ಇಲ್ಲದ ಬಾಪು

ಇಂತಹ ಪ್ರತಿಭಾನ್ವಿತ ವ್ಯಕ್ತಿಯ ಕಥೆಯನ್ನು ಮುಂದುವರಿಸೋಣ. ೧೯೩೫ರಲ್ಲಿ ಬ್ರಿಟಿಷ್ ಸಾಮ್ರಾಜ್ಯ ಭಾರತಕ್ಕೆ ಅಲ್ಪಸ್ವಲ್ಪ ಸ್ವಾತಂತ್ರ್ಯ ಕೊಡುವ ಯೋಚನೆ ಮಾಡಿತು. 'ಆಕ್ಟ್ ಆಫ್ ಇಂಡಿಯಾ' ಎಂಬ ಕಾನೂನು ಜಾರಿಗೆ ಬಂದಿತು. ಹನ್ನೊಂದು ಪ್ರಾಂತಗಳಲ್ಲಿ ಅಷ್ಟಿಷ್ಟು ಸ್ವಾತಂತ್ರ್ಯ, ಆರುನೂರು ದೇಶೀಯ ಸಂಸ್ಥಾನಗಳ ಸಂಘಟನೆ ಹಾಗೂ ಏಕ ಸೂತ್ರ ಆಡಳಿತ—ಇವು ಆ ಕಾನೂನಿನಲ್ಲಿದ್ದ ಮುಖ್ಯ ವಿಷಯಗಳು. ಆ ಸಮಯದಲ್ಲಿ ಬೇರೆ ಯಾವ ಕಾರ್ಯ ಮಾರ್ಗವನ್ನು ಅನುಸರಿಸಲು ಸಾಧ್ಯವಾಗದ್ದನ್ನು ಕಂಡ ಕಾಂಗ್ರೆಸ್ಸು ಆ ಅಲ್ಪಸ್ವಲ್ಪ ಸ್ವಾತಂತ್ರ್ಯ ಸೌಲಭ್ಯ ವನ್ನು ಉಪಯೋಗಿಸಿಕೊಳ್ಳಬೇಕೆಂದು ತೀರ್ಮಾನಿಸಿತು. ಪ್ರಾಂತಗಳಲ್ಲಿ ಸಾರ್ವಜನಿಕ ಚುನಾವಣೆಗಳು ನಡೆದುವು. ೧೯೩೭ ರಲ್ಲಿ ನಡೆದ ಚುನಾವಣೆಗಳಲ್ಲಿ ಕಾಂಗ್ರೆಸ್ಸಿಗೆ ಎಂಟು ಪ್ರಾಂತಗಳಲ್ಲಿ ಬಹುಮತ ದೊರೆ ಯಿತು. ಈ ಪ್ರಾಂತಗಳಲ್ಲಿ ಕಾಂಗ್ರೆಸ್ ಮಂತ್ರಿಮಂಡಲಗಳು ಸ್ಥಾಪನೆ ಯಾದುವು. ಹತ್ತಾರು ವರ್ಷಗಳ ಹಿಂದೆ ಕಾಂಗ್ರೆಸ್ ಗಾದಿಯಲ್ಲಿ ಒಬ್ಬ ಸ್ತ್ರೀಯನ್ನು ಕುಳ್ಳಿರಿಸಿದ್ದ ಗಾಂಧೀಜಿ ಈಗ ವಿಜಯಲಕ್ಷ್ಮಿ ಪಂಡಿತರನ್ನು ಉತ್ತರ ಪ್ರಾಂತದ ಮಂತ್ರಿಮಂಡಳಕ್ಕೇರಿಸಿದರು. ಸರೋಜಿನಿದೇವಿ ಸ್ತ್ರೀ ಸ್ವಾಂತಂತ್ರ್ಯಕ್ಕಾಗಿ ಹೂಡಿದ್ದ ಹೋರಾಟದ ಪ್ರಥಮ ಫಲ ಅದು.

ಚುನಾವಣೆಯಲ್ಲಿ ಗಾಂಧೀಜಿ, ಸರೋಜಿನಿ ಮುಂತಾದ ಮುಖಂಡರು ಹೊಡೆದ ಜಯಭೇರಿ ಇಂಗ್ಲೆಂಡಿನ ಚರ್ಚಿಲ್ ಮುಂತಾದ ಭಾರತ ವಿರೋಧಿ ಗಳಿಗೆ ಕರ್ಣ ಕಠೋರವಾಗಿತ್ತು. ಈ ಸುಂಡಿಲಿಯಂಥ ಮನುಷ್ಯ ಏನೇನೋ ಮಾಡಬಲ್ಲ, ಇವನನ್ನು ಏನು ಮಾಡುವುದು ಎಂಬ ದೊಡ್ಡ ಸಮಸ್ಯೆ ಇಂಗ್ಲೆಂಡಿಗೊದಗಿತು. ಹೀಗಿರುವಾಗ ಐದನೇ ಜಾರ್ಜ್ ಚಕ್ರವರ್ತಿಗಳು ತೀರಿ ಹೋದರು. ಅವರ ಹಿರಿಯ ಮಗ ಎಂಟನೇ ಎಡ್ವರ್ಡ್ ಎಂಬ ಹೆಸರಿನಿಂದ ಪಟ್ಟಕ್ಕೇರಿದರು. ಆದರೆ ಅವರು ಅಮೇರಿಕಾ ದೇಶದ ಸಿಮ್ಸನ್ ಎಂಬಾಕೆ ಯನ್ನು ಪ್ರೀತಿಸಿದರು. ಅವಳನ್ನು ಮದುವೆಯಾಗಬೇಕೆಂದು ಹಠ ಹಿಡಿದರು. ಆದರೆ ಇಂಗ್ಲೆಂಡೂ ಚರ್ಚೂ ಅಂತಹ ವಿವಾಹಕ್ಕೆ ಒಪ್ಪಲಿಲ್ಲ. ಆಗ ಚಕ್ರ

ವರ್ತಿ ಸಿಂಹಾಸನ ಬೇಡ, ಸಿಮ್ಸನ್ ಬೇಕು ಎಂದರು. ಸಿಂಹಾಸನ ದಿಂದಿಳಿದು ಸಿಮ್ಸನಳನ್ನು ಮದುವೆಯಾದರು. ಅವರ ತಮ್ಮ ಆರನೇ ಜಾರ್ಜ್ ಎಂಬ ಹೆಸರಿನಿಂದ ಸಿಂಹಾಸನವನ್ನೇರಿದರು.

ಇದು ನಡೆದುದು ೧೯೩೬ ರಲ್ಲಿ.

ಪ್ರಾಂತಗಳಲ್ಲಿ ಸ್ಥಾಪಿಸಲ್ಪಟ್ಟ ನೂತನ ಸರ್ಕಾರಗಳು ಹಾಗೂ ಹೀಗೂ ಆಡಳಿತ ನಡೆಸಿಕೊಂಡು ಹೋಗುತ್ತಿದ್ದುವು. ಹೀಗಿರುವಲ್ಲಿ ೧೯೩೯ನೇ ಸೆಪ್ಟೆಂಬರ್ ಮೂರನೇ ತಾರೀಖು ಎರಡನೇ ಮಹಾಯುದ್ಧ ಪ್ರಾರಂಭ ವಾಯಿತು. ಮತ್ತೆ ಇಂಗ್ಲೆಂಡಿಗೂ ಜರ್ಮನಿಗೂ ಯುದ್ಧ! ಯುದ್ಧ ಪ್ರಾರಂಭವಾದ ಕೆಲವೇ ಗಂಟೆಗಳಲ್ಲಿ ಬ್ರಿಟನ್ನಿನ ಮುಖ್ಯ ಮಂತ್ರಿ ಚೇಂಬರ್ ಲೇನರು ಭಾರತದೇಶ ಯುದ್ಧದಲ್ಲಿ ಭಾಗವಹಿಸಿದ ದೇಶ ಎಂದು ಘೋಷಿಸಿ ದರು. ಹೀಗೆ ಹೇಳುವ ಮುನ್ನ ಭಾರತವನ್ನು ಕೇಳಲಿಲ್ಲ. ಇದು ದೇಶದ ನಾಯಕರಿಗೆ ಬಹಳ ಸಿಟ್ಟನ್ನುಂಟುಮಾಡಿತು.

ಅತ್ತ ಹಿಟ್ಲರನು ಡೆನ್ಮಾರ್ಕ್, ಹಾಲೆಂಡ್, ಬೆಲ್ಜಿಯಂ, ನಾರ್ವೆ ದೇಶ ಗಳನ್ನು ಒಂದಾದ ಮೇಲೊಂದರಂತೆ ನುಂಗಿಬಿಟ್ಟ. ಬ್ರಿಟಿಷರು ನಿರ್ನಾಮವಾ ಗುವ ಸೂಚನೆಗಳು ಕಾಣಿಸಿಕೊಂಡವು. ಆದರೆ ಅವರನ್ನು ಹಾಳುಮಾಡಿ ನಾವು ಸ್ವಾತಂತ್ರ್ಯ ಪಡೆಯುವುದು ಬೇಡ ಅಂದರು ಗಾಂಧೀಜಿ, ಸರೋಜಿನಿ, ನೆಹರೂ ಮುಂತಾದ ಮುಖಂಡರು. ಇಂಗ್ಲೆಂಡಿನ ಮೇಲೆ ಬಾಂಬುಗಳ ಸುರಿಮಳೆಯಾಯಿತು. ಫ್ರಾನ್ಸ್ ದೇಶ ಹಿಟ್ಲರನಿಗೆ ಶರಣಾಗತವಾಯಿತು. ಜರ್ಮನಿಯ ಕಡೆ ಸೇರಿದ್ದ ಜಪಾನ್ ೧೯೪೧ ನೇ ಡಿಶಂಬರಿನಲ್ಲಿ ಪರ್ಲ್ ಹಾರ್ಬರಿನ ಮೇಲೆ ಧಾಳಿ ಮಾಡಿತು. ೧೯೪೨ನೇ ಮಾರ್ಚಿಯಲ್ಲಿ ಬರ್ಮಾ ದೇಶದ ಮೇಲೆ ಧಾಳಿಮಾಡಿತು. ಯುದ್ಧ ಭಾರತದ ಬಾಗಿಲಿಗೆ ಬಂದುಬಿಟ್ಟಿತು. ಭಾರತವನ್ನು ತಮ್ಮ ಕಡೆಗೆ ಒಲಿಸಿಕೊಳ್ಳಲು ಬ್ರಿಟಿಷರು. ಪ್ರಯತ್ನಪಟ್ಟರು. ಆದರೆ ಹಿಂದಿನ ಕಹಿ ಅನುಭವವನ್ನು ಪಡೆದಿದ್ದ ಮುಖಂ ಡರು ಅವರಿಗೆ ಒಲಿಯಲಿಲ್ಲ. ನಾವು ಶತೃಗಳಿಗೆ ಸಹಾಯ ಮಾಡುವುದಿಲ್ಲ ಆದರೆ ನಿಮಗೆ ಮನಃಪೂರ್ವಕವಾಗಿ ಸಹಾಯ ಮಾಡುವುದಕ್ಕಾಗುವುದಿಲ್ಲ ಎಂದರು. ಯುದ್ಧ ಮುಗಿದ ಮೇಲಾದರೂ ಸ್ವಾತಂತ್ರ್ಯವನ್ನು ಕೊಡು ತ್ತೇವೆಂಬ ಮಾತು ಬ್ರಿಟಿಷರ ಬಾಯಲ್ಲಿ ಬರಲಿಲ್ಲ. ಇದನ್ನು ನೋಡಿ ದೇಶದ ನಾಯಕರು ೧೯೪೨ ನೇ ಇಸವಿಯಲ್ಲಿ 'ಬ್ರಿಟಿಷರೇ ಭಾರತ ಬಿಟ್ಟು ಹೊರಡಿ—

Quit India ' ಎಂಬ ಘೋಷಣೆ ಮಾಡಿದರು. ಅದೇ ಭಾರತದ ಕೊಟ್ಟ ಕೊನೆಯ ಘೋಷಣೆಯಾಯಿತು. ಅದೇ ಭಾರತ ಸ್ವಾಂತಂತ್ರ್ಯಕ್ಕಾಗಿ ಸರೋಜಿನಿದೇವಿ ಹೋರಾಡಿದ ಕೊನೆಯ ಸಮರವಾಯಿತು.

ಕಾಂಗ್ರೆಸ್ ಸತ್ಯಾಗ್ರಹ ಆರಂಭಿಸಿತು. ಆಗಸ್ಟ್ ಎಂಟನೇ ತಾರೀಕು ಗಾಂಧೀಜಿ ಬೊಂಬಾಯಿನಲ್ಲಿ 'ಕ್ವಿಟ್ ಇಂಡಿಯಾ' ಭಾಷಣ ಮಾಡಿದರು. ಅದೇ ರಾತ್ರಿ ಮೊದಲಿನ ಜಾವದಲ್ಲಿ ಎಲ್ಲರು ಇನ್ನೂ ಮಲಗಿರುವಾಗ ಅವರ ದಸ್ತಗಿರಿಯಾಯಿತು. ಮಗಳ ಮೈಗೆ ಸ್ವಸ್ಥವಿಲ್ಲದಿದ್ದರೂ ಸರೋಜಿನಿ ಸಾರ್ವಜನಿಕ ಸಭೆಯಲ್ಲಿ ಭಾಗವಹಿಸಲು ಬಂದಿದ್ದರು. ಗಾಂಧೀಜಿಯೊಡನೆ ಬಿರ್ಲಾ ಭವನದಲ್ಲಿದ್ದ ಅವರನ್ನೂ ದಸ್ತಗಿರಿ ಮಾಡಿದರು. ತಮ್ಮ ಬಟ್ಟೆಬರೆಗಳನ್ನು ತಂದಿರಲಿಲ್ಲ. ಉಟ್ಟ ಬಟ್ಟೆಯಲ್ಲಿ ಅವರು ಜೈಲಿಗೆ ಹೊರಟರು.

ಭಾರತದಲ್ಲೆಲ್ಲಾ ಸತ್ಯಾಗ್ರಹ ಸಮರ ಕಾಳ್ಕಿಚ್ಚಿನಂತೆ ಹಬ್ಬಿತು. ಇಷ್ಟು ಹೊತ್ತಿಗೆ ಬ್ರಿಟಿಷ್ ಪ್ರಧಾನಿಯಾಗಿ ಬಂದಿದ್ದ ಚರ್ಚಿಲ್ಲರು "ಬ್ರಿಟಿಷ್ ಸಾಮ್ರಾಜ್ಯವನ್ನು ದಿವಾಳಿ ಎಬ್ಬಿಸಲು ನನ್ನನ್ನು ಮುಖ್ಯಮಂತ್ರಿಯಾಗಿ ಮಾಡಿಲ್ಲ. ಭಾರತದ ಸ್ವಾತಂತ್ರ್ಯ ಸಮರವನ್ನು ಬಲಿಹಾಕುತ್ತೇನೆ" ಎಂದು ಹಠ ತೊಟ್ಟರು.

ಗಾಂಧೀಜೀಯವರನಂತರ ಅವರ ಪತ್ನಿ ಕಸ್ತೂರಿಬಾ ಅವರ ದಸ್ತಗಿರಿಯಾಯಿತು. ಎಲ್ಲರನ್ನೂ ಪೂನಾದ ಬಳಿ ಇದ್ದ ಆಗಾಖಾನ್ ಅರಮನೆಯಲ್ಲಿ ಬಂಧನದಲ್ಲಿಟ್ಟರು. ಜೈಲಿಗೊಯ್ಯಲ್ಪಟ್ಟ ಸರೋಜಿನಿಯ ಆರೋಗ್ಯ ಸರಿಯಾಗಿರಲಿಲ್ಲ. ಜೊತೆಗೆ ಕಾಯಿಲೆ ಮಲಗಿದ್ದ ಮಗಳ ಯೋಚನೆ ಬೇರೆ. ಇವೆಲ್ಲದರ ಜೊತೆಗೆ ಗಾಂಧೀಜಿ ಉಪವಾಸ ಮಾಡಲು ಯೋಚಿಸುತ್ತಿದ್ದಾರೆಂಬ ಕರ್ಣಕಠೋರ ಸುದ್ದಿ ಬೇರೆ ಮಹದೇವ ದೇಸಾಯಿಯಿಂದ ತಿಳಿದುಬಂದಿತು. ಗಾಂಧೀಜಿ ಉಪವಾಸ ಮಾಡಿದರೆ ಎಲ್ಲರಿಗಿಂತ ಹೆಚ್ಚಾಗಿ ಸರೋಜಿನಿಗೆ ಬಹು ಯೋಚನೆ. ಇಲ್ಲಿಯವರೆಗೂ ನಡೆಸಿದ ಹಲವಾರು ಉಪವಾಸಗಳಲ್ಲಿ ಆ ಮಹಾತ್ಮನನ್ನು ಸಾವಿನ ಬಾಯಿಂದ ತಪ್ಪಿಸಿದ್ದರು. ಆದರೆ ಈಗ ಅವರ ಇಳಿವಯಸ್ಸಿನಲ್ಲಿ ಮೃತ್ಯುವಿನ ದವಡೆಯಿಂದ ಪಾರುಮಾಡುವುದು ಹೇಗೆಂಬ ಯೋಚನೆ ಸರೋಜಿನಿಗೆ ಬಲವಾಯಿತು. ಗಾಂಧೀಜಿ ಉಪವಾಸ ಮಾಡಿದರೆ ಅವರ ನೆರಳಿನಂತಿದ್ದ ಕಸ್ತೂರಿಬಾನೂ ಉಪವಾಸ

ಪ್ರಾರಂಭಿಸಿಬಿಡುತ್ತಿದ್ದರು. ಶಾಸ್ತ್ರಕ್ಕೆ ಒಂದಿಷ್ಟು ಹಣ್ಣು ಹಂಪಲು ತಿಂದು ಇಡೀ ದಿನವೆಲ್ಲ ಅವರು ಉಪವಾಸ ಮಾಡುತ್ತಿದ್ದರು. ಈ ಇಬ್ಬರು ವ್ಯಕ್ತಿಗಳನ್ನು ಹೇಗಾದರೂ ಮಾಡಿ ಉಳಿಸಲಾರದೇ ಹೋದರೆ ತನ್ನ ಬಾಳು ವ್ಯರ್ಥವೆಂದು ಸರೋಜಿನಿ ಮರುಗಿದರು.

ಈ ಮಧ್ಯೆ ಗಾಂಧೀಜಿಯವರ ಆಪ್ತ ಕಾರ್ಯದರ್ಶಿ ಮಹದೇವ ದೇಸಾಯಿ ಮೂರ್ಛೆರೋಗದಿಂದ ಜೈಲಿನಲ್ಲಿಯೇ ಮೃತರಾದರು. ಅರಮನೆಯ ಪ್ರದೇಶದ ಒಂದು ಮೂಲೆಯಲ್ಲಿ ಚಿತೆಯನ್ನು ನಿರ್ಮಿಸಿ ಗಾಂಧೀಜಿ ತಮ್ಮ ಅಚ್ಚುಮೆಚ್ಚಿನ ಗೆಳೆಯನನ್ನು ಅದರಲ್ಲಿ ಅರ್ಪಿಸಿದರು.

ಈ ದುಃಖವೂ ಸರೋಜಿನಿಯ ಮನಸ್ಸಿಗೆ ಹಚ್ಚಿಕೊಂಡಿತು. ಆದರೂ ಸಹಿಸಿಕೊಂಡರು. ಸಾವೇನೂ ಅವರಿಗೆ ಹೊಸದಾಗಿರಲಿಲ್ಲ. ಯೌವನದಲ್ಲಿಯೇ ಅವರು ಸಾವಿನೊಡನೆ ಅನೇಕ ಸಾಲ ಹೋರಾಡಿದ್ದರು. ಈಗ ಬಂದದ್ದು ಬರಲೆಂದು ಸ್ಥಿರಮನಸ್ಸು ಮಾಡಿದರು. ಜೈಲಿನಿಂದ ಸಂಬಂಧಿಗಳಿಗೆ ಪತ್ರ ಬರೆಯುವ ಅವಕಾಶವನ್ನೂ ಸರ್ಕಾರ ಮೊದಮೊದಲು ಕೊಡಲಿಲ್ಲ. ಅನಂತರ ಗಾಂಧೀಜಿ ಕೇಳಿ ಕೇಳಿ ಸಾಕಾದ ಮೇಲೆ ಕೊಟ್ಟಿತು. ಅವಕಾಶ ಸಿಕ್ಕಿದ ಕೂಡಲೇ ಸರೋಜಿನಿ ಮಗಳಿಗೆ ಕಾಗದ ಬರೆದರು. ಆಕೆಯ ಆರೋಗ್ಯ ವಿಚಾರಿಸಿಕೊಂಡರು. ಮಗಳು ಆರೋಗ್ಯದಿಂದಿದ್ದಾಳೆಂದು ಕೇಳಿ ಮನಸ್ಸಿಗೆ ಹರ್ಷವಾಯಿತು. ಆದರೂ ಜೈಲಿನ ವಾಸವನ್ನು ಎಷ್ಟು ದಿನ ತಾನೆ ಸಹಿಸಲು ಸಾಧ್ಯವಾದೀತು? ಅರಮನೆಯಾದರೇನಂತೆ, ಸ್ವಾತಂತ್ರ್ಯವಿಲ್ಲದ ಬಾಳು ಬಾಳಲ್ಲ. ಸರೋಜಿನಿ ಎಷ್ಟೆಷ್ಟೋ ಕಷ್ಟಗಳನ್ನು ಅನುಭವಿಸಿದ್ದರು. ಆದರೆ ಈಗ ಏನೂ ಕೆಲಸವಿಲ್ಲದೆ ಕುಳಿತಿರುವುದನ್ನು ಅನುಭವಿಸುವುದಕ್ಕಾಗುತ್ತಿರಲಿಲ್ಲ. ಜೊತೆಗೆ ಅವರು ಅರುವತ್ತು ಮೂರು ವರ್ಷದ 'ಮುದುಕಿ'. ಗಾಂಧೀಜಿಯ ಕೊಳಲಾದನಂತರ ಇಪ್ಪತ್ತುಮೂರು ವರ್ಷಗಳ ಅವಧಿಯಲ್ಲಿ ಅನೇಕ ಸಲ ಜೈಲಿಗೆ ಹೋಗಿದ್ದರು. ಜೈಲಿನ ವಾಸ ಜೀವಂತ ಸಮಾಧಿ. ಭಾರತದ 'ಜುಡಿತ್(Judith)' ಎಂಬ ಹೆಸರು ಗಳಿಸಿದ ಆಕೆಯೂ ಸಹ ಜೈಲಿನ ದೀರ್ಘವಾಸವನ್ನು ಸಹಿಸುವುದಕ್ಕಾಗಲಿಲ್ಲ. ನಿತ್ಯದ ಬೇಜಾರು ಜೀವನಕ್ಕೆ ಶನಿವಾರ ಒಂದು ದಿನ ಚೇತನ ಬರುತ್ತಿತ್ತು. ಅದು ಭೇಟಿಯ ದಿನ. ಮಿತ್ರರೂ ಮಕ್ಕಳೂ ಗಂಡ ನಾಯಿಡುರವರೂ ಬಂದು ನೋಡಿಕೊಂಡು ಹೋಗುತ್ತಿದ್ದರು. ವೃತ್ತ ಪತ್ರಿಕೆಗಳನ್ನು ಓದು

ವಂತಿರಲಿಲ್ಲ. ಇಡೀ ಭಾರತದಲ್ಲಿ ಯಾರಾದರೂ ಬದುಕಿರುವರೋ ಇಲ್ಲವೋ ಎಂಬ ಸುದ್ದಿಯನ್ನು ಶನಿವಾರ ಮಾತ್ರ ತಿಳಿಯಬೇಕು. ಈ ಎಲ್ಲ ಮಾನಸಿಕ ವೇದನೆಗಳಿಂದ ಇಳಿ ವಯಸ್ಸಿನ ಸರೋಜಿನಿ ಆಗಾಗ್ಗೆ ಕಾಯಿಲೆ ಬೀಳುತ್ತಿದ್ದರು.

ಗಾಂಧೀಜಿ ಉಪವಾಸ ಮಾಡುತ್ತಾರೆಂಬ ಸುದ್ದಿ ಕಸ್ತೂರಿಬಾಗೆ ಗೊತ್ತಾಯಿತು. ಇದನ್ನು ಕೇಳಿದ ಕಸ್ತೂರಿ ಬಾ, ಪಾಪ!, ಬಹಳ ಒದ್ದಾಡಿದರು. ತುಳಸೀ ಕಟ್ಟೆಯ ಬಳಿಗೆ ಹೋಗಿ 'ದೇವ ನನ್ನ ಗಂಡನು ಉಪವಾಸ ಮಾಡದಂತೆ ಮಾಡು' ಎಂದು ಪ್ರಾರ್ಥಿಸಿದರು. ಸರೋಜಿನಿ ಬಾ ಬಳಿಗೆ ಹೋಗಿ 'ಬಾ, ನೀನು ಯೋಚನೆ ಮಾಡಬೇಡ. ದೇವರಿಂದ ಕರೆ ಬಂದ ಹೊರತು ಬಾಪು ಉಪವಾಸ ಮಾಡುವುದಿಲ್ಲ. ಉಪವಾಸ ಮಾಡೆಂದು ದೇವರು ಹೇಳುವುದಿಲ್ಲ' ಎಂದು ಸಂತೈಸಿದರು. ಬಾಪುವಿನ ಬಳಿಗೆ ಹೋದರು. ಅವರೊಬ್ಬರೇ ಬಾಪುವಿನೊಡನೆ ಧೈರ್ಯವಾಗಿ ಮಾತಾಡಬಲ್ಲವರಾಗಿದ್ದರು. "ಬಾಪು, ನೀವು ಉಪವಾಸಮಾಡಿ ಬಾ ಸಾಯಿಸುವಿರಿ" ಎಂದರು. ಬಾಪು ನಕ್ಕುಬಿಟ್ಟರು: "ಆಕೆಯ ವಿಚಾರ ಅನ್ಯರಿಗಿಂತ ನನಗೆ ಚೆನ್ನಾಗಿ ಗೊತ್ತು. ಆಕೆ ಎಷ್ಟು ಧೈರ್ಯವಾಗಿರ ಬಲ್ಲಳೆಂಬುದನ್ನು ನಾನು ಬಲ್ಲೆ. ನೀವಾರೂ ಆಕೆಯನ್ನು ಸರಿಯಾಗಿ ತಿಳಿದುಕೊಂಡಿಲ್ಲ. ನಾನು ಆಕೆಯೊಡನೆ ಅರುವತ್ತೆರಡು ವರ್ಷ ಬಾಳಿದ್ದೇನೆ. ನಾ ಹೇಳಬಲ್ಲೆ: ನಿಮ್ಮೆಲ್ಲರಿಗಿಂತ ಆಕೆ ಹೆಚ್ಚು ಧೈರ್ಯವಂತಳೆಂದು." ಹಿಂದೊಮ್ಮೆ ಗಾಂಧೀಜಿ ಉಪವಾಸ ಮಾಡಿದಾಗ ಅವರ ಶುಶ್ರೂಷೆಗೆ ಬೇರೆ ಜೈಲಿನಲ್ಲಿದ್ದ ಸರೋಜಿನಿಯನ್ನು ಕರೆತಂದಿದ್ದರು. ಕಸ್ತೂರಿ ಬಾನೂ ಬಂದಿದ್ದರು. ಗಾಂಧೀಜಿ ಸಾಯುತ್ತಾರೆಂದು ಎಲ್ಲರೂ ಭಾವಿಸಿದರು. ಗಾಂಧೀಜಿ ತಮ್ಮ ಸ್ವಂತ ಸಾಮಾನುಗಳನ್ನು ಆಳು ಕಾಳುಗಳಿಗೆ ಹಂಚಿಬಿಡಿ ಎಂದು ಹೇಳಿದರು. ಕಸ್ತೂರಿ ಬಾ ಹಂಚಿದರು. ಆ ಸಂದರ್ಭವನ್ನು ಈಗ ನೆನೆಯುತ್ತಾ ಬಾಪು "ಹಂಚುವಾಗ ಅವಳ ಕಣ್ಣಿನಲ್ಲಿ ಒಂದು ಹನಿ ನೀರಿರಲಿಲ್ಲ—ನೋಡಿದೆಯಾ ಆಕೆ ಎಷ್ಟು ಧೈರ್ಯವಂತಳೆಂದು?" ಎಂದು ಹೇಳಿ ನಕ್ಕರು. ಸರೋಜಿನಿ ನಕ್ಕರೂ ಅವರ ಮನಸ್ಸನ್ನು ಏನೋ ಒಂದು ಯೋಚನೆ ಕೊರೆಯುತ್ತಿತ್ತು.

ಬಾಪು ಉಪವಾಸದ ನಿರ್ಧಾರ ಮಾಡಿಬಿಟ್ಟಿದ್ದರು. ವೈಸ್‌ರಾಯರಿಗೆ

ಆಗಲೇ ಪತ್ರ ಬರೆದು ಅದನ್ನು ತಿಳಿಸಿದ್ದರು. ೧೯೪೩ನೇ ಫೆಬ್ರವರಿ ಹತ್ತನೇ ತಾರೀಕು ಪ್ರಾತಃಕಾಲ ಪ್ರಾರ್ಥನೆ ಮುಗಿದಮೇಲೆ ಬಾಪು ಉಪವಾಸ ಆರಂಭಿಸಿದರು. ಉಪ್ಪಿನ ನೀರಲ್ಲದೆ ಬೇರೊಂದು ಸೇವಿಸಬಾರದೆಂದೂ ಸಾವು ಸನಿಹಕ್ಕೆ ಬಂದಾಗ ಮಾತ್ರ ಹಣ್ಣಿನ ರಸವನ್ನು, ಅದನ್ನೂ ಒಂದೊಂದು ತೊಟ್ಟಾಗಿ, ತೆಗೆದುಕೊಳ್ಳಬೇಕೆಂದೂ ತೀರ್ಮಾನ ಮಾಡಿಕೊಂಡರು. ಕಸ್ತೂರಿ ಬಾನೂ ಗಂಡನೊಡನೆ ಉಪವಾಸ ಪ್ರಾರಂಭಿಸಿದರು. ಇವರಿಬ್ಬರ ಆರೈಕೆಯ ಮೇಲ್ವಿಚಾರಣೆ ಸರೋಜಿನಿಯ ಪಾಲಿಗೆ ಬಿತ್ತು. ಅವರಿಗೂ ಹುಷಾರಿರಲಿಲ್ಲ. ದೇಶದ ಮುಖಂಡರ ಪೈಕಿ ಗಾಂಧೀಜಿಯವರ ಬಳಿ ಇದ್ದವರು ಅವರೊಬ್ಬರೇ. ಆ ಮಹಾತ್ಮನ ಪ್ರಾಣದ ಜವಾಬ್ದಾರಿ ಅವರಮೇಲೆ ಬಿದ್ದಿತ್ತು.

ಉಪವಾಸದ ಸುದ್ದಿ ಜೈಲಿನ ಗೋಡೆಯನ್ನು ಹಾದು ಹೇಗೋ ದೇಶದಲ್ಲೆಲ್ಲ ಹಬ್ಬಿತು. ದೇಶ ತಲ್ಲಣಗೊಂಡಿತು. ಅಕಸ್ಮಾತ್ ಜೈಲಿನಲ್ಲಿ ಯಾರಿಗೂ ತಿಳಿಯದೆ ಗಾಂಧೀಜಿ ಸತ್ತರೆ ಆಗಬಹುದಾದ ಅನಾಹುತವನ್ನು ಊಹಿಸಿದ ಸರ್ಕಾರ ಸಾರ್ವಜನಿಕರು ಬಂದು ಗಾಂಧೀಜಿಯನ್ನು ನೋಡಬಹುದೆಂದು ಅನುಮತಿ ಕೊಟ್ಟಿತು. ಲಕ್ಷೋಪಲಕ್ಷ ಜನಗಳು ಬಂದು ಗಾಂಧೀಜಿಯ ದರ್ಶನ ಪಡೆದರು. ಗಾಂಧೀಜಿ ಸಾಯಲಿಲ್ಲ. ಸರೋಜಿನಿ ಬದುಕಿಸಿದರು. ಇಪ್ಪತ್ತೊಂದು ದಿನಗಳ ಮಹಾ ಉಪವಾಸ ಮುಕ್ತಾಯವಾಯಿತು. ಉಪವಾಸ ಮುಕ್ತಾಯವಾದ ದಿನ ಸರೋಜಿನಿಗೆ ಮದುವೆಯ ಸಡಗರ. ಧೂಮ್ರವರ್ಣದ ಹೊಸ ಸೀರೆಯುಟ್ಟರು. ಬೊಂಬಾಯಿನಲ್ಲೋ ಡೆಲ್ಲಿಯಲ್ಲೋ ನಡೆಯುವ ದರ್ಬಾರಿಗೆ ಹೋಗುವವರಂತೆ ಸಿಂಗರಿಸಿಕೊಂಡರು. ಹೀಗೆ ಸಿಂಗರಿಸಿಕೊಂಡು ಅರುವತ್ತು ಮೂರು ವರ್ಷದ ವಧು, ಸಾವಿನಿಂದ ಪಾರಾದ ಎಪ್ಪತ್ತು ಮೂರು ವರ್ಷದ ವರನ ಬಳಿಗೆ ಬಂದರು. ಸುಶೀಲಾನೈಯಾರ್, ಕಸ್ತೂರಿ ಬಾ ಮುಂತಾದವರು ಮತ್ತು ಜೈಲಿನ ಡಾಕ್ಟರುಗಳಲ್ಲದೆ ಮತ್ತಾರು ಅಲ್ಲಿರಲಿಲ್ಲ. ಕಸ್ತೂರಿ ಬಾ ಗಂಡನಿಗೆ ಹಣ್ಣಿನ ರಸ ಕುಡಿಸಿದರು. ಸರೋಜಿನಿದೇವಿ ಠಾಕೂರರ ' This is my prayer to meet my Lord.' ಎಂಬ ಹಾಡನ್ನು ಭಕ್ತಿಪೂರ್ವಕವಾಗಿ ಹಾಡಿದರು. ' ಎಲೆ ದೇವ, ನನ್ನ ತಂದೆಯನ್ನು ಬದುಕಿಸಿದೆ—ಇಗೋ ನನ್ನ ಪ್ರಣಾಮ ' ಎಂದ ಸರ್ವಜೀವಿಗಳಿಗೂ ಪ್ರಭುವಾದ ದೇವರನ್ನು ಪ್ರಾರ್ಥಿಸಿದರು. ಸ:

ಎಂದಿನಂತೆ ಮುಖದಲ್ಲಿ ಉಲ್ಲಾಸ. ಬಂದಿದ್ದವರಿಗೆಲ್ಲಾ ತಾವೇ ಒಂದೊಂದು ಲೋಟ ಹಣ್ಣಿನ ರಸ ಕೊಟ್ಟರು. 'ರುಚಿಯಾಗಿದೆಯೇ? ಮತ್ತೊಂದು ಲೋಟ ಕೊಡಲೇ?' ಎಂದು ನಗುಮುಖದಿಂದ ಕೇಳಿ ವಿಚಾರಿಸಿಕೊಂಡರು. ಎಂತಹ ಸಮಯದಲ್ಲಿಯೂ ಖುಷಿಯಾಗಿರುತ್ತಿದ್ದ ವ್ಯಕ್ತಿ ಸರೋಜಿನಿ.

ಗಾಂಧೀಜಿಯವರ ಬಿಡುಗಡೆಯಾಗಲಿಲ್ಲ. ಉಪವಾಸ ಕಾಲದಲ್ಲಿ ಅನೇಕರು ಬರುತ್ತಿದ್ದರು. ಸರೋಜಿನಿದೇವಿಯ ಗಂಡ ಡಾ. ನಾಯಿಡು ಅವರು ಮಕ್ಕಳ ಸಮೇತ ಬಂದು ಹೆಂಡತಿಯೊಡನೆ ಮಾತಾಡಿಕೊಂಡು ಹೋಗುತ್ತಿದ್ದರು. ಈಗ ಪುನಃ ಜೈಲಿನವಾಸ ಎಂದಿನಂತೆ ನೀರಸವಾಯಿತು. ಎಷ್ಟು ದಿನಗಳಾಗಲೀ ಯಾರನ್ನೂ ಬಿಡುವುದಿಲ್ಲವೆಂಬ ನಿರ್ಧಾರ ಕೈಕೊಂಡಿತ್ತು ಬ್ರಿಟಿಷ್ ಸರ್ಕಾರ. ಹಳೆಯ ವೈಸ್‌ರಾಯ್ ಲಾರ್ಡ್ ಲಿನ್‌ಲಿತ್‌ಗೋ ಹೋದರು. ಹೊಸ ವೈಸರಾಯ್ ಲಾರ್ಡ್ ವೇವೆಲ್ ಬಂದರು. ಅವರು ಭಾರತದ ಬಿಕ್ಕಟ್ಟಿಗೆ ಹೊಸ ಪರಿಹಾರವನ್ನು ಸೂಚಿಸಿದರು. 'ಹಿಂದೂ ಮುಸಲ್ಮಾನರು ಒಟ್ಟಿಗೆ ಇರಲು ಸಾಧ್ಯವಿಲ್ಲ ಎಂದು ಜಿನ್ನಾ ಹೇಳುತ್ತಿದ್ದಾರೆ. ಆದ್ದರಿಂದ ಭಾರತವನ್ನು ಇಬ್ಭಾಗಿಸೋಣ' ಎಂದರು. ಆದರೆ ಗಾಂಧೀಜಿ ಸರೋಜಿನಿಯವರಂತಹ ಮುಖಂಡರು ಜೈಲಿನೊಳಗಿರಬೇಕಾದರೆ ಅದಕ್ಕೆ ಜವಾಬು ಹೇಳುವವರು ಯಾರು? ಹಿಂದೂ ಮುಸಲ್ಮಾನ್ ಸಖ್ಯತೆಗೆ ತಮ್ಮ ಇಡೀ ಜೀವನವನ್ನೇ ಮುಡುಪಾಗಿಟ್ಟ ಸರೋಜಿನಿ ಜಿನ್ನಾರವರಿಗೆ ಬುದ್ಧಿ ಹೇಳಲೂ ಅವಕಾಶವಿರಲಿಲ್ಲ.

ಜೈಲಿನೊಳಗೆ ಅವರು ಕೊಳೆಯುತ್ತಿದ್ದಾರೆ. ಆ ನೀರಸ ಜೈಲಿನ ಜೀವನವನ್ನು ಆದಷ್ಟು ರಸಮಯವಾಗಿ ಮಾಡಿಕೊಂಡು ಹೇಗೋ ಕಾಲ ಹಾಕುತ್ತಿದ್ದಾರೆ. ಸರೋಜಿನಿ ಮುದುಕ ಗಾಂಧಿಯನ್ನು ಪೀಡಿಸುವುದನ್ನು ಇನ್ನೂ ಬಿಟ್ಟಿಲ್ಲ: 'ನೀನು ಮೀರಾಬೆನ್ನಳೊಡನೆ ಟೆನ್ನಿಸ್ ಅಥವಾ ಬ್ಯಾಡ್ಮಿಂಟನ್ ಆಟವನ್ನೇಕೆ ಆಡಬಾರದು?' ಎಂದು ಗೇಲಿ ಮಾಡುತ್ತಾರೆ. ಕಸ್ತೂರಿ ಬಾ ಗಾಂಧೀಜಿ ಇಬ್ಬರೂ ಒಟ್ಟಿಗೆ ಕುಳಿತಿದ್ದರೆ 'ಏನು ಹಸೆಗೆ ಕುಳಿತಿರಲ್ಲಾ!' ಎನ್ನುತ್ತಾರೆ. ಕಸ್ತೂರಿಬಾ ಎಪ್ಪತ್ತುನಾಲ್ಕು ವರ್ಷದ ಹಣ್ಣು ಮುದುಕಿ. ಅವರಿಗೆ ಗಾಂಧೀಜಿ ಹದಿಮೂರು ವರ್ಷದ ಮಗುವಿಗೆ ಹೊಸದಾಗಿ ಹೇಳಿಕೊಡುವಂತೆ ಭೂಗೋಳದ ಪಾಠ ಹೇಳಿಕೊಡುತ್ತಾರೆ. ಕಿತ್ತಲೆ ಹಣ್ಣನ್ನು ತೆಗೆದುಕೊಂಡು ಅದರ ಸಹಾಯದೊಡನೆ ಭೂಗೋಳದ ಅಕ್ಷಾಂಶ

ರೇಖಾಂಶ ರೇಖೆಗಳ ಪರಿಚಯ ಮಾಡಿಕೊಡುತ್ತಾರೆ. ಸಮಭಾಜಕ ವೃತ್ತವೆಲ್ಲಿದೆಯೆಂದು ತೋರಿಸುತ್ತಾರೆ. ಸರೋಜಿನಿದೇವಿ ಹುಸಿ ನಗುವಿನಿಂದ ಅವರಿಬ್ಬರ ಬಳಿ ಸಾರಿ 'ಏನು, ಸರಸಸಲ್ಲಾಪ, ಎಷ್ಟತ್ತಾದರೂ ಹುಡುಗತನ ತಪ್ಪಲಿಲ್ಲವೇ ?' ಎಂದು ಗೇಲಿ ಎಬ್ಬಿಸುತ್ತಾರೆ. ಅದನ್ನು ಕೇಳಿ ಹಲ್ಲಿಲ್ಲದ ಎರಡು ಬೋಡು ಬಾಯಿಗಳು ಗೊಳ್ಳೆಂದು ನಗುತ್ತವೆ.

ಹೇಳಿಕೊಟ್ಟ ಪಾಠವನ್ನೆಲ್ಲ ಶಿಷ್ಯೆ ಕಸ್ತೂರಿ ಬಾ ಸಲೀಸಾಗಿ ಮರೆಯುತ್ತಿದ್ದರು. ನಿನ್ನೆಯ ದಿನ ಹೇಳಿ ಬಾಯಿಪಾಠ ಮಾಡಿಸಿದ ಪಂಜಾಬಿನ ಐದು ನದಿಗಳ ಹೆಸರನ್ನು ಇಂದು ಗಾಂಧೀಜಿ ಕೇಳಿದರೆ ಮರೆತುಬಿಡುತ್ತಿದ್ದರು. 'ಸುಶೀಲೆ, ಇದನ್ನೆಲ್ಲ ಒಂದು ಕಾಗದದಲ್ಲಿ ಬರೆದಾದರೂ ಕೊಡೆ. ನನ್ನ ತಲೆಯಲ್ಲಿ ಒಂದೂ ನಿಲ್ಲುವುದಿಲ್ಲವಲ್ಲೆ !' ಎಂದು ಹೇಳುತ್ತಿದ್ದರು. ಓದು ಬರಹ ಬಂದರೆ ತಾನೆ ಬರದದ್ದನ್ನು ಓದಲಿಕ್ಕೆ ಸಾಧ್ಯ. ಆದ್ದರಿಂದ ಕಷ್ಟಪಟ್ಟು ಅಕ್ಷರ ಕಲಿತರು. ಆದರೆ ಬರೆದರೆ ಮುಗ್ಗಿಯಂತೆ ಬರೆಯುತ್ತಿದ್ದರು. ಒಂದೊಂದು ಅಕ್ಷರವನ್ನೂ ಬಿಡಿಬಿಡಿಯಾಗಿ ಬರೆಯುತ್ತಿದ್ದರು. ಏನು ಬರೆದಿದ್ದಾರೆಂದು ಯಾರಿಗೂ ಗೊತ್ತಾಗುತ್ತಿರಲಿಲ್ಲ. ಅವರೊಬ್ಬರಿಗೆ ಮಾತ್ರ ಗೊತ್ತಾಗುತ್ತಿತ್ತೋ ಏನೋ ! ಎಲ್ಲರಂತೆ ಕಸ್ತೂರಿ ಬಾ ಬಳಿಯಲ್ಲಿಯೂ ಒಂದು ನೋಟು ಪುಸ್ತಕವಿದ್ದರೆ ಚೆನ್ನ ಎಂದು ಹೇಳಿ ಗೇಲಿ ಮಾಡಿ ಅವರಿಗೆ ಸರೋಜಿನಿ ನೋಟು ಪುಸ್ತಕ ಕೊಡಲು ಹೋದರು. 'ಯಾಕಮ್ಮಾ ಈ ವಯಸ್ಸಿನಲ್ಲಿ ಅವೆಲ್ಲಾ ?' ಎಂದು ಹೇಳಿ ಬೇಡವೆಂದರು. ಬಾ 'ಇರಲಿ ತೆಗೆದು ಕೊಳ್ಳಮ್ಮಾ. ಯಜಮಾನರು ಹೇಳುವುದನ್ನೆಲ್ಲಾ ಬರೆದಿಟ್ಟುಕೊಳ್ಳುವೆಯಂತೆ !' ಎಂದು ಒತ್ತಾಯ ಮಾಡಿ ಅವರ ತೊಡೆಯ ಮೇಲಿಟ್ಟರು. ಆದರೆ ಅದನ್ನು ತೆರೆದೂ ನೋಡಲಿಲ್ಲ ಕಸ್ತೂರಿ ಬಾ.

ನೋಡಬೇಕಾದ ಆವಶ್ಯಕತೆಯೂ ಇರಲಿಲ್ಲ ಕಸ್ತೂರಿ ಬಾಗೆ. ಏಕೆಂದರೆ ಪ್ರಪಂಚವನ್ನೇ ನೋಡಿಕೊಂಡಿರಬೇಕಾದ ಆವಶ್ಯಕತೆ ಇಲ್ಲವೆಂದು ದೇವರು ಅವರಿಗೆ ಹೇಳುತ್ತಿದ್ದಂತೆ ಭಾಸವಾಯಿತು. ೧೯೪೩ ನೇ ಡಿಸೆಂಬರ್ ತಿಂಗಳಿನಲ್ಲಿ ಬಾ ಅವರಿಗೆ ಏಕೋ ಉಸುರು ಕಟ್ಟಿದಂತಾಯಿತು. ಬರುಬರುತ್ತಾ ಉಸಿರಾಡುವುದೂ ಕಷ್ಟವಾಯಿತು. ಜೈಲಿನಿಂದ ಬಿಡುಗಡೆ ಹೊಂದಿ ಚಿಕಿತ್ಸೆ ಪಡೆಯುವ ಅವಕಾಶವಿರಲಿಲ್ಲ ಅವರಿಗೆ. ಸರ್ಕಾರ ಅದಕ್ಕೆ ಒಪ್ಪುತ್ತಿರಲಿಲ್ಲ. ಆಯುರ್ವೇದ ಪಂಡಿತರೊಬ್ಬರು ಬೇಕೆಂದು ಕೋರಿದರು. ಬಾಪು

ಸರ್ಕಾರಕ್ಕೆ ಪತ್ರದ ಮೇಲೆ ಪತ್ರ ಬರೆದು ಪಂಡಿತರೊಬ್ಬರನ್ನು ಕರೆಸಿದರು. ಅವರು ಕೊಟ್ಟ ಗಿಡಮೂಲಿಕೆಗಳ ಔಷಧದಿಂದ ಏನೂ ಗುಣಕಾಣಲಿಲ್ಲ.

ಸರೋಜಿನಿಯ ಆರೋಗ್ಯವೂ ಕೆಟ್ಟಿತು. ಡಾಕ್ಟರು ನೋಡಿ ಅದು ಮಲೇರಿಯಾ ರೋಗವೆಂದು ಹೇಳಿದರು. ಅದು ಉಲ್ಬಣಿಸಿ ಸಾಯುವ ಸ್ಥಿತಿಗೆ ಬಂದರು ಸರೋಜಿನಿ. ಮಹದೇವ ದೇಸಾಯಿಯಂತೆ ಸರೋಜಿನಿಯೂ ಜೈಲಿನಲ್ಲಿ ಸತ್ತರೆ ಅನಾಹುತವಾದೀತೆಂದು ಭಯಪಟ್ಟ ಸರ್ಕಾರ ಅವರನ್ನು ಬಿಡುಗಡೆ ಮಾಡಿತು. ಬಿಡುಗಡೆಯಾದ ಸರೋಜಿನಿದೇವಿ ಆಸ್ಪತ್ರೆಯನ್ನು ಸೇರಿದರು. ಸರೋಜಿನಿ ಇಲ್ಲದೇಹೋದ್ದರಿಂದ ಜೈಲಿನಲ್ಲಿ ಕಸ್ತೂರಿಬಾನನ್ನು ನೋಡಿಕೊಳ್ಳಲು ಯಾರೂ ಇಲ್ಲವಾದರು. ಮೀರಾಬೆನ್ ಮತ್ತು ಸುಶೀಲಾ ನೈಯಾರ್ ಮಾತ್ರ ಉಳಿದುಕೊಂಡರು. ತನ್ನ ಜೀವನ ಯಾತ್ರೆ ಕೊನೆಯಾಗುತ್ತ ಬಂದಿತೆಂದು ಭಾವಿಸಿದ ಬಾ ಹಿರಿಯಮಗ ಹರಿಲಾಲನನ್ನು ಕರೆಸಿಕೊಂಡು ಕಣ್ತುಂಬ ನೋಡಿದರು. ಕಿರಿಯಮಗ ದೇವದಾಸ ಗಾಂಧಿಯನ್ನು ಕರೆಸಿ 'ಮಗೂ, ಬಾಪು ಸನ್ಯಾಸಿ. ಅವರಿಗೆ ಇಡೀ ಪ್ರಪಂಚದ ಯೋಚನೆ. ಹರಿದಾಸ ಎಂಥವನೆಂದು ನೀನು ನೋಡಿದ್ದೀಯೆ. ನಮ್ಮ ಸಂಸಾರ ಸಾಕುವ ಭಾರ ನಿನ್ನದು.' ಎಂದರು. ಮಗ ಬಿಕ್ಕಳಿಸಿ ಅತ್ತ.

ತಾಯಿಯನ್ನು ಬಿಡುಗಡೆ ಮಾಡಬೇಕೆಂದು ಮಗ ದೇವದಾಸ್‌ಗಾಂಧಿ ಸರ್ಕಾರವನ್ನು ಕೇಳಿಕೊಂಡರು. ತಾಯಿಯನ್ನು ಬಿಟ್ಟರೆ ತಂದೆಯನ್ನು ಬಿಡಬೇಕಾಗುತ್ತೆ ಎಂಬ ನೆಪದ ಮೇಲೆ ಸರ್ಕಾರ ಆಗುವುದಿಲ್ಲ ಎಂದಿತು. ಹೆಂಡತಿ ಗಂಡನನ್ನು ಕುರಿತು "ನಾನು ಸತ್ತಮೇಲೆ ನೀವು ಅಳಬೇಡಿ" ಎಂದಳು. ಹೆಂಡತಿಯ ತಲೆಯನ್ನು ಗಂಡ ತೊಡೆಯಮೇಲಿಟ್ಟುಕೊಂಡು ಮಗುವನ್ನು ನೇವರಿಸುವಂತೆ ನೇವರಿಸಿದರು. ಇದ್ದಕ್ಕಿದ್ದಂತೆ ಹೆಂಡತಿಯ ತಲೆ ಒಂದು ಕಡೆಗೆ ವಾಲಿತು. ಎತ್ತಿ ಎದೆಗೆ ಒರಗಿಸಿಕೊಂಡು ಗಂಡ ಕೇಳಿದರು 'ಹೇಗಾಗುತ್ತೆ' ಎಂದು. ಮಗುವಿನಂತೆ ಹೆಂಡತಿ 'ನನಗೆ ಗೊತ್ತಾಗುವುದಿಲ್ಲ' ಎಂದರು. ಗೊತ್ತೇ ಆಗಲಿಲ್ಲ ಯಾರಿಗೂ ಹೆಂಡತಿ ಗಂಡನ ಎದೆಯ ಮೇಲೆ ಪ್ರಾಣ ಬಿಟ್ಟಾಗ. ಮೌನತಾಳಿದ ಮಾತಾಯಿ ಮತ್ತೆ ಮಾತಾಡಲಿಲ್ಲ. ಅದೇ ಮಹಾ ಮೌನವಾಯಿತು. ಮಹಾತ್ಮನನ್ನು ಕೈಹಿಡಿದು ಮಹಾಯಾತ್ರೆ ಸಾಗಿಸಿದ ಆ ಮಹತಾಯಿಯ ಜೀವನ ಮುಕ್ತಾಯವಾಯಿತು. ಅಂದು ಸಂಜೆ ಏಳೂವರೆ ಗಂಟೆ. ೧೯೪೪ನೇ ಫೆಬ್ರುವರಿ ಇಪ್ಪತ್ತೆರಡನೇ ತಾರೀಖು.

ಮೂರನೆಯ ದಿನ ಬೆಳಗ್ಗೆ ಮುಂದಿನ ಕ್ರಿಯೆಗಳ ಏರ್ಪಾಡು ನಡೆಯಿತು. ಇಂಗ್ಲೀಷ್ ಮಹಿಳೆ ಮೀರಾಬೆನ್ನಳು ಕಸ್ತೂರಿಬಾಗೆ ಸ್ನಾನಮಾಡಿಸಿ ಹೊಸ ಖಾದಿ ಸೀರೆಯುಡಿಸಿದಳು. ಯಾರೋ ಕೈನೂಲನ್ನು ಬಳೆಯಾಗಿ ತೊಡಿಸಿದರು. ತುಳಸಿಯ ಹಾರವನ್ನು ಕೊರಳಲ್ಲಿ ಹಾಕಿದರು. ತಲೆಗೆ ಹೂಮುಡಿಸಿ ಹಣೆಗೆ ಅಗಲವಾಗಿ ಕುಂಕುಮ ಇಟ್ಟರು. ಮಹಾ ಸಾಧ್ವಿಯನ್ನು ಜೀವನದ ಕೊನೆಯ ಯಾತ್ರೆಗೆ ಸಿದ್ಧಗೊಳಿಸಿದರು.

ಜೇಲಿನ ಅಧಿಕಾರಿ ಇಡೀ ಒಂದು ಗಂಧದ ಮರವನ್ನೇ ಕಡಿಸಿ ಚಿತೆಯನ್ನು ಸಿದ್ಧಪಡಿಸಿದ. ಪತ್ನಿಯ ಪಕ್ಕದಲ್ಲಿ ಕುಳಿತು ಗಾಂಧೀಜಿ ಹಿಂದೂ, ಮುಸ್ಲಿಂ, ಪಾರ್ಸಿ ಮತ್ತು ಕ್ರೈಸ್ತ ಗ್ರಂಥಗಳಿಂದ ಶ್ಲೋಕಗಳನ್ನು ಓದಿ ದೇವರನ್ನು ಪ್ರಾರ್ಥಿಸಿದರು—ಬಾಳಿನ ಸಂಗಾತಿಗೆ ಮುಕ್ತಿ ದೊರೆಯಲೆಂದು. ಸಾಧ್ವಿಯ ಶರೀರವನ್ನು ಚಿತೆಯಮೇಲಿಟ್ಟರು. ಮಗ ದೇವದಾಸ ಚಿತೆಯನ್ನು ಹಚ್ಚಿದ. ಇಡೀ ದೇಶವೇ ಇದ್ದು ನೋಡಿ ಕಣ್ಣೀರು ಕರೆಯಬಹುದಾದ ಕಡೆ ಕೇವಲ ನೂರೈವತ್ತು ಜನ ಮಾತ್ರ ನಿಂತು ಕಣ್ಣೀರಿಟ್ಟರು. ಬೆಳಗಿನಿಂದ ಸಂಜೆಯವರೆಗೆ ಹೆಂಡತಿಯ ಚಿತೆಯ ಬಳಿ ಗಂಡ ಮೌನವಾಗಿ ಕುಳಿತರು. 'ಅರುವತ್ತೆರಡು ವರ್ಷ ಅಕ್ಕರೆಯಿಂದ ಬಾಳಿದ ಗೆಳತಿಯನ್ನು ಹೇಗೆ ಬಿಟ್ಟು ಬರಲಿ !' ಎಂದರು.

ಸಂಜೆ ಸೂರ್ಯಾಸ್ತಮಯವಾದ ಮೇಲೆ, ಭಾರ್ಯೆಯ ಶರೀರ ಬೆಂಕಿಯಲ್ಲಿ ಭಸ್ಮವಾದಮೇಲೆ, ಗಾಂಧೀಜಿ ತಮ್ಮ ಕೋಣೆಗೆ ಹಿಂದಿರುಗಿದರು. ಹಿಂದೆ ಬರುತ್ತಿದ್ದ ಮೀರಾಬೆನ್ನಳಿಗೆ ಗಾಂಧೀಜಿಯ ಕಣ್ಣಿನಲ್ಲಿ ಹನಿಗಳು ಉದುರುತ್ತಿದ್ದುದು ಕಾಣಿಸಿತು. ಗಾಂಧೀಜಿ ಅತ್ತದ್ದು ಅದೇ ಮೊದಲು. ಕಣ್ಣೀರನ್ನು ಒರೆಸಿಕೊಳ್ಳುತ್ತಾ ಗಾಂಧೀಜಿ "ಆಕೆ ಇರುವಾಗ ನಾನು ಸಾವನ್ನು ಸ್ವಾಗತಿಸಿದೆ—ಆದರೆ ನಾನು ಯೋಚಿಸಿದ್ದಕ್ಕಿಂತಲೂ ಹೆಚ್ಚು ದುರ್ಭರವಾಗಿದೆ ಆ ನಷ್ಟ. ನಾವು ಸಾಮಾನ್ಯ ದಂಪತಿಗಳಾಗಿರಲಿಲ್ಲ. ನಮ್ಮ ದಾಂಪತ್ಯ ಜೀವನ ತೃಪ್ತಿ, ಸುಖ ಹಾಗೂ ಪ್ರಗತಿಯಿಂದ ಕೂಡಿತ್ತು.... ಬಾ ಇಲ್ಲದ ಬದುಕು ನನಗೆ ಬದುಕಾಗಿ ಕಾಣುವುದಿಲ್ಲ. ಆಕೆ ಮುತ್ತೈದೆಯಾಗಿ ಸಾಯಲಿ ಎಂದು ಹಾರೈಸಿದ್ದೆ....ಅದು ನೆರವೇರಿತು....ಆದರೆ ನನ್ನ ಬಾಳು ಬರಿದಾಯಿತು...."

ಕಸ್ತೂರಿ ಬಾಯಿಯ ಜೀವನ ಚರಿತ್ರೆಯನ್ನು ಬರೆಯುವಂತೆ ಮೊದಲೇ

ಹೇಳಿದ್ದರು ಗಾಂಧೀಜಿ ಸುಶೀಲೆಗೆ. ಅದು ಮುಗಿದಿತ್ತು ಈಗ. ಅದಕ್ಕೆ ಬರೆದ ಮುನ್ನುಡಿಯಲ್ಲಿ ಗಾಂಧೀಜಿ ಹೀಗೆ ಹೇಳಿದರು : "ಬ್ರಹ್ಮಚರ್ಯದ ನಿರ್ಧಾರಮಾಡಿದನಂತರ ನಾವಿಬ್ಬರೂ ಗೆಳೆಯ ಗೆಳತಿಯರಾದೆವು. ನನ್ನೊಡನೆ ಬಾಳ್ವೆಮಾಡಿಕೊಂಡಿರಲು ಬಾ ಒಪ್ಪಿದ್ದರಲ್ಲಿ ಆಕೆಗೆ ಯಾವ ಅಂತರ್ಯದ ಆಸೆಯೂ ಇರಲಿಲ್ಲ. ನನ್ನ ಸಹಾಯಕಳಾಗಿರುವುದಲ್ಲದೆ ಬೇರೊಂದು ಆಸೆ ಆಕೆಯಲ್ಲಿರಲಿಲ್ಲ. ಸ್ತ್ರೀಯಾಗಿ, ಹೆಂಡತಿಯಾಗಿ ನನ್ನಲ್ಲಿ ಐಕ್ಯವಾಗುವುದು ತನ್ನ ಧರ್ಮವೆಂದು ಆಕೆ ಭಾವಿಸಿದಳು. ಕೊನೆಯ ಉಸಿರೆಳೆಯುವವರೆಗೆ ಆಕೆ ಹಾಗೆಯೇ ಇದ್ದಳು."

ಆ ಮಹಾಮಾತೆಯ ಬಳಿ ಜೀವನವೆಲ್ಲಾ ಇದ್ದು ಕೊನೆಯ ಗಳಿಗೆಯಲ್ಲಿ ಅದು ಸಾಧ್ಯವಿಲ್ಲದೇ ಹೋದುದಕ್ಕೆ ಸರೋಜಿನಿದೇವಿ ಬಹಳ ವ್ಯಸನಪಟ್ಟರು. ಜೀವನದ ಗೆಳತಿಯನ್ನು ಕಳೆದುಕೊಂಡ ತನ್ನ ತಂದೆಯನ್ನು ಸಂತೈಸಲು ಅವರಿಗೆ ಆಗಲಿಲ್ಲ. ಆದರೆ ಆ ಮಹಾತಾಯಿಯ ಸ್ಮರಣೆ ಶಾಶ್ವತವಾಗಿ ನಿಲ್ಲುವಂತೆ ಮಾಡುವ ಕೆಲಸದಲ್ಲಿ ಕೈಹಾಕಿದರು. ಕಸ್ತೂರಿ ಬಾ ನಿಧಿಯನ್ನು ಸ್ಥಾಪಿಸಿ ಆ ನಿಧಿಗೆ ಹಣ ಶೇಖರಿಸುವ ಕೆಲಸ ವಹಿಸಿಕೊಂಡರು.

# ೧೭. ಸ್ವಾತಂತ್ರ್ಯ-ಸಿದ್ಧಿ

ಗಾಂಧೀಜಿಯವರ ಆರೋಗ್ಯವೂ ಕೆಟ್ಟುಹೋದ್ದರಿಂದ ಅವರ ಬಿಡುಗಡೆಯಾಯಿತು. ಸರೋಜಿನಿದೇವಿಯ ಆರೋಗ್ಯ ಸುಧಾರಿಸಿದನಂತರ ಅವರು ಎಂದಿನಂತೆ ಓಡಾಡತೊಡಗಿದರು. ಎರಡನೇ ಮಹಾ ಯುದ್ಧವೂ ಮುಗಿದಿತ್ತು. ಅರುವತ್ತೈದು ವರ್ಷದ ಮುದುಕಿಯಾದರೂ ಭಾರತದ ಜೊನ್ ಆಫ್ ಆರ್ಕಳಂತೆ ಗರ್ಜಿಸಿದಳು. ಕಲ್ಕತ್ತೆಯ ವಿಶ್ವವಿದ್ಯಾನಿಲಯದ ಉಪಾಧ್ಯಾಯರನ್ನೂ ವಿದ್ಯಾರ್ಥಿ ವಿದ್ಯಾರ್ಥಿನಿಯರನ್ನೂ ಕುರಿತು ತಮ್ಮ ವಿಶಿಷ್ಟ ರೀತಿಯಲ್ಲಿ ಹೇಳಿದರು: "ಯುದ್ಧ ಮುಗಿದು ಹೋಗಿದೆ. ಈಗ ಹೊಸ ಪ್ರಪಂಚವನ್ನು ನಿರ್ಮಿಸುವ ಕಾರ್ಯದಲ್ಲಿ ನಾವು ಯಾವ ಪಾತ್ರ ವಹಿಸೋಣ? ಅನ್ಯರು ಹೇಳಿದಂತೆ ಕೇಳೋಣವೇ? ಅಥವಾ ಸ್ವಾತಂತ್ರ್ಯದ ಹೊಸ ಮನೆಯನ್ನು ನಿರ್ಮಿಸುವುದರಲ್ಲಿ ನಮ್ಮದೂ ಪಾತ್ರವಿರಬೇಕೆಂದು ಹೇಳೋಣವೇ?"

ಭಾರತಕ್ಕೆ ಸ್ವಾತಂತ್ರ್ಯ ಬರುವುದರಲ್ಲಿ ಅವರಿಗೆ ಕಿಂಚಿತ್ತೂ ಸಂದೇಹವಿರಲಿಲ್ಲ. ಆದರೆ ಅದು ಯಾವಾಗ ಬರುತ್ತೆಂಬುದು ಮಾತ್ರ ಸ್ಪಷ್ಟವಾಗಿರಲಿಲ್ಲ. ಆದ್ದರಿಂದ ಹೋರಾಟ ನಡೆಯಲೇಬೇಕು, ನಡೆಯಲಿ ಎಂದು ಕೂಗಿದರು. 'ಭಾರತದಿಂದ ಹೊರಡಿ ಬ್ರಿಟಿಷರೇ' ಎಂದು ಹೋದೆಡೆಯಲ್ಲೆಲ್ಲಾ ಘೋಷಿಸುತ್ತಾ ಬಂದರು.

ಮುಸ್ಲಿಂ ಲೀಗಿನ ಅಧ್ಯಕ್ಷ ಜಿನ್ನಾರವರು ಭಾರತವನ್ನು ಇಬ್ಭಾಗಿಸುವ ವಾದವನ್ನು ಮುಂದಿಡುತ್ತಾ ಬಂದರು. ಎಲ್ಲರಿಗಿಂತ ಹೆಚ್ಚಾಗಿ ಸರೋಜಿನಿಗೆ ಇದು ಬಹಳ ಖೇದವನ್ನುಂಟುಮಾಡಿತು. ಹಿಂದೂ ಮುಸಲ್ಮಾನ್ ಐಕ್ಯತೆಗೆ ಅವರಷ್ಟು ದುಡಿದವರಿರಲಿಲ್ಲ. ಮುಸಲ್ಮಾನರು ಬೇರೆ, ಹಿಂದುಗಳು ಬೇರೆ ಎಂಬ ಭಾವನೆ ಅವರ ಮನಸ್ಸಿನಲ್ಲಿ ಬಂದಿರಲೇ ಇಲ್ಲ. ಯಾರು ಏನೆಂದರೂ ಅವರು ಜಿನ್ನಾ ಮುಂತಾದ ಮುಸ್ಲಿಂ ಮುಖಂಡರ ಮನೆಗಳಲ್ಲಿ ಭೋಜನ ಮಾಡುತ್ತಿದ್ದರು. ನಾಲ್ಕಾರು ದಿನಗಳು ಅವರ ಮನೆಯಲ್ಲಿ ತಂಗುತ್ತಿದ್ದರು. ಅವರೊಡನೆ ಚರ್ಚೆ ಮಾಡಿ, ಅವರ ತಪ್ಪನ್ನು ತಿದ್ದಿ ತಮ್ಮ ಕಡೆಗೆ ಒಲಿಸಿಕೊಳ್ಳಬೇಕೆಂಬುದೇ ಅವರ ಇಚ್ಛೆಯಾಗಿತ್ತು. ಆದರೆ ಈಗ ಜಿನ್ನಾರವರ ಹಠಮಾರಿತನವನ್ನು ನೋಡಿ ತಾವು ಮಾಡಿದ

ಕೆಲಸವೆಲ್ಲ ಹರಿಯುವ ನೀರಿನಲ್ಲಿ ಹುಣಸೆ ಹಣ್ಣು ಕಿವಿಚಿದಂತಾಯಿತಲ್ಲಾ ಎಂದು ಪರಿತಾಪಪಟ್ಟರು. ಆದರೂ ಕೊನೆಯ ಯತ್ನವನ್ನು ಮಾಡಿ ನೋಡೋಣವೆಂದು ಅವರು ದೇಶದಾದ್ಯಂತ ತಿರುಗಿ ಹಿರಿಯ ಮುಸಲ್ಮಾನ ಬಂಧುಗಳನ್ನು ಕಂಡು ಮಾತಾಡಿದರು. ಅವರಲ್ಲಿ ಚರ್ಚಿಸಿದರು. ದಮ್ಮಯ್ಯ ಎಂದು ಬೇಡಿಕೊಂಡರು. ಆದರೆ ಮುಸಲ್ಮಾನರು ತಮ್ಮ ಹಠ ಮಾರಿತನ ಬಿಡಲಿಲ್ಲ. 'ಹಿಂದೂಗಳೊಡನೆ ಇರಲು ಸಾಧ್ಯವಿಲ್ಲ, ನಮಗೆ ಬೇರೊಂದು ರಾಜ್ಯಮಾಡಿ ಕೊಡಿ' ಎಂದರು. ಬ್ರಿಟಿಷರಿಗೂ ಅದೇ ಬೇಕಾಗಿತ್ತು—ಅವರೇ ಮುಸಲ್ಮಾನರನ್ನು ಪುಸಲಾಯಿಸಿದ್ದರು. ಹೀಗಿರುವಾಗ ಸರೋಜಿನಿದೇವಿಯ ಪ್ರೇಮದ ಮಾತು ಒಗ್ಗುತ್ತೆಯೆ? ಒಗ್ಗಲಿಲ್ಲ.

ಏನೇ ಆಗಲಿ ಭಾರತಕ್ಕೆ ಸ್ವಾತಂತ್ರ್ಯ ಕೊಡಲು ಸಾಧ್ಯವಿಲ್ಲ ಎಂದು ಹೇಳುತ್ತಿದ್ದರು ಚರ್ಚಿಲ್: "ಭಾರತವನ್ನು ಕಳೆದುಕೊಂಡರೆ ನಾವು ಅಧೋಗತಿಗಿಳಿಯುವೆವು, ದಿಕ್ಕಿಲ್ಲದಂತಾಗುವೆವು, ನಿರ್ನಾಮವಾಗುವೆವು, ಭಾರತ ನಮ್ಮ ರೊಟ್ಟಿ, ಬೆಣ್ಣೆ! ಇನ್ನು ಹೆಚ್ಚು ಹೇಳುವುದೇನು!" ಎಂದರು. ಆದರೆ ದೈವವಶಾತ್ ಅವರು ಬಹು ದಿನ ಪ್ರಧಾನಮಂತ್ರಿಯಾಗಿ ಉಳಿಯಲಿಲ್ಲ. ಯುದ್ಧ ಮುಗಿದನಂತರ ನಡೆದ ಚುನಾವಣೆಯಲ್ಲಿ ಚರ್ಚಿಲ್ಲರ ಕನ್‌ಸರ್ವೆಟೀವ್ ಪಕ್ಷ ಸೋತು ಹೋಯಿತು; ಲಿಬರಲ್ ಪಕ್ಷ ಸರ್ಕಾರವನ್ನು ರಚಿಸಿತು. ಕ್ಲೆಮೆಂಟ್ ಅಟ್ಲೀಯವರು ಪ್ರಧಾನಮಂತ್ರಿಯಾದರು. ಅವರು ಭಾರತದ ಆಸೆಯನ್ನು ಅರ್ಥಮಾಡಿಕೊಂಡರು. ಬಹಳ ದಿವಸ ಭಾರತದ ರೊಟ್ಟಿ ಬೆಣ್ಣೆಯನ್ನು ತಿಂದುಕೊಂಡಿರಲು ಸಾಧ್ಯವಿಲ್ಲ ಎಂಬುದನ್ನು ಅರಿತುಕೊಂಡರು. ಮುಖಂಡರುಗಳನ್ನು ಜೈಲಿನಲ್ಲಿ ಕೊಳೆಹಾಕಿ ಭಾರತವನ್ನು ಹತೋಟಿಯಲ್ಲಿಟ್ಟುಕೊಳ್ಳುವುದು ಸಾಧ್ಯವಿಲ್ಲವೆಂದು ಗೊತ್ತಾಯಿತು. ಆಗ ಅವರು ಮುಖಂಡರುಗಳನ್ನೆಲ್ಲಾ ಬಿಡುಗಡೆ ಮಾಡಿಸಿದರು. ಭಾರತಕ್ಕೆ ಸ್ವಾತಂತ್ರ್ಯ ಕೊಡುವ ಘೋಷಣೆ ಹೊರಡಿಸಿದರು. ಯಾವತ್ತು ಹಿಂದೂ ಮುಸಲ್ಮಾನರು ಪರಸ್ಪರ ಒಪ್ಪಂದಕ್ಕೆ ಬರುವರೋ ಅಂದು ಸ್ವಾತಂತ್ರ್ಯ ಕೊಡುವುದಾಗಿ ತಿಳಿಸಿಬಿಟ್ಟರು. ಇದನ್ನು ಕೇಳಿದ ಚರ್ಚಿಲ್ಲರು 'ಈ ರಾಜಕೀಯ ಗುಂಪುಗಳಿಗೆ ಇಂಡಿಯಾ ಸರ್ಕಾರವನ್ನು ವಹಿಸಿಕೊಡುವುದು ಅಲ್ಪರಿಗೆ ಅಧಿಕಾರವಹಿಸಿದಂತೆ. ಕೆಲವೇ ತಿಂಗಳಲ್ಲಿ ಇವರು ಹೇಳಹೆಸರಿಲ್ಲದಂತಾಗುತ್ತಾರೆ' ಎಂದರು.

೧೯೪೭ ನೇ ಫೆಬ್ರವರಿಯಲ್ಲಿ ಭಾರತಕ್ಕೆ ಹೊಸ ವೈಸರಾಯರೊಬ್ಬರು ಬಂದರು. ಅವರ ಹೆಸರು ಲಾರ್ಡ್ ಮೌಂಟ್‌ಬ್ಯಾಟನ್ ಎಂದು. ವಿಕ್ಟೋರಿಯಾ ರಾಣಿ ೧೮೭೭ ರಲ್ಲಿ ತಾನು 'ಭಾರತದ ಚಕ್ರವರ್ತಿನಿ' ಎಂದು ಘೋಷಿಸಿಕೊಂಡ ದಿನದಿಂದ ಇಲ್ಲಿಯವರೆಗೆ ಹತ್ತೊಂಬತ್ತು ವೈಸರಾಯರು ಆಗಿ ಹೋಗಿದ್ದರು. ಇವರು ಇಪ್ಪತ್ತನೆಯ ವೈಸರಾಯರು. ಅಂತೆಯೇ ಕೊನೆಯ ವೈಸರಾಯರು. ಇನ್ನೂರು ವರ್ಷಗಳ ಕಾಲ ರೊಟ್ಟಿ ಬೆಣ್ಣೆಯನ್ನು ತಿಂದ ಬ್ರಿಟಿಷರು ಭಾರತವನ್ನು ಬಿಟ್ಟುಕೊಡುವ ಕಾಲದಲ್ಲಿ ಸರಿಯಾದ ವೈಸರಾಯರನ್ನೇ ನೇಮಿಸಿದರು. ಅವರಿಗೂ ಅವರ ಪತ್ನಿಗೂ ಗಾಂಧೀಜಿ ಮೇಲೂ ಸರೋಜಿನಿದೇವಿಯ ಮೇಲೂ ಅಪಾರ ಪ್ರೀತಿಗೌರವ.

ಮುಸಲ್ಮಾನರು ದೇಶವನ್ನು ಇಬ್ಭಾಗ ಮಾಡಬೇಕೆಂದು ಹೇಳಿದುದನ್ನು ಹಿಂದೂಗಳು ವಿರೋಧಿಸಿದರು. ಸರಿ ಮಾರಾಮಾರಿ ಪ್ರಾರಂಭವಾಯಿತು. "ಬೇಕಾದರೆ ನನ್ನ ಶರೀರನ್ನು ಎರಡು ತುಂಡು ಮಾಡಿ. ಆದರೆ ದೇಶವನ್ನು ಎರಡು ಮಾಡಬೇಡಿ" ಎಂದು ಹೇಳಿದರು ಗಾಂಧೀಜಿ. ಆದರೆ ಈ ಮಾತುಗಳೆಲ್ಲ ಜಿನ್ನಾರವರಿಗೆ ಹಿಡಿಸಲಿಲ್ಲ. ಅತ್ತ ಬ್ರಿಟಿಷರು "ಏನು ಹೇಳುವಿರಿ? ಭಾರತವನ್ನು ಒಡೆಯೋಣವೇ? ಒಡೆಯದಿದ್ದರೆ ಸ್ವಾತಂತ್ರ್ಯ ಸಾಧ್ಯವಿಲ್ಲ" ಎಂದು ಹೇಳುತ್ತಿದ್ದರು. ದೇಶದಲ್ಲಿ ಅತ್ಯಾಚಾರ, ಅನಾಚಾರ, ಖೂನಿ ದರೋಡೆಗಳು ಹೆಚ್ಚಾದುವು. ಒಂದು ನಗರದಲ್ಲಿ ಮುಸಲ್ಮಾನರ ಅತ್ಯಾಚಾರಕ್ಕೆ ಹೆದರಿ ತಂದೆತಾಯಿಗಳು ತಮ್ಮ ನೂರಿಪ್ಪತ್ತು ಹೆಣ್ಣು ಮಕ್ಕಳುಗಳನ್ನು ಬಲಿ ಕೊಟ್ಟರು. ಇದನ್ನೆಲ್ಲ ನೋಡಿ ಅನಿವಾರ್ಯವಾಗಿ ಗಾಂಧೀಜೀ, ನೆಹರೂ, ಸರೋಜಿನಿ, ಪಟೇಲ್, ಪ್ರಸಾದ್ ಮುಂತಾದ ದೇಶದ ನಾಯಕರು ಭಾರತವನ್ನು ಇಬ್ಭಾಗಿಸುವುದಕ್ಕೆ ಒಪ್ಪಬೇಕಾಯಿತು. 'ಪಾಕಿಸ್ಥಾನ'ವೆಂಬ ಹೊಸ ರಾಷ್ಟ್ರ ಸೃಷ್ಟಿಯಾಗಬೇಕೆಂಬ ನಿರ್ಧಾರವಾಯಿತು. ೧೯೪೭ ನೇ ಜುಲೈ ತಿಂಗಳಿನಲ್ಲಿ ವಿಕ್ಟೋರಿಯಾ ರಾಣಿಯ ಮೊಮ್ಮಗ ಆರನೇ ಜಾರ್ಜ್ ಚಕ್ರವರ್ತಿ ಪಾರ್ಲಿಮೆಂಟಿನಲ್ಲಿ ತಾವು ಇನ್ನು ಮುಂದೆ ಭಾರತದ ಚಕ್ರವರ್ತಿಯಲ್ಲ ಎಂದು ತಿಳಿಸಿದರು. ಅದೇ ವರ್ಷ ಆಗಸ್ಟ್ ಹದಿನೈದನೇ ತಾರೀಕು ಭಾರತದಲ್ಲೆಲ್ಲಾ ಬ್ರಿಟಿಷ್ ಚಕ್ರಾಧಿಪತ್ಯದ ಬಾವುಟ ಕೆಳಗಿಳಿಯಿತು! ಅಶೋಕ ಚಕ್ರವನ್ನೊಳಗೊಂಡ ತ್ರಿವರ್ಣರಂಜಿತ ಭಾರತದ ಬಾವುಟ ಮೇಲೇರಿತು!

# ೧೮. ಗೌರ್ನರ್ ಅಲ್ಲ, ಗೌರ್ನೆಸ್

ಸರೋಜಿನಿದೇವಿ ಸುಮಾರು ಮೂವತ್ತು ವರ್ಷಗಳ ಹಿಂದೆ ಆರಂಭಿಸಿದ್ದ ಸ್ತ್ರೀಸ್ವಾತಂತ್ರ್ಯ ಆಂದೋಲನ ಭಾರತ ಸ್ವಾತಂತ್ರ್ಯದ ಆಂದೋಲನದೊಡನೆ ಸಮ್ಮಿಳಿತವಾಗಿ ಸ್ತ್ರೀಗೂ ಭಾರತಕ್ಕೂ ಮುಕ್ತಿಯನ್ನು ದೊರಕಿಸಿಕೊಟ್ಟಿತ್ತು. ತಮ್ಮ ಕಣ್ಣು ಮುಂದೆ ತಮ್ಮ ಕನಸು ನನಸಾಗುವುದನ್ನು ಕಂಡ ಅವರು ಕವಿವಾಣಿಯಲ್ಲಿ ಭಾರತ ಸ್ವಾತಂತ್ರ್ಯೋದಯವನ್ನು ಹರಸಿದರು. ಎಪ್ಪತ್ತು ವರುಷಗಳ ಜೀವಿತದಲ್ಲಿ ಸರೋಜಿನಿದೇವಿ ನಾನಾ ಕ್ಷೇತ್ರಗಳಲ್ಲಿ ದುಡಿದು ಅನನ್ಯ ಸಾಧಾರಣ ವ್ಯಕ್ತಿತ್ವವನ್ನು ಪಡೆದಿದ್ದರು. ಒಬ್ಬರು ಹೇಳಿದಂತೆ ಅವರು ಪಾಂಡಿತ್ಯದಲ್ಲಿ ಅನುಸೂಯ, ಮೈತ್ರೇಯಿ ಹಾಗೂ ಗಾರ್ಗಿಯರನ್ನೂ, ದೇಶಪ್ರೇಮದಲ್ಲಿ ರಾಣಿ ಲಕ್ಷ್ಮೀಬಾಯಿ ಮತ್ತು ಫ್ರಾನ್ಸಿನ ಜೋನ್ ಆಫ್ ಆರ್ಕಳನ್ನೂ (Joan of Arc), ಶೀಲದಲ್ಲಿ ರಾಣಿ ಅಹಲ್ಯಾಬಾಯಿಯನ್ನೂ, ಸ್ತ್ರೀಸ್ವಾತಂತ್ರ್ಯಗಳಿಸಿದವರಲ್ಲಿ ಶ್ರೀಮತಿ ಪಾಂಕ್‌ಹರ್ಸ್ಟ್ (Pankhurst) ಮತ್ತು ಎಲಿನಾರ್ ರೂಸ್‌ವೆಲ್ಟರನ್ನೂ (Elenor Roosevelt), ಪಾರ್ಲಿಮೆಂಟರಿ ಕಾರ್ಯಕ್ಷೇತ್ರದಲ್ಲಿ ಶ್ರೀಮತಿ ವಿಲ್ಕಿನ್‌ಸನ್ನರನ್ನೂ (Wilkinson), ಸಾಹಿತ್ಯ ಪ್ರತಿಭೆಯಲ್ಲಿ ಚೀನಾದೇಶದ ಶ್ರೀಮತಿ ಪರ್ಲ್ ಬಕ್ಕರನ್ನೂ (Pearl Buck), ರಸಮಯ ಮಾತುಕತೆ ಹಾಗೂ ಸಂಭಾಷಣೆಯಲ್ಲಿ ಮಾಡಾಂ ಡಿ ಸ್ಟೈಯಲರನ್ನೂ (Madame de Stael) ಮತ್ತು ಮಾಡಾಂ ರೋಲಾಂಡರನ್ನೂ (Madame Rolland) ಹೋಲುತ್ತಿದ್ದರು. ಸೋಮರ್‌ಸೆಟ್ ಮೌಘಾಂ (Somerset Mougham) ಎಂಬ ಪ್ರಸಿದ್ಧ ಸಾಹಿತಿ ಸರೋಜಿನಿದೇವಿಯನ್ನು ಒಮ್ಮೆ ಕಂಡಿದ್ದರು. ಕಂಡ ಮಾರನೆಯ ದಿನ ಒಂದು ಭಾಷಣದಲ್ಲಿ ಅವರು ಹೀಗೆ ಹೇಳಿಬಿಟ್ಟರು: 'ಸರೋಜಿನಿ ನಾಯಿಡು ನಾನು ಕಂಡ ಸ್ತ್ರೀ ವ್ಯಕ್ತಿಗಳಲ್ಲೆಲ್ಲಾ ಅತ್ಯಂತ ಅಸಾಧಾರಣ ವ್ಯಕ್ತಿ' ಎಂದು.

ಅಂತಹ ವ್ಯಕ್ತಿಗೆ, ಅವರು ಮಾಡಿದ ಮಹತ್ ಸೇವೆಗೆ ಯಾವುದನ್ನು ಕೊಟ್ಟರೂ ಕಡಮೆಯೇ? ಆಕೆ ಭಾರತದ ವೈಸ್‌ರಾಯ್ ಆಗಲೂ ಅರ್ಹಳು ಎಂದಿದ್ದರು ಗಾಂಧೀಜಿ. ಆದರೆ ಯಾವ ಪ್ರತಿಫಲವನ್ನಾಗಲೀ ಅಧಿಕಾರ ದರ್ಪಗಳನ್ನಾಗಲೀ ಅಪೇಕ್ಷಿಸುವ ವ್ಯಕ್ತಿಯಾಗಿರಲಿಲ್ಲ ಅವರು. ಜೊತೆಗೆ

ವಯಸ್ಸಾಗಿತ್ತು. ಆದರೆ ನೆಹರೂ ಗಾಂಧೀಜಿಯವರ ಒತ್ತಾಯಕ್ಕೆ ಕಟ್ಟು ಬಿದ್ದು ಉತ್ತರಪ್ರದೇಶದ ಗೌರ್ನರಾಗುವುದಕ್ಕೆ ಒಪ್ಪಿದರು. ಮನೆಯ ಹೊಸ್ತಿಲನ್ನು ದಾಟದಿದ್ದ ಭಾರತದ ಹೆಣ್ಣು ಗೌರ್ನರ್! ಬಹು ಆಶ್ಚರ್ಯ! ಆದರೆ ಅಂತಹ ಪವಾಡ ಜರುಗಿತು ಈ ದೇಶದಲ್ಲಿ. ಆ ಪವಾಡ ಜರುಗಿಸಿದ ಕೀರ್ತಿ ಸರೋಜಿನಿದೇವಿಗೆ ಸಲ್ಲಬೇಕು. 'ಒಂದು ರಾಷ್ಟ್ರ ಅದರ ಸ್ತ್ರೀಯರ ಮಟ್ಟಕ್ಕೆ ಮಾತ್ರ ಏರಬಲ್ಲುದು' ಎಂದೊಮ್ಮೆ ಅವರೇ ನುಡಿದಿದ್ದರು. ಅದು ಅಕ್ಷರಷಃ ನಿಜ. ಸ್ತ್ರೀ ಸ್ವಾತಂತ್ರ್ಯಕ್ಕಾಗಿ ಭಾರತದಲ್ಲಿ ದುಡಿದ ಮತ್ತೊಬ್ಬ ಮಹಾ ವ್ಯಕ್ತಿ ಮಾರ್ಗರೆಟ್ ಕಸಿನ್ಸ್ ಎಂಬಾಕೆ ಇಲ್ಲಿಗೆ ಮೂವತ್ತೇಳುವರ್ಷಗಳ ಹಿಂದೆಯೇ "ಸರೋಜಿನಿ ನಾಯಿಡು ನಾನು ಕೇಳಿದ್ದಕ್ಕಿಂತಲೂ ದೊಡ್ಡ ವಳು. ಅವಳ ಕವನಗಳಿಗಿಂತಲೂ ದೊಡ್ಡವಳು. ಅವಳ ದೇಶಪ್ರೇಮ ಆಕೆಯ ಕವಿತೆಗೆ ಪ್ರತಿಸ್ಪರ್ಧಿ ಹಾಗೂ ಪ್ರೇರಕ. ತನ್ನ ದೇಶಕ್ಕಾಗಿ ಆಕೆ ತನ್ನ ಹಾಡನ್ನಾದರೂ ನಿಲ್ಲಿಸಲು ಸಿದ್ಧಳಾಗಿದ್ದಾಳೆ." ಎಂದು ಹೇಳಿದ್ದರು. ಅದು ನಿಜವಾಯಿತು.

ಉತ್ತರಪ್ರದೇಶದ ಗೌರ್ನರಾಗಿ ಸರೋಜಿನಿ ತಮ್ಮ ಪಾತ್ರವನ್ನು ಬಹು ಉಪಯುಕ್ತವಾಗಿ ನಿರ್ವಹಿಸಿದರು; ಬಹು ಅಸದೃಶವಾಗಿ ನೆರವೇರಿಸಿದರು. ಅವರಲ್ಲಿ ಪ್ರತಿಷ್ಠೆಯಾಗಲೀ, ಒಣ ಜಂಭವಾಗಲೀ ಇರಲಿಲ್ಲ. ಗೌರ್ನರವರು ನಿರ್ವಹಿಸಬೇಕಾದ ನಿಶ್ಚಿತ ಕೆಲಸಗಳನ್ನು ಬಹು ಗಾಂಭೀರ್ಯವಾಗಿ, ಬಹು ಲಾವಣ್ಯಯುತವಾಗಿ ನೆರವೇರಿಸುತ್ತಿದ್ದರು. ತಮ್ಮ ಇಡೀ ಇಪ್ಪತ್ತು ತಿಂಗಳ ಅಧಿಕಾರಾವಧಿಯಲ್ಲಿ ಯಾರ ಮನಸ್ಸನ್ನೂ ನೋಯಿಸದಂತೆ ವರ್ತಿಸಿದರು. ಕಾನೂನುಬದ್ಧ ಗೌರ್ನರವರ ಪಾತ್ರವನ್ನು ಬಹು ಪರಿಪೂರ್ಣವಾಗಿ ಸಾಗಿಸಿದರು. ಅವರು ತಮ್ಮ ಪ್ರಭುತ್ವದ ಕಾಲದಲ್ಲಿ ಕೇವಲ ಪ್ರಭುತ್ವ ನಡಸಲಿಲ್ಲ. ಅವರು ಭಾಗವಹಿಸಿದ ಸಂತೋಷಕೂಟಗಳಲ್ಲಿ, ಸಭೆಗಳಲ್ಲಿ ಅಥವಾ ಪಂಡಿತರ ಕೂಟಗಳಲ್ಲಿ ಬೆಳಕು ಬೀರುತ್ತಿದ್ದರು, ಪ್ರಜ್ವಲಿಸುತ್ತಿದ್ದರು. ಬಡಬಗ್ಗರೊಡನೆ, ದಲಿತರೊಡನೆ ಸೇರಿ ಅವರ ಕಷ್ಟಸುಖಗಳನ್ನು ಅರಿಯುತ್ತಿದ್ದರು.

ಅವರು ಮಾಡುತ್ತಿದ್ದ ಅತಿಥಿ ಸತ್ಕಾರ ಉತ್ತರಪ್ರದೇಶದಲ್ಲಿ ಮನೆ ಮಾತಾಗಿತ್ತು. ಭಾರತದ ತಾಯಿಯಂತೆ ಎಲ್ಲಿದ್ದರಲ್ಲಿ ಅತಿಥಿಸತ್ಕಾರ ಯಥೇಚ್ಛವಾಗಿ ನಡೆಸುತ್ತಿದ್ದರು. ಲಕ್ನೌನಿನಲ್ಲಿರಲಿ, ಅಲಹಾಬಾದಿನಲ್ಲಿರಲಿ,

ಸೈನಿತಾಲಿನಲ್ಲಿರಲಿ, ಎಲ್ಲಿರಲಿ ತಾಯಿ ಮಕ್ಕಳಿಗೆ ತೋರಿಸಬೇಕಾದ ಆದರ ತೋರಿಸುತ್ತಿದ್ದರು. ಭಾರತದ ಕೋಗಿಲೆ ಭಾರತ ಸ್ವಾತಂತ್ರ್ಯದ ಪೀಯೂಷ ಪಾನಮಾಡಿಸುವ ಪವಿತ್ರ ತಾಯಾದಳು. ರಸ್ಕಿನರು ಬೇರೆ ಸಂದರ್ಭದಲ್ಲಿ ಹೇಳಿದಂತೆ ಅವರು ಮುಂದಾಳತ್ವ ವಹಿಸಿದ್ದಕ್ಕಿಂತ ಹೆಚ್ಚಾಗಿ, ಅಧಿಕಾರ ನಡಸುವುದಕ್ಕಿಂತ ಹೆಚ್ಚಾಗಿ ಪ್ರೇರಕರೂ ಮಾರ್ಗದರ್ಶಕರೂ ಆಗಿದ್ದರು. ಅವರು ಹಿಂದಿನ ರಮಣೀರತ್ನಗಳನ್ನೂ ಇಂದಿನ ಸ್ವತಂತ್ರ ವಿಚಾರಣಾ ಬುದ್ಧಿಯುಳ್ಳ ಸೂಕ್ಷ್ಮಮತಿಯ ಹಾಗೂ ತಿಳಿವಳಿಕೆಯ ಮಹಿಳಾ ಮುತ್ತುಗಳನ್ನೂ ಪೋಣಿಸುವ ಅಪೂರ್ವ ಸುವರ್ಣದೆಳೆಯಂತಿದ್ದರು. ಸಾವಿತ್ರಿ, ದಮಯಂತಿ, ಪದ್ಮಿನಿ ಹಾಗೂ ಮೀರಾಬಾಯಿಯವರ ಬಗ್ಗೆ ನಾವು ಕೇಳಿರುವ ಸತ್ಯಶೀಲದ ಕಥೆಗಳು ಸುಳ್ಳಲ್ಲ ಎಂಬುದನ್ನು ಸರೋಜಿನಿದೇವಿ ತೋರಿಸಿಕೊಟ್ಟರು. ಆತ್ಮನಿರ್ಧಾರ, ಆತ್ಮಾವಲಂಬನ, ಆತ್ಮ ಸಮರ್ಪಣೆ, ಆತ್ಮಾಭಿವ್ಯಕ್ತಿ—ಇವರಲ್ಲಿಯೂ ಇದ್ದುವು. ಆದರೆ ಇವು ಸರೋಜಿನಿಯಲ್ಲಿ ನವೀನರೀತಿಯಲ್ಲಿ ಕಾಣಬರುತ್ತಿದ್ದುವು. ಈ ಮಹಾಗುಣಗಳು ಇಂದಿನ ಹಾಗೂ ಮುಂದಿನ ಭಾರತ ಸ್ತ್ರೀಯರಿಗೆ ಮೇಲ್ಪಂಕ್ತಿಗಳು.

ಸೀತೆಯಂತಹ ಮಹಾವ್ಯಕ್ತಿಯ ಪ್ರಜ್ವಲಕ್ಕೆ ರಾಮನಂತಹ ಮಹಾಮಹಿಮನ ಸಂಪರ್ಕ ಬೇಕಾಯಿತು. ಅಂತೆಯೇ ಸರೋಜಿನಿದೇವಿಯ ವ್ಯಕ್ತಿತ್ವ ವಿಕಸನಕ್ಕೆ ಮಹಾತ್ಮನೊಬ್ಬನ ಸಹವಾಸ ಬೇಕಾಯಿತು. ನಾಲ್ವರು ಮಹಾವ್ಯಕ್ತಿಗಳು ಸರೋಜಿನಿದೇವಿಯ ಜೀವನದ ಮೇಲೆ ತಮ್ಮ ಮುದ್ರೆಯೊತ್ತಿದ್ದರು. ತಂದೆತಾಯಿಗಳು ತಮ್ಮ ದೈವದತ್ತ ಗುಣಗಳನ್ನೂ ಆ ಗುಣಗಳ ವಿಕಾಸನೆಗೆ ಬೇಕಾದ ಅವಕಾಶಗಳನ್ನೂ ಒದಗಿಸಿಕೊಟ್ಟರು. ಎಡ್ಮಂಡ್ ಗಾಸೆಯವರು ಕವಿತಾ ಪ್ರತಿಭೆಗೆ ಸರಿಯಾದ ಮಾರ್ಗ ತೋರಿಸಿದರು. ಗೋಖಲೆಯವರು ನಿರಾಶೆಗೊಂಡಿದ್ದ ಮುರಿದ ರೆಕ್ಕೆಯ ಹಕ್ಕಿಗೆ ಹಾರುವುದನ್ನು ಕಲಿಸಿದರು. ಆದರೆ ಗಾಂಧೀಜಿ ಎಸಗಿದ್ದು ಅಸಾಧಾರಣವಾಗಿತ್ತು. ಸರೋಜಿನಿಯ ಅನೇಕ ದೈವದತ್ತ ಶಕ್ತಿಗಳನ್ನು ರಾಷ್ಟ್ರದ ಹಾಗೂ ಮಾನವ ಲೋಕದ ಹಿತಕ್ಕಾಗಿ ಮುಡುಪಿಡುವಂತೆ ಮಾಡಿದವರು ಗಾಂಧೀಜೀ. ಅಂತಹ ಮಹನೀಯ ದೇಶದ ಸ್ವಾತಂತ್ರ್ಯದ ಉದಯದಲ್ಲಿಯೇ ಕಣ್ಮರೆಯಾದದ್ದು ಸರೋಜಿನಿಗೆ ಸಿಡಿಲು ಬಡಿದಂತಾಯಿತು. ಮಗಳ ಅಭ್ಯುದಯವನ್ನು ನೋಡಿ ತಂದೆ

ಆನಂದಿಸುವನೆಂದು ಭಾವಿಸಿದ್ದರು ಸರೋಜಿನಿದೇವಿ. ಆ ಮಹಾತ್ಮನ ಆಶೀರ್ವಾದ ತನ್ನ ಕೊನೆಯ ಗಳಿಗೆಯವರೆಗೆ ಸಜೀವವಾಗಿ ಇರುವುದೆಂದು ತಿಳಿದಿದ್ದರು ಅವರು. ಆದರೆ ಆ ಭಾರತ ಜ್ಯೋತಿಯನ್ನು ಇದ್ದಕ್ಕಿದ್ದಂತೆ ನರಾಧಮನೊಬ್ಬ ಆರಿಸಿಬಿಟ್ಟ. ಗುಂಡಿನೇಟು ತಿಂದ ಆ ಅಹಿಂಸಾವಾದಿ, ಸತ್ಯ ವ್ರತ 'ಹಾ ರಾಮ ಹಾ ರಾಮ' ಎಂದು ಪ್ರಾಣ ತೊರೆದ. ಅಂದಿನ ದುಃಖ ಹೇಳತೀರದು. ಇಡೀ ಪ್ರಪಂಚದಲ್ಲಿ ಹಿಂದೆ ಯಾವಾಗಲೂ ಅಷ್ಟೊಂದು ಶೋಕಕ್ಕೆ ಎಡೆಗೊಟ್ಟ ವ್ಯಕ್ತಿ ಇರಲಿಲ್ಲ; ಮುಂದೆ ಇರಲಾರರು. ಯಾರೊಬ್ಬ ರಿಗೂ ಮಾತೇ ಹೊರಡದಾಯಿತು. ಅಂತಹ ಸನ್ನಿವೇಶದಲ್ಲಿ ಸೂತಕದ ಉಡುಪು ಧರಿಸಿದ ಮಗಳು ಕೊಟ್ಟ ಸಂದೇಶ, ಇತ್ತ ಧೈರ್ಯ ಅಸದೃಶವಾಗಿ ದ್ದುವು: "ನಾನು ಇಂದು ಮಾತನಾಡಬೇಕಾದ ಆವಶ್ಯಕತೆ ಕಾಣುವುದಿಲ್ಲ. ಪ್ರಪಂಚದ ವಾಣಿಗಳು ಆಗಲೇ ಮಾತನಾಡಿವೆ ಅನೇಕ ಭಾಷೆಗಳಲ್ಲಿ. ನಮ್ಮ ದುಃಖಕ್ಕೆ ಕಾಲವಲ್ಲ ಇದು. ಎದೆ ಬಡಿದುಕೊಂಡು, ತಲೆ ಹರಿದುಕೊಂಡು ಅಳುವ ಕಾಲ ಮುಗಿಯಿತು. ಎದ್ದು ನಿಂತು 'ಪ್ರತಿಭಟನೆಗೆ ನಾವು ಸಿದ್ಧ ರಾಗಿದ್ದೇವೆ; ಆ ಮಹಾತ್ಮನನ್ನು ಪ್ರತಿಭಟಿಸಿದ ಶಕ್ತಿಯೊಡನೆ ಹೋರಾಡಲು ನಡುಕಟ್ಟಿ ನಿಂತಿದ್ದೇವೆ.' ಎಂದು ಹೇಳುವ ಕಾಲ ಸನ್ನಿಹಿತವಾಗಿದೆ. ನಾವು ಅವನ ಜೀವಂತ ಸಂಕೇತಗಳು, ಅವನ ಸಿಪಾಯಿಗಳು. ಯುದ್ಧಸನ್ನದ್ಧವಾದ ಈ ಪ್ರಪಂಚದಲ್ಲಿ ಅವನ ಬಾವುಟವನ್ನು ಹಿಡಿದ ಯೋಧರು ನಾವು. ಸತ್ಯವೇ ನಮ್ಮ ಬಾವುಟ. ಅಹಿಂಸೆಯೇ ನಮ್ಮ ಗುರಾಣಿ. ಆತ್ಮನಿರ್ಧಾರವೇ ಒಂದೇಟೂ ಹೊಡೆಯದೆ ಗೆಲ್ಲುವ ನಮ್ಮ ಕತ್ತಿ.... ಈಗ ಇಲ್ಲಿ, ಈ ಗಳಿಗೆಯಲ್ಲಿ, ಯಾರಿರಲಿ ಯಾರಿಲ್ಲದಿರಲಿ, ಈ ಕಂಪಿಸುವ ಧ್ವನಿಯನ್ನು ಕೇಳುವ ಪ್ರಪಂಚದ ಮುಂದೆ ನಾನು ಪ್ರತಿಜ್ಞೆ ಮಾಡುವೆನು. ಮೂವತ್ತು ವರುಷಗಳ ಹಿಂದೆ ಪ್ರತಿಜ್ಞೆ ಮಾಡಿದಂತೆ: ಈ ದೇಹ ಮಹಾತ್ಮನಿಗೆ ಮುಡುಪೆಂದು.

"ನನ್ನ ಗುರುವಿನ, ನನ್ನ ಮುಖಂಡನ, ನನ್ನ ತಂದೆಯ ಆತ್ಮ ಶಾಂತಿ ಯಿಂದಿರಲಿ—ಶಾಂತಿಯಿಂದಿರಲಿ. ಎಲೆ ನನ್ನ ತಂದೆ, ಮಲಗಬೇಡ. ಮಲಗ ದೆಯೆ ನಮ್ಮ ಪ್ರತಿಜ್ಞೆಯನ್ನು ನಮಗೆ ಜ್ಞಾಪಕ ಮಾಡಿಕೊಡುತ್ತಿರು. ನಮ್ಮ ಮಾತಿನಂತೆ ನಾವು ನಡೆಯುವಂತೆ ಮಾಡು. ನಿನ್ನ ಉತ್ತರಾಧಿಗಳು, ನಿನ್ನ ವಂಶಜರು, ನಿನ್ನ ಕನಸುಗಳ ಕಾಪಿನವರು, ನಿನ್ನ ನಿಯತಿಯ ನೇರವೇರಿ ಸುವವರು—ಇವರೆಲ್ಲರೂ ತಮ್ಮ ಮಾತನ್ನು ಮರೆಯದಂತೆ ಮಾಡು."

ಎಂತಹ ವಾಣಿ! ಎಪ್ಪತ್ತು ಮಾಗಿಗಳ ಪೆಟ್ಟನ್ನು ತಿಂದ ಆ ಮುದುಕಿಯ ಬಾಯಲ್ಲಿ ಎಂತಹ ಧೀರ ಮಾತುಗಳು! ಎಷ್ಟು ಭಕ್ತಿ ಆ ಮಹಾತ್ಮನಲ್ಲಿ! ಆ ಮಾತುಗಳನ್ನು ಆಗಿಗಿಂತ ಈಗ, ಹನ್ನೊಂದು ವರ್ಷಗಳನಂತರ, ಹೇಳುವವರು ಬೇಕಾಗಿದೆ. ಆದರೆ ಹೇಳುವವರಿಲ್ಲ. ಹೇಳಿದರೂ ಅಷ್ಟೊಂದು ಭಾವಪೂರ್ಣವಾಗಿ ಹೇಳುವವರಿಲ್ಲ.

ಮಹಾತ್ಮನನ್ನು ಚಿತೆಗರ್ಪಿಸಿ ಸರೋಜಿನಿ ಕಣ್ಣೀರೊರಸಿಕೊಂಡು ತಮ್ಮ ಕರ್ತವ್ಯಕ್ಕೆ ಹಿಂದಿರುಗಿದರು. ಅವರಲ್ಲಿ ತೋರಿಕೆಯ ಗುಣಗಳಾವುವೂ ಇರಲಿಲ್ಲ. ಎಲ್ಲ ಕೆಲಸಗಳಲ್ಲೂ ಅವರು ಸ್ವಾಭಾವಿಕವಾದ ಮಾನವೀಯತೆಯಿಂದ ವರ್ತಿಸುತ್ತಿದ್ದರು. ಗೌರ್ನರಾದ ಅವರು ಲಕ್ನೌ ಯೂನಿವರ್ಸಿಟಿಯ ಕುಲಪತಿಯಾಗಿಯೂ ಇದ್ದರು. ವಿದ್ಯಾರ್ಥಿಗಳಿಗಾಗಿ ಅವರ ಹೃದಯ ಮಿಡಿಯುತ್ತಿತ್ತು. ತನ್ನ ಮಕ್ಕಳು ಮೇಲೆ ಬಂದರೆ ಸಾಕು, ಅವರ ಜೀವನ ಉನ್ನತವಾದರೆ ಸಾಕು ಎಂಬುದೊಂದೇ ಆಸೆಯಿಂದ ಯಾವ ವಿದ್ಯಾರ್ಥಿನಿಲಯಗಳಿಂದ ಆಹ್ವಾನ ಬರಲಿ, ವಿಶ್ವವಿದ್ಯಾನಿಲಯದ ಸಂಘಗಳಿಂದ ಕರೆ ಬರಲಿ ಸಂತೋಷದಿಂದ ಒಪ್ಪಿಕೊಳ್ಳುತ್ತಿದ್ದರು. ವಿದ್ಯಾರ್ಥಿಗಳ ಮಧ್ಯೆ ಇದ್ದಾಗ ಅವರನ್ನು ನೈತಿಕವಾಗಿಯೂ ವೈಯುಕ್ತಿಕವಾಗಿಯೂ ಭವ್ಯ ಜೀವನ ನಡೆಸಬೇಕೆಂದು ಹುರಿದುಂಬಿಸುತ್ತಿದ್ದರು. ಯುವಕ ಪ್ರಪಂಚದಲ್ಲಿ ಸರೋಜಿನಿದೇವಿಯವರ ಬಗ್ಗೆ ಇದ್ದಷ್ಟು ಆದರಣೆ ಮತ್ತಾರಿಗೂ ಇರಲಿಲ್ಲ. ಒಂದು ಸಲ ಅವರು ಹೇಳಿದ್ದರು: "ನಾನು ತೀರಿಕೊಂಡ ಮೇಲೆ, ನನ್ನ ಗೋರಿಯ ಮೇಲೆ, 'ನಾನು ಭಾರತದ ಯುವಕವೃಂದವನ್ನು ಪ್ರೀತಿಸಿದೆ' ಎಂದು ಕೆತ್ತಿರಿ" ಎಂದು.

ಎಪ್ಪತ್ತು ವರ್ಷಗಳಾದರೂ ಅವರ ಹಾಸ್ಯಕ್ಕಾಗಲೀ ವಿನೋದಕ್ಕಾಗಲೀ ಚ್ಯುತಿ ಬರಲಿಲ್ಲ. ಒಮ್ಮೆ ಒಂದು ಸಭೆಯಲ್ಲಿ ಭಾಷಣಮಾಡುತ್ತಾ ತಾವು ಗೌರ್ನರ್ ಅಲ್ಲ ಗೌರ್ನೆಸ್ (Governess) ಎಂದು ಚಮತ್ಕಾರದ ಮಾತುಗಳಾಡಿ ಎಲ್ಲರನ್ನೂ ನಗಿಸಿದ್ದರು. ಇಂಗ್ಲಿಷಿನಲ್ಲಿ 'ಗೌರ್ನೆಸ್' ಎಂಬ ಪದ 'ಗೌರ್ನರ್' ಎಂಬ ಪದದ ಸ್ತ್ರೀಲಿಂಗವಾಗುವುದಿಲ್ಲ. 'ಗೌರ್ನೆಸ್' ಎಂದರೆ ಮನೆಯಲ್ಲಿ ಮಕ್ಕಳಿಗೆ ಪಾಠ ಹೇಳಿಕೊಡುವ ಉಪಾಧ್ಯಾಯಿನಿ ಅಥವ ಶಿಕ್ಷಕಳು ಎಂದರ್ಥ. ನಿಜವಾಗಿಯೂ ಅವರು ಉತ್ತರ ಪ್ರದೇಶದ ಗೌರ್ನೆಸ್ ಆಗಿದ್ದರು.

ಒಮ್ಮೆ ಅವರನ್ನು ಒಂದು ಸಮಾರಂಭಕ್ಕೆ ಆಹ್ವಾನಿಸಿದ್ದರು. ನಿರ್ಧರಿಸಿದ್ದ ಕಾಲಕ್ಕೆ ಸರಿಯಾಗಿ ಸರೋಜಿನಿದೇವಿ ಸ್ಥಳಕ್ಕೆ ಹೋದರು. ಆದರೆ ವ್ಯವಸ್ಥಾಪಕರೇ ಇನ್ನೂ ಬಂದಿರಲಿಲ್ಲ. ಅದಕ್ಕೆ ಸಿಟ್ಟಾಗಲಿಲ್ಲ ಸರೋಜಿನಿದೇವಿ. ಸ್ವಲ್ಪ ಹೊತ್ತು ಕಾದನಂತರ ವ್ಯವಸ್ಥಾಪಕರು ಬಂದರು. ಆಗ ಸರೋಜಿನಿ "ಕಾಲ ಬದಲಾಯಿಸಿತು. ಗೌರ್ನರಿಗಾಗಿ ಕಾಯುವ ಬದಲು ಗೌರ್ನರ್ ಕಾಯುವ ಕಾಲ ಬಂತು" ಎಂದು ಹಾಸ್ಯಮಾಡಿದರು.

ಹೆಸರಾಂತ ವಿಜ್ಞಾನಿ ಕೆ. ಎಸ್. ಕೃಷ್ಣನ್‌ರವರ ಮಗಳು ಶ್ರೀಮತಿ ತಿರುವಡಿ ಎಂಬುವರೊಡನೆ ಒಮ್ಮೆ ಮಾತನಾಡುತ್ತಾ ಸರೋಜಿನಿದೇವಿ 'ನಿಮ್ಮ ತಂದೆ ಬಹಳ ವಿನಯಶೀಲರು.' ಎಂದರಂತೆ. ಅದಕ್ಕೆ ಶ್ರೀಮತಿ ತಿರುವಡಿಯವರು 'ಏನು ಮಾಡುವುದು. ನಾನೂ ಹಾಗೆ' ಎಂದುತ್ತರವಿತ್ತರು. ಆಗ ಸರೋಜಿನಿ 'ಸರಿಯಮ್ಮ, ವಿನಯಶೀಲತೆ, ನಿನಗೆ ಒಪ್ಪುತ್ತದೆ. ಆದರೆ ನಿಮ್ಮ ತಂದೆಗೆ ಅದೊಂದು ಕೊರತೆ.' ಎಂದರು.

ಸರೋಜಿನಿದೇವಿ ಭಾಗವಹಿಸಿದ ಕೊನೆಯ ಸಮಾರಂಭ ೧೯೪೯ನೇ ಜನವರಿ ಇಪ್ಪತ್ತೆಂಟರಲ್ಲಿ ನಡೆದ ಲಕ್ನೋ ವಿಶ್ವವಿದ್ಯಾನಿಲಯದ ರಜತೋತ್ಸವದ ಕಾನ್‌ವೊಕೇಷನ್. ಆ ಕಾನ್‌ವೊಕೇಷನ್ನಿನಲ್ಲಿ ನೆಹರೂ ಅವರಿಗೆ ಡಾಕ್ಟರ್ ಆಫ್ ಲಿಟರೇಚರ್ (Doctor of Literature) ಮತ್ತು ಪಶ್ಚಿಮಬಂಗಾಳದ ಗೌರ್ನರ್ ಆಗಿದ್ದ ಕಟ್ಜು ಅವರಿಗೆ ಡಾಕ್ಟರ್ ಆಫ್ ಲಾಸ್ (Doctor of Laws) ಎಂಬ ಗೌರವ ಡಿಗ್ರಿಗಳನ್ನು ಕೊಡಲಾಯಿತು. ಆ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸರೋಜಿನಿ ಡಾ. ಕಟ್ಜು ಅವರ ಕಡೆಗೆ ತಿರುಗಿ ನಕಲಿ ಮಾಡುತ್ತ "ಇಂದು ಭಾರತದ ಗೌರ್ನರುಗಳೆಲ್ಲ ನಕಲಿಗಳಾಗಿದ್ದಾರೆ" ಎಂದರು. ಇಡೀ ಸಭೆ ನಗುವಿನಲ್ಲಿ ಮುಳುಗಿತು.

ವಿನೋದ, ಹಾಸ್ಯ, ನಗು, ಸರೋಜಿನಿದೇವಿಯವರ ಹುಟ್ಟುಗುಣ. ಅದಿಲ್ಲದೆ ಅವರ ಮಾತಿಲ್ಲ, ಕೆಲಸವಿಲ್ಲ. ಅದಕ್ಕೋಸ್ಕರವೇ ಜನ "ಸರೋಜಿನಿಗೆ ಅನ್ನದ ಊಟ ಎರಡು ಬೇಕಾದರೆ ನಕಲಿಯ ಊಟ ಮೂರು ಬೇಕು" ಎಂದು ಅನ್ನುತ್ತಿದ್ದರು.

## ೧೯. ರಾಷ್ಟ್ರಕ್ಕೆ ಕೊನೆಯ ವಂದನೆ

ಈ ಸಮಾರಂಭ ಮುಗಿದ ಮೇಲೆ ಅವರು ಮತ್ತೊಂದು ಸಮಾರಂಭದಲ್ಲಿ ಭಾಗವಹಿಸಲಿಲ್ಲ. ಅವರಿಗೆ ತಮ್ಮ ಸಾವಿನ ಸೂಚನೆ ಇತ್ತೋ ಏನೋ. ಏಕೆಂದರೆ ೧೯೪೮ ನೇ ಜೂನ್ ತಿಂಗಳಿನಲ್ಲಿ ನೈನಿತಾಲಿನಲ್ಲಿ ನಡೆದ ಸಾರ್ವಜನಿಕ ಸಭೆಯೊಂದರಲ್ಲಿ ಭಾಷಣಮಾಡುತ್ತ ಮುಂದಿನ ವರ್ಷ ತಾವು ಬರುವುದಿಲ್ಲವೆಂದೂ, ಗೌರ್ನರಾಗಿ ಉಳಿಯುವುದಿಲ್ಲವೆಂದೂ ಹೇಳಿದ್ದರು. ಸೈನ್ಸ್ ಕಾಂಗ್ರೆಸ್ಸಿನಲ್ಲಿ ಸರ್ ಸಿ. ವಿ. ರಾಮನ್‌ರವರೊಡನೆ ಮಾತನಾಡುತ್ತ ಅದೇ ರೀತಿಯ ಅರ್ಥ ಬರುವ ಮಾತುಗಳನ್ನಾಡಿದ್ದರು. ಎಲ್ಲಕ್ಕಿಂತ ಮೊದಲು ೧೯೪೭ ನೇ ಇಸವಿ ಮಾರ್ಚಿ ತಿಂಗಳಲ್ಲಿ ದೆಹಲಿಯಲ್ಲಿ ನಡೆದ ಏಷ್ಯಾ ದೇಶಗಳ ಸಮ್ಮೇಳನದ (Asian Relations Conference) ಅಧ್ಯಕ್ಷತೆಯನ್ನು ವಹಿಸಿದಾಗ ಸಾವು ಜೀವನದ ಬಗ್ಗೆ ನುಡಿದಿದ್ದರು. ಅಂತಹ ಘನ ಸಮ್ಮೇಳನದ ಅಧ್ಯಕ್ಷತೆ ವಹಿಸುವ ಮಹಾ ಗೌರವ ಒದಗಿದ ಸಂದರ್ಭದಲ್ಲಿ ತಮ್ಮ ಸೊಗಸು ಮಾತಿನಲ್ಲಿ, ವಾಗ್ವೈಖರಿಯಲ್ಲಿ ಏಷ್ಯಾ ದೇಶಕ್ಕೆ ತಮ್ಮ ಸಂದೇಶವನ್ನು ಬೀರುತ್ತ 'ಈ ಪ್ರಪಂಚದ ಮಹೋನ್ನತ ವ್ಯಕ್ತಿಗಳಲ್ಲಿ ಒಬ್ಬರಾದ ನನ್ನ ತಂದೆ ಸಾಯುವಾಗ ಸಾವೆಂಬುದೂ ಇಲ್ಲ, ಹುಟ್ಟೆಂಬುದೂ ಇಲ್ಲ. ಈ ಜೀವನದಲ್ಲಿ ಆತ್ಮ ಮೇಲೆ ಮೇಲೆ ಏರಲು ಪ್ರಯತ್ನಿಸುವ ವಿಕಾಸವೇ ಈ ಹುಟ್ಟು ಸಾವೆಂದು ಸಾರಿದ್ದರು.' ಎಂದು ಹೇಳಿ ಸಾವನ್ನು ಸ್ಮರಿಸಿಕೊಂಡಿದ್ದರು.

೧೯೪೯ ನೇ ಫೆಬ್ರುವರಿ ಹತ್ತರಿಂದ ಸರೋಜಿನಿದೇವಿಯ ಆರೋಗ್ಯ ಕೆಟ್ಟಿತು. ಹನ್ನೊಂದನೇ ತಾರೀಕು ರೈಲಿನಲ್ಲಿ ದೆಹಲಿಗೆ ಹೋದರು. ದಾರಿಯಲ್ಲಿ ಒಮ್ಮೆ ವಾಂತಿಯಾಯಿತು. ಆದರೂ ದೆಹಲಿಯಲ್ಲಿ ತಮ್ಮ ಕಾರ್ಯಕ್ರಮವನ್ನೆಲ್ಲ ತಪ್ಪದೆ ನಡೆಸಿಕೊಟ್ಟರು. ಹದಿನೈದನೇ ತಾರೀಕು ಲಕ್ನೋ ನಗರಕ್ಕೆ ಹಿಂದಿರುಗಿದರು. ವಿಪರೀತ ತಲೆನೋವು ಬರತೊಡಗಿತು. ಉಸಿರಾಡಲು ತೊಂದರೆಯಾಯಿತು. ಫೆಬ್ರುವರಿ ಇಪ್ಪತ್ತೆಂಟನೇ ತಾರೀಕು ಆಮ್ಲಜನಕ ಕೊಡಲು ಪ್ರಾರಂಭಿಸಿದರು. ಹಲವಾರು ದಿನಗಳು ಆಮ್ಲಜನಕ ಕೊಟ್ಟರು. ಸುಪ್ರಸಿದ್ಧ ಡಾಕ್ಟರುಗಳು ಬಂದು ನೋಡಿ

ಕೈಲಾದ ಚಿಕಿತ್ಸೆ ನಡೆಸಿದರು. ಈ ಕಾಯಿಲೆ ಕೊನೆಯ ಕಾಯಿಲೆಯಾಯಿತು. ಸಾವನ್ನು ತಪ್ಪಿಸಿಕೊಳ್ಳಲು ಸಾಧ್ಯವಾಗಲಿಲ್ಲ. ಮಾರ್ಚಿ ತಿಂಗಳು ಎರಡನೇ ತಾರೀಕು ಬೆಳಗಿನ ಜಾವ ಮೂರುವರೆಗಂಟೆ. ಲಕ್ನೌ ನಗರ ಇನ್ನೂ ನಿದ್ದೆಯಲ್ಲಿ ಮಲಗಿತ್ತು. ಗೌರ್ನಮೆಂಟ್ ಹೌಸಿನಲ್ಲಿ ಹಾಸಿಗೆಯ ಮೇಲೆ ನರಳುತ್ತಾ ಮಲಗಿದ್ದ ಸರೋಜಿನಿದೇವಿ ನರ್ಸೊಬ್ಬಳಿಗೆ ಕೆಲವು ಹಾಡುಗಳನ್ನು ಹಾಡುವಂತೆ ಹೇಳಿದರು. ಆಕೆ ಹಾಡಿದಳು. ಹಾಡುಗಳನ್ನು ಆಲಿಸುತ್ತ ಮುಚ್ಚಿದ ಕಣ್ಣುಗಳನ್ನು ಮತ್ತೆ ತೆರೆಯಲಿಲ್ಲ ಸರೋಜಿನಿದೇವಿ. ಬೆಳಕು ಹರಿದಾಗ ಸುದ್ದಿ ದೇಶಕ್ಕೆಲ್ಲಾ ಹಬ್ಬಿತು. ಅಲಹಾಬಾದಿಗೆ ಯಾತಕ್ಕೋ ಹೋಗಿದ್ದ ಮಗಳು, ಅವರ ನಿರಂತರ ಸಹಪಾಠಿ, ಪದ್ಮಜಾ ಓಡಿಬಂದಳು. ಹೈದರಾಬಾದಿನಲ್ಲಿ ಕಾಯಿಲೆಯಿಂದ ನರಳುತ್ತಿದ್ದ ಡಾ. ನಾಯಿಡು ಅವರು ಮಗಳೊಡನೆ ಫೋನಿನಲ್ಲಿ ಮಾತನಾಡಿದರು. ಬಾಯಿಂದ ಮಾತುಗಳು ಹೊರಡಲಾರದೆ ಹೋದುವು. 'ಏನು ಮಾಡಲಿ, ಪದ್ಮಜಾ. ನನ್ನಿನಿಯಳ ಕೊನೆಯ ದರ್ಶನದ ಭಾಗ್ಯ ನನಗಿಲ್ಲವಾಯಿತಲ್ಲಾ ?' ಎಂದರು. ಅಪ್ಪನನ್ನು ಫೋನಿನಲ್ಲಿಯೇ ಸಂತೈಸುತ್ತ ಮಗಳು 'ಅಪ್ಪಾ ದುಃಖಪಡಬೇಡ. ನಿನ್ನ ಆರೋಗ್ಯ ನೋಡಿಕೊ' ಎಂದಳು. ಮಗ ಡಾ. ಜಯಸೂರ್ಯ ತಾಯಿಗೆ ಮಾಡಿದ ವೈದ್ಯವೆಲ್ಲ ವ್ಯರ್ಥವಾಗಿತ್ತು. ಅವರು ತಾಯಿಯ ಕಾಲ ಬಳಿ ಅಳುತ್ತ ನಿಂತರು. ಲೀಲಾಮಣಿಯ ದುಃಖ ಹೇಳತೀರದಾಗಿತ್ತು. ದೆಹಲಿಯಿಂದ ಪ್ರಧಾನಮಂತ್ರಿ ನೆಹರು, ಉಪ ಪ್ರಧಾನಿ ಪಟೇಲ್, ಇಡೀ ಮಂತ್ರಿಮಂಡಳದ ಸದಸ್ಯರು, ಗೌರ್ನರ್ ಜನರಲ್ ರಾಜಾಜಿ ಮುಂತಾದ ದೇಶದ ನಾಯಕರು ದುರ್ವಾರ್ತೆಯನ್ನು ಕೇಳಿ ಓಡಿ ಬಂದರು. ತಮ್ಮ ಸಂಗಾತಿಯನ್ನು ಕಳೆದುಕೊಂಡೆವೇ ಎಂದು ದುಃಖಿಸಿದರು.

ಮುಂದಿನ ಸ್ಮಶಾನಯಾತ್ರೆಗೆ ಸಿದ್ಧವಾಯಿತು. ಮಿಲಿಟರಿ ವಾಹನವೊಂದನ್ನು ಅಲಂಕರಿಸಿದರು. ಅದರ ಮೇಲೆ ತ್ರಿವರ್ಣ ಬಾವುಟದಿಂದ ಮುಚ್ಚಿದ್ದ ಕಳೇಬರವನ್ನು ಇರಿಸಿದರು. ಕಳೇಬರದ ಸುತ್ತ ಗಾಡಿಯ ಮೇಲೆ ಜವಾಹರ್‌ಲಾಲ್‌ನೆಹರು, ಪಂಡಿತ ಪಂತ್, ಡಾ॥ ಜಯಸೂರ್ಯ, ಪದ್ಮಜ ಮತ್ತು ಲೀಲಾಮಣಿ ಕುಳಿತರು. ಸಕಲ ಮಿಲಿಟರಿ ಗೌರವದೊಡನೆ ಸ್ಮಶಾನ ಯಾತ್ರೆ ಪ್ರಾರಂಭವಾಯಿತು. ಅಸಂಖ್ಯಾತಜನ ಬೀದಿಗಳುದ್ದಕ್ಕೂ ನೆರೆದು ಭಾರತದ ಮಹಾ ಮಹಿಳೆಗೆ ತಮ್ಮ ಅಂತ್ಯ ಗೌರವವನ್ನು ಅರ್ಪಿಸಿದರು.

ಸ್ಮಶಾನವನ್ನು ಮುಟ್ಟಿದಾಗ ಇಡೀ ಲಕ್ನೋ ನಗರವೇ ಅಲ್ಲಿಗೆ ಬಂದಿತ್ತು.

ಗೌರ್ನರ್ ಜನರಲ್ ರಾಜಾಜಿಯವರು ದುಃಖಿಸುತ್ತಲೇ ನಾಲ್ಕು ಮಾತು ಆಡಿದರು. ಉತ್ತರಪ್ರದೇಶದ ಪ್ರಧಾನಿ ಪಂತರು ಮಾತಾಡಲೆಂದು ಎದ್ದು ನಿಂತು ಒಂದು ಮಾತನ್ನೂ ಆಡಲಾರದೆ ಕುಸಿದು ಬಿದ್ದರು. ನೆಹರೂ ಅವರಿಗೆ ಎದ್ದು ನಿಲ್ಲುವುದಕ್ಕೇ ಆಗಲಿಲ್ಲ; ಸುಮ್ಮನೆ ಕುಳಿತರು.

ಸಿದ್ಧವಾಗಿದ್ದ ಚಿತೆಯ ಮೇಲೆ ಕಳೇಬರವನ್ನಿಟ್ಟರು. ಜಯಸೂರ್ಯ ಬಿಕ್ಕಿ ಬಿಕ್ಕಿ ಅಳುತ್ತ, ಚಿತೆಯನ್ನು ಹಚ್ಚಿಸಿದ. ನಿಮಿಷಾರ್ಧದಲ್ಲಿ ಜ್ವಾಲೆ ಜ್ವಾಜ್ವಲ್ಯಮಾನವಾಗಿ ಉರಿಯಿತು. ೧೮೭೯ ನೇ ಇಸವಿ ಫೆಬ್ರುವರಿ ಹದಿಮೂರನೆಯ ತಾರೀಕು ಜನ್ಮತಾಳಿದ ಮಹಾಮಹಿಮಳೊಬ್ಬಳು ೧೯೪೯ ನೇ ಮಾರ್ಚಿ ಮೂರನೇ ತಾರೀಕು ಸಂಜೆ ಆರೂಕಾಲು ಗಂಟೆಗೆ ಸೂರ್ಯದೇವನೊಡನೆ ಅಸ್ತಂಗತಳಾದಳು! ಮೆಲ್ಲಮೆಲ್ಲನೆ ಕತ್ತಲು ಕವಿಯಿತು. ಇಂತು ಕಣ್ಮರೆಯಾಯಿತು ಇಪ್ಪತ್ತನೆಯ ಶತಮಾನದ 'ಅಸಮಾನ ಹಾಗೂ ಅಸದೃಶ' ವ್ಯಕ್ತಿ.

# ೨೦. ಶ್ರದ್ಧಾಂಜಲಿ

ದೇಶದಾದ್ಯಂತ ಎಲ್ಲಾ ರೀತಿಯ, ಎಲ್ಲಾ ಪಕ್ಷಗಳ ಜನರು, ಕವಿಗಳು, ಕಲಾವಂತರು, ಹಿರಿಯರು, ಕಿರಿಯರು, ಮುಖಂಡರು, ಹಿಂಬಾಲಕರು ತಮ್ಮ ಅನುತಾಪವನ್ನು ಸೂಚಿಸಿದರು. ರಾಜಾಜಿ ಹೀಗೆಂದು ನುಡಿದರು : "ನನ್ನ ಮಹಾ ತಂಗಿ, ನನ್ನ ಪ್ರೀತಿಯ ತಂಗಿ, ನಮ್ಮ ಸ್ನೇಹಿತೆ, ನಮ್ಮ ಸಹಪಾಠಿ, ಹೋದೆಡೆಯಲ್ಲೆಲ್ಲಾ ಶಾಂತಿ ಸಮಾಧಾನಗಳನ್ನು ಒಯ್ಯುತ್ತಿದ್ದ, ಈ ದೇಶದಲ್ಲಿಯೂ ಪರದೇಶದಲ್ಲಿಯೂ ಸರ್ವರಿಗೂ ಗೊತ್ತಿದ್ದ, ಪ್ರಪಂಚದ ಯಾರೊಡನಾದರೂ ಚರ್ಚಿಸಬಲ್ಲ, ಆಟ ಆಡಬಲ್ಲ, ಬಿರುಸಾಗಿ ಮಾತನಾಡ ಬಲ್ಲ ವ್ಯಕ್ತಿ ಇಂದು ಇಲ್ಲವಾಗಿದ್ದಾಳೆ.... ಅವಳು ಮಾಡಿದ್ದನ್ನು ಮತ್ತಾರೂ ಮಾಡಲಾರರು." ಸರ್ದಾರ್ ಪಟೇಲರು "ನೂರು ದೀಪಗಳನ್ನು ಒಂದೇ ಸಲ ಹಚ್ಚಿದಷ್ಟು ಪ್ರಕಾಶಮಾನವಾಗಿ ಬೆಳಗುತ್ತಿದ್ದ ವ್ಯಕ್ತಿ ಕಣ್ಮರೆಯಾ ಯಿತು" ಎಂದರು. "ಬಹು ಅದ್ಭುತವಾದ ಮಹಿಳೆ. ನನ್ನ ಜೀವಮಾನದ ಲ್ಲೆಲ್ಲಾ ಎಲ್ಲಿಯೂ ನೋಡದ ಅಸಾಧಾರಣ ಪ್ರತಿಭಾನ್ವಿತ ವ್ಯಕ್ತಿ" ಎಂದರು ಸಿ. ವಿ. ರಾಮನರು. ಉತ್ತರಪ್ರದೇಶದ ಅಸೆಂಬ್ಲಿಯು ಏಕ ಕಂಠದಿಂದ ಸರೋಜಿನಿದೇವಿಯವರ ಗುಣಗಾನ ಮಾಡಿತು. ಮಾರ್ಚಿ ಮೂರನೇ ತಾರೀಕು ರಾಜ್ಯವಿಧಾಯಕಸಭೆ (Constituent Assembly) ಯಲ್ಲಿ ಪ್ರಧಾನಿ ನೆಹರೂ ಅವರು ತಮ್ಮ ಅಕ್ಕನನ್ನು ಕುರಿತು ಹೀಗೆ ಹೇಳಿದರು :

"ನಾನು ಈ ಸಭೆಯ ಮುಖಂಡನಾದ್ದರಿಂದ ಭಾರತದ ಹೆಸರಾಂತ ಸ್ತ್ರೀ ಪುರುಷರ ನಿಧನವನ್ನು ಆಗಾಗ್ಯೆ ತಮಗೆ ತಿಳಿಸುವ ಬಹು ದುಃಖಕರ ವಾದ ಕರ್ತವ್ಯ ನನ್ನ ಪಾಲಿಗೆ ಬಂದಿದೆ. ಹೆಸರಾಂತ ಸ್ತ್ರೀಪುರುಷರ ಬಗ್ಗೆ ಮಾತನಾಡುವಾಗ ಅವರಂಥವರು ಮತ್ತೊಬ್ಬರು ಸಿಕ್ಕಲಾರರು, ಅವರ ಜಾಗವನ್ನು ತುಂಬುವುದು ಕಷ್ಟ ಎಂದು ಹೇಳುತ್ತೇವೆ. ಇದು ಒಂದು ದೃಷ್ಟಿಯಿಂದ ಸರಿ. ಆದರೆ ನಿನ್ನೆ ಮೃತಿ ಹೊಂದಿದ ಓರ್ವ ವ್ಯಕ್ತಿಯ ವಿಚಾರವನ್ನು ಹೇಳುವಾಗ ಅಂಥವರನ್ನು ನಾವು ಮತ್ತೊಮ್ಮೆ ಪಡೆಯ ಲಾರೆವು ಅಥವಾ ಕಾಣಲಾರೆವು ಎಂಬುದು ಪೂರ್ಣ ಸತ್ಯ.

"ಒಂದೂವರೆ ವರ್ಷ ಅಥವಾ ಅದಕ್ಕಿಂತ ಹೆಚ್ಚಾಗಿ ಅವರು ದೊಡ್ಡ

ಪ್ರಾಂತವೊಂದರ ಗೌರ್ನರಾಗಿ ತಮ್ಮ ಕೆಲಸವನ್ನು ಬಹು ಚೆನ್ನಾಗಿ ನಿರ್ವಹಿಸಿದ್ದರು, ಹೆಸರು ಗಳಿಸಿದ್ದರು. ಆದರೆ ಅವರು ಗೌರ್ನರಾಗಿ ಮಾಡಿದ ಕೆಲಸದ ಬಗ್ಗೆ ಮಾತನಾಡಲು ಇಚ್ಛಿಸುವುದಿಲ್ಲ ಏಕೆಂದರೆ ಅವರು ಸಾಮಾನ್ಯ ಗೌರ್ನರುಗಳಿಗಿಂತ ಬಹು ದೊಡ್ಡವರಾಗಿದ್ದರು. ನಿಖರವಾಗಿ ಅವರು ಎಂಥವರೆಂದು ಹೇಳುವುದು ಸ್ವಲ್ಪ ಕಷ್ಟ. ಏಕೆಂದರೆ ಅವರು ನಮ್ಮಲ್ಲಿ ಒಬ್ಬರಾಗಿಬಿಟ್ಟಿದ್ದರು. ನಮ್ಮೊಡನೆ ಬಹು ಹೆಚ್ಚಾಗಿ ಮಿಳಿತವಾದ ವ್ಯಕ್ತಿಯನ್ನು ಸರಿಯಾದ ದೃಷ್ಟಿಯಿಂದ ನೋಡುವುದು ಕಷ್ಟ. ಸರೋಜಿನಿದೇವಿಯ ಬಗ್ಗೆ ಹೇಳಬೇಕಾದರೆ ಎಷ್ಟೋ ವಿಶೇಷಣಗಳು ಬೇಕಾಗುತ್ತವೆ. ಅವರಲ್ಲಿ ಅನೇಕ ಗುಣಗಳಿದ್ದುವು. ಆದರೆ ಕೆಲವು ಅವರನ್ನು ವಿಶಿಷ್ಟ ವ್ಯಕ್ತಿಯನ್ನಾಗಿ ಮಾಡಿವೆ. ಅವರು ಪ್ರಜ್ವಲಿಸಿದ ಪ್ರಸಿದ್ಧ ವ್ಯಕ್ತಿ. ಕವಿಯಾಗಿ ಪ್ರಾರಂಭವಾದ ಅವರ ಬಾಳು ಕಾಗದ ಮಸಿಗಳಿಂದ ಕವಿತೆ ಕಟ್ಟುವುದನ್ನು ಬಿಟ್ಟು ಇಡೀ ಜೀವನವನ್ನೇ ಕಾವ್ಯಮಯವಾಗಿ, ಗಾನಮಯವಾಗಿ, ಮಾಡುವುದರಲ್ಲಿ ಪರ್ಯವಸಾನಗೊಂಡಿತು. ಅವರು ಮಾಡಿದ ಅದ್ಭುತ ಕೆಲಸವೆಂದರೆ ನಮ್ಮ ರಾಷ್ಟ್ರದ ಹೋರಾಟವನ್ನು ಕಲಾಮಯವಾಗಿ, ಕಾವ್ಯಮಯವಾಗಿ ಮಾಡಿದ್ದು. ನಮ್ಮ ರಾಷ್ಟ್ರಪಿತ ಸ್ವಾತಂತ್ರ್ಯ ಹೋರಾಟಕ್ಕೆ ನೀತಿಯ ಮಹಿಮೆಯನ್ನೂ ಮಹತ್ವವನ್ನೂ ತುಂಬಿದರೆ ಶ್ರೀಮತಿ ಸರೋಜಿನಿ ನಾಯಿಡು ಕಲಾಕೌಶಲ್ಯವನ್ನೂ ಕಾವ್ಯವನ್ನೂ ತುಂಬಿದರು. ಅಂತೆಯೇ ಜೀವನದಲ್ಲಿ ಆಸಕ್ತಿ, ಸೋಲೊಪ್ಪದ ಸ್ಥೈರ್ಯ ಮನಸ್ಸುಗಳನ್ನು ತುಂಬಿದರು. ರಾಜಕೀಯದಲ್ಲಿರುವವರಿಗೆ ಅಪ್ಪಟ ರಾಜಕೀಯದಿಂದ ಉನ್ನತಸ್ಥಾನಕ್ಕೇರಿಸುವ ಕಲೆ ಹೆಚ್ಚು ಬೆಲೆಯಾದದ್ದು.

"ಐವತ್ತು ವರ್ಷಗಳ ಅವರ ಬಹು ಚೇತನಮಯ ಜೀವಿತದಲ್ಲಿ ಅವರು ನಮ್ಮ ಸಾಂಸ್ಕೃತಿಕ ಹಾಗೂ ರಾಜಕೀಯ ಜೀವನದ ಮೇಲೆ ಪ್ರಭೆಯನ್ನು ಬೀರಿದ್ದಾರೆ. ಅವರು ಯಾವುದನ್ನು ಮುಟ್ಟಿದರೂ ಅದಕ್ಕೆ ತಮ್ಮ ಕಾವನ್ನು ಕೊಡುತ್ತಿದ್ದರು. ನಿಜವಾಗಿಯೂ ಅವರು ಬೆಂಕಿಯ ಕಂಬವಾಗಿದ್ದರು. ಅಂತೆಯೇ ಅವರು ಹರಿಯುವ ತಣ್ಣೀರಾಗಿದ್ದರು. ತಮ್ಮ ರಾಜಕೀಯದ ಕಾವಿಗೆ ಮಾನವೀಯತೆಯ ತಣ್ಣೀರೆರಚಿ ಮನಸ್ಸಿಗೆ ಆಹ್ಲಾದವನ್ನುಂಟು ಮಾಡುತ್ತಿದ್ದರು. ಒಟ್ಟಿನಲ್ಲಿ ಅವರ ಬಗ್ಗೆ ಮಾತನಾಡುವುದು ಕಷ್ಟ. ಇಷ್ಟು ಮಾತ್ರ ಒಪ್ಪಬೇಕು : ಘನವಾದ ಆತ್ಮವೊಂದಿತ್ತು, ಈಗ ಅದು ಇಲ್ಲವಾಗಿದೆ,

"ಅವರು ಭಾರತಕ್ಕಾಗಿ ದುಡಿದರು. ಅವರಿಗೆ ಕೆಲಸವೂ ಗೊತ್ತಿತ್ತು, ಆಟವಾಡುವುದೂ ಗೊತ್ತಿತ್ತು. ಅದು ಬಹು ಅದ್ಭುತವಾದ ಸಮ್ಮಿಲನ. ಸಮ್ಮಿಲನವೆಂಬ ಮಾತು ಬಂದಾಗ ಹೇಳಲೇಬೇಕಾಗುತ್ತದೆ—ಅವರಲ್ಲಿ ಸಮ್ಮಿಲನವಾಗಿದ್ದ ಪೂರ್ವ ಪಶ್ಚಿಮಗಳ ಸಂಸ್ಕೃತಿಯನ್ನು. ನಮ್ಮ ರಾಷ್ಟ್ರಪಿತನೂ ಈ ಮಹಾ ಮಹಿಳೆಯೂ ನಮ್ಮ ರಾಷ್ಟ್ರದ ಚಳುವಳಿಯನ್ನು ಬಹು ಶಕ್ತಿಯುತವಾಗಿ ರೂಪಿಸಿದರು. ಈ ಮಹಿಳೆಯ ಪಾತ್ರ ಹೊರಗಡೆಗೆ ಹೆಚ್ಚು ಕಾಣಲಿ ಕಾಣದಿರಲಿ. ಆದರೆ ಇತರರಿಗೆ ಕಾಣದಂತೆ ವಹಿಸಿದ ಪಾತ್ರ ಅಮೋಘವಾದುದು. ಭಾರತದ ಐಕ್ಯತೆಗಾಗಿ, ಸಾಂಸ್ಕೃತಿಕ ಹಾಗೂ ಭೌಗೋಳಿಕ ಐಕ್ಯತೆಗಳಿಗಾಗಿ, ಅವರಷ್ಟು ದುಡಿದವರು ಇಡೀ ಭಾರತದಲ್ಲಿ ಯಾರೂ ಇಲ್ಲ. ಅದು ಅವರ ಹುಚ್ಚಾಗಿತ್ತು. ಅವರ ಜೀವನದಲ್ಲಿ ಹಾಸುಹೊಕ್ಕಾಗಿ ಹೆಣೆದುಕೊಂಡಿತ್ತು. ಭಾರತದ ಹೊರಗಡೆ ನಮ್ಮ ಸಂಸ್ಕೃತಿಯ ವ್ಯಾಖ್ಯಾಕಾರರಾಗಿದ್ದರು. ಒಳಗಡೆ ಪಾಶ್ಚಾತ್ಯರ ಸಂಸ್ಕೃತಿಯ ವ್ಯಾಖ್ಯಾಕಾರರಾಗಿದ್ದರು. ಅವರು ಆದರ್ಶ ರಾಯಭಾರಿಯಾಗಿದ್ದರು. ಪೂರ್ವ ಪಶ್ಚಿಮಗಳನ್ನು ಸೇರಿಸುವ ಸರಪಣಿಯಾಗಿದ್ದರು. ಭಾರತದ ವಿವಿಧ ಭಾಗಗಳನ್ನೂ ಗುಂಪುಗಳನ್ನೂ ಒಕ್ಕೂಡಿಸುವ ಸ್ನೇಹಿತರಾಗಿದ್ದರು. ಇಂತಹ ವ್ಯಕ್ತಿಯನ್ನು ಈಗಾಗಲೀ ಮುಂದಾಗಲೀ ಕಾಣುವುದೆಂತು ಅನ್ನಿಸುತ್ತಿದೆ ನನಗೆ. ಮಹಾ ಮಹಿಳೆಯರನ್ನಾಗಲೀ ಮಹನೀಯರನ್ನಾಗಲೀ ಸೃಷ್ಟಿಸಲು ಅಸಾಧ್ಯವಾದಷ್ಟು ಬಂಜೆಯಲ್ಲ ಭಾರತ. ನಮ್ಮ ಕಣ್ಣು ಮುಂದೆಯೇ ಅಂಥಹ ಎಷ್ಟೋ ಜನರನ್ನು ಸೃಷ್ಟಿಸಿದೆ. ಆದರೆ ಸರೋಜಿನಿಯಂತಹ ವ್ಯಕ್ತಿಯನ್ನು ಭಾರತ ಸೃಷ್ಟಿಸಲು ಸಾಧ್ಯವೆಂದು ನಾನು ನಂಬಲಾರೆ."

ಅಹುದು! ಸರೋಜಿನಿದೇವಿಯಂತಹ ವ್ಯಕ್ತಿ ಮತ್ತೊಮ್ಮೆ ಈ ಭಾರತದಲ್ಲಿ ಹುಟ್ಟುವುದು ಸಂದೇಹ. ಸ್ವಾಮಿ ವಿವೇಕಾನಂದರು ಸಾಯುವ ದಿನ ತಮ್ಮಲ್ಲಿಯೇ ತಾವು ಅಂದುಕೊಂಡರಂತೆ: 'ಇನ್ನೊಬ್ಬ ವಿವೇಕಾನಂದನು ಇದ್ದಿದ್ದರೆ, ಅವನಿಗೆ ತಿಳಿಯುತ್ತಿತ್ತು, ಈ ವಿವೇಕಾನಂದನು ಏನು ಮಾಡಿದ್ದಾನೆ ಎಂದು!' ಹಾಗೆಯೇ ಸರೋಜಿನಿದೇವಿ ಏನು ಮಾಡಿದ್ದಾರೆ ಎಂಬುದನ್ನು ತಿಳಿಯಲು ಮತ್ತೊಬ್ಬ ಸರೋಜಿನಿದೇವಿಯ ಜನ್ಮವಾಗಬೇಕಾಗಿದೆ. ಆದರೆ—ಕಾಲಾಂತರದಲ್ಲಿ ಸರೋಜಿನಿದೇವಿಯಂಥವರು ಇನ್ನೆಷ್ಟು ಜನ ಹುಟ್ಟುವರು!

---

# ಗ್ರಂಥ ಋಣ


ಕನ್ನಡ :

ಕುವೆಂಪು—ಸ್ವಾಮಿ ವಿವೇಕಾನಂದ.

ನಾಡಿಗ ಕೃಷ್ಣಮೂರ್ತಿ—ಸರೋಜಿನಿ ನಾಯ್ಡು.

ಮಹಾತ್ಮ ಗಾಂಧಿ—ಸತ್ಯಶೋಧನೆ

ಹಿಂದಿ :

ರಾಮನಾಥ 'ಸುಮನ್'—ಹಮಾರೆ ನೇತಾ

ಇಂಗ್ಲಿಷ್ :

Dhanapala—Eminent Indians.

Eleanor Morton—Women Behind Mahatma Gandhi.

Gandhi—Speeches and Writings.

Harindranath Chattopadhyaya—Life and Myself.
My Sister ; (My Magazine—March 1957)

Margaret E. Cousins—Awakening of Asian Womanhood.

Nehru—A Bunch of old Letters.

Nehru—An Autobiography.

Nehru—Independance and After.

Padmini Sen Gupta—Pioneer Women of India.

Pattabhi Sitaramayya—The History of the Congress.

Pyarelal—Mahatma Gandhi—The Last Phase.

Rajendra Prasad—Autobiography.

Sarojini Naidu—The Golden Threshold.

Sarojini Naidu—The Bird of Time.

Sarojini Naidu—The Broken Wing.

Subramanya Ayyar—Sarojini Devi.

Tendulkar—Mahatma

G. Venkatachalam—Profiles.

Great Women of India—The Holy Mother Birth Centenary Memorial Publication, Ramakrishnashrama.
Women of Modern India—Oxford University Press.
Women of India—The National Council of Women of India.
Roshni—Journal of the All India Women's Conference May 1957
The Calcutta Review (Vol. 112-113.)
Modern Review (Vol. 34, 39, 86)

# ಈ ಲೇಖಕರ ಇತರ ಕೃತಿಗಳು

## ೧. ಕೆನಿಲ್ ವರ್ತ್

ಇಂಗ್ಲಿಷ್ ಸಾಹಿತ್ಯದಲ್ಲಿ ಹೆಸರಾಂತ ಸರ್ ವಾಲ್ಟರ್ ಸ್ಕಾಟ್ ಕಾದಂಬರಿಕಾರನ ಸುಪ್ರಸಿದ್ಧ ಕೃತಿಯ ಕನ್ನಡ ಅನುವಾದ. ಮೂಲದಲ್ಲಿ ಬರುವ ಸುದೀರ್ಘವಾದ ವರ್ಣನೆಗಳನ್ನು ಕತ್ತರಿಸಿ, ಕೃತಿಯನ್ನು ಸುಂದರವಾಗಿ ಸಂಗ್ರಹಿಸಿದೆ. ಕವಿಯ ಭಾವ ಚಿತ್ರ, ಪರಿಚಯಗಳನ್ನೊಳಗೊಂಡ ಈ ಗ್ರಂಥ ಮುದ್ದಾಗಿ ಅಚ್ಚಾಗಿದೆ.

ಬೆಲೆ : ಮೂರು ರೂಪಾಯಿ

## ೨. ಮಾರ್ಕೋ ಪೋಲೋ ಪ್ರವಾಸ ಕಥನ

ಕೊಲಂಬಸ್ ಅಮೆರಿಕಾ ದೇಶವನ್ನು ಕಾಣುವ ಮೊದಲೇ, ಜನಗಳು ಬೈಸಿಕಲ್ಲು, ಮೋಟಾರು, ರೈಲು, ವಿಮಾನಗಳನ್ನು ಕನಸಿನಲ್ಲಿಯೂ ಕಾಣದ ಮೊದಲೇ, ಇಟಲಿದೇಶದ ಮಾರ್ಕೊ ಪೋಲೋ ಎಂಬುವನು ಏಳುನೂರು ವರ್ಷಗಳ ಹಿಂದೆ ತನ್ನ ದೇಶದಿಂದ ಹೊರಟು ಟರ್ಕಿ, ಇರಾಕ್, ಚೈನಾ, ಇಂಡಿಯಾ ಮುಂತಾದ ದೇಶಗಳಲ್ಲಿ ಪ್ರಯಾಣ ಮಾಡಿದಾಗ ಕಂಡ ಅದ್ಭುತ ವಿಷಯಗಳ ವಾಸ್ತವ ವರ್ಣನೆಯನ್ನು ಈ ಗ್ರಂಥದಲ್ಲಿ ಕಾಣಬಹುದು. ಸುಮಾರು ಇಪ್ಪತ್ತೈದು ವರ್ಷಗಳ ಕಾಲ ಮಂಗೋಲ್ ಚಕ್ರವರ್ತಿ ಕುಬ್ಲಾಯಿಖಾನನ ಆಸ್ಥಾನದಲ್ಲಿದ್ದು ಕಣ್ಣಾರೆ ಕಂಡ ಅವನ ರಾಜ್ಯಭಾರ ಕ್ರಮವನ್ನೂ, ಅವನ ಅತುಳೈಶ್ವರ್ಯದ ವೈಭವ, ಅಟ್ಟಹಾಸಗಳನ್ನೂ ಇಲ್ಲಿ ಕಾಣಬಹುದು. ಓದಲು ಮನಸ್ಸುಮಾಡಿದರೆ ಮುಚ್ಚಲು ಮನಸ್ಸುಬಾರದ ಅದ್ಭುತರಮ್ಯ ಪ್ರವಾಸ ಕಥೆ:

ಬೆಲೆ : ಎರಡೂವರೆ ರೂಪಾಯಿ

ದೊರೆಯುವ ಸ್ಥಳ :

ಶಾರದಾ ಮಂದಿರ : ರಾಮಯ್ಯರ್ ರಸ್ತೆ : ಮೈಸೂರು

## ೩. ಪ್ರವಾಸಿಗಳು ಕಂಡ ಭಾರತ

(ಸಿದ್ಧವಾಗುತ್ತಿದೆ)

ಕಳೆದ ಸುಮಾರು ೨೫೦೦ ವರ್ಷಗಳ ದೀರ್ಘಕಾಲದಲ್ಲಿ ಭಾರತಕ್ಕೆ ಬಂದ ವಿದೇಶೀಯರು ಕಂಡು ಕೇಳಿದ ಬಹು ಸ್ವಾರಸ್ಯ ವಿಚಾರಗಳನ್ನು ತಿಳಿಸುವ ಉದ್ಗ್ರಂಥ. ಮೆಗಾಸ್ತನೀಸ್, ಫಾಹಿಯಾನ್, ಹುಯೆನತ್ಸಾಂಗ್, ಆಲ್ಬರೂನಿ, ಮಾರ್ಕೊಪೋಲೊ, ಅಬ್ದುಲ್‌ರಜಾಕ್ ಇವರೇ ಮೊದಲಾದ ನಾನಾ ದೇಶಗಳ ಪ್ರವಾಸಿಗಳು ಕಂಡ ಭಾರತದ ಗತವೈಭವದ ವಾಸ್ತವ ಚಿತ್ರವನ್ನಿಲ್ಲಿ ಕಂಡು ಆನಂದಿಸಬಹುದು. ಬೌದ್ಧ, ಜೈನ ಹಾಗೂ ಹಿಂದೂಮತಗಳ ಉನ್ನತಿಯ ಮತ್ತು ಅವನತಿಯ ಇತಿಹಾಸವನ್ನೂ ಆಯಾ ಕಾಲಗಳ ಸಾಮಾಜಿಕ, ರಾಜಕೀಯ ಸಾಂಸ್ಕೃತಿಕ ಮತ್ತು ಆರ್ಥಿಕ ವಿಚಾರಗಳನ್ನೂ ಈ ದೊಡ್ಡ ಗ್ರಂಥದಲ್ಲಿ ಕಾಣಬಹುದು.

ಕನ್ನಡ ಸಾಹಿತ್ಯದಲ್ಲೇ ಅಪೂರ್ವವಾದ ಗ್ರಂಥವಿದು.